## ಜೈನ ಯುವಕ ಸಂಘ, ಪುತ್ತೂರು, ದಕ್ಷಿಣ ಕನ್ನಡ.

### ಇಲ್ಲಿ ದೊರೆಯುವ ಗ್ರಂಥಗಳು.

| ಗ್ರಂಥ | ರೂ. ಆ. ಪೈ. |
|---|---|
| ಭರತೇಶವೈಭವ ಭಾಗ ೧ (ಭೋಗವಿಜಯ) | |
| ಪೂರ್ಣ ಕ್ಯಾಲಿಕೋ ಪ್ರತಿ | ೨—೦—೦ |
| ರಟ್ಟಿ ಬೈಂಡ್ ಪ್ರತಿ | ೧—೮—೦ |
| ಭರತೇಶವೈಭವ ಭಾಗ ೨ (ದಿಗ್ವಿಜಯ) | |
| ಪೂರ್ಣ ಕ್ಯಾಲಿಕೊ ಆರ್ಟ್ಪೇಪರ್ ಪ್ರತಿ | ೩—೦—೦ |
| ,, ಊಚು ಕಾಗದ ಪ್ರತಿ | ೨—೮—೦ |
| ರಟ್ಟಿ ಬೈಂಡ್ ಊಚು ಕಾಗದ ಪ್ರತಿ | ೧-೧೨—೦ |
| ಭರತೇಶವೈಭವ ತೃತೀಯಭಾಗ (ಯೋಗವಿಜಯ ಇತ್ಯಾದಿ) | |
| ಪೂರ್ಣ ಕ್ಯಾಲಿಕೊ ಆರ್ಟ್ಪೇಪರ್ ಪ್ರತಿ | ೩—೦—೦ |
| ,, ಊಚು ಕಾಗದ ಪ್ರತಿ | ೨—೦—೦ |
| ರಟ್ಟಿ ಬೈಂಡ್ ಊಚು ಕಾಗದ ಪ್ರತಿ | ೧—೮—೦ |
| ಭರತೇಶವೈಭವ (ಮೂರು ಭಾಗಗಳು ಕೂಡಿರುವ ಪುಸ್ತಕ) | |
| ಪೂರ್ಣ ಕ್ಯಾಲಿಕೊ | ೫—೦—೦ |
| ರಟ್ಟಿ ಬೈಂಡ್ | ೪—೦—೦ |
| ನಿರಂಜನ ಸ್ತುತಿ ಆರ್ಟ್ ಪೇಪರ್ ಕ್ಯಾಲಿಕೊ | ೦—೮—೦ |
| ,, ,, ಊಚು ಕಾಗದ ರಟ್ಟಿ ಬೈಂಡ್ | ೦—೬—೦ |
| ,, ,, ಸಾಧಾರಣ ಕಾಗದ ಪ್ರತಿ | ೦—೪—೦ |
| ಸುಲೋಚನಾಸ್ವಯಂವರ—ಶಾಲಾವಿದ್ಯಾರ್ಥಿಗಳ ಪ್ರಯೋಜನಾರ್ಥವಾಗಿ ಟಿಪ್ಪಣಿ ಸಹಿತ ಮುದ್ರಿತವಾದ ಭರತೇಶವೈಭವದೊಳಗಣ ಒಂದು ಕಥೆ | ೦—೪—೦ |







ರತ್ನಾಕರಕವಿಕೃತ

# ಭರತೇಶವೈಭವ

## ತೃತೀಯ ಭಾಗ

# ಯೋಗವಿಜಯ, ಮೋಕ್ಷವಿಜಯ, ಅರ್ಕಕೀರ್ತಿವಿಜಯ.


**ಉಗ್ರಾಣ ಮಂಗೇಶರಾವ್,**

ಅಧ್ಯಾಪಕ ಬೋರ್ಡ್ ಹೈಸ್ಕೂಲ್, ಪುತ್ತೂರು

ಇವರಿಂದ ಪರಿಶೋಧಿಸಲ್ಪಟ್ಟು



ಮಂಗಳೂರು ಕೆನರಾ ಛಾಪಖಾನೆಯಲ್ಲಿ ಮುದ್ರಿತವಾಗಿ

**ಜೈನಯುವಕಸಂಘದವರಿಂದ ಪ್ರಕಟಿಸಲ್ಪಟ್ಟಿತು.**

೧೯೨೫.

ಕವಿ ವಿಬುಧರ ಕಿವಿಯೊಳ್ಸು ।
ಸುವ ನವರಸಮಿಳಿದು ತೀವಿ ತನುವಂ ಮನವಂ ॥
ಕವಿದು ಪೊರಸೂಸಿತೆನೆ ಪೊ ।
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯುಂ ॥

— ಷಡಕ್ಷರಿದೇವ



# ವಿಜ್ಞಾಪನೆ.

ಇದು ಭರತೇಶವೈಭವದ ತೃತೀಯ ಹಾಗೂ ಕೊನೆಯ ಭಾಗವು. ಇದರೊಳಗೆ ಈ ಮಹಾಕಾವ್ಯದ ತೃತೀಯ ಚತುರ್ಥ ಪಂಚಮ ಕಲ್ಯಾಣಗಳಾದ ಯೋಗವಿಜಯ, ಮೋಕ್ಷವಿಜಯ, ಅರ್ಕಕೀರ್ತಿವಿಜಯಗಳು ಅಡಕವಾಗಿವೆ. ವಿಸ್ತರವಾದ ಆ ಗ್ರಂಥವನ್ನು ಪ್ರಕಟಿಸುವ ನಮ್ಮ ಸಂಕಲ್ಪವು ಸಹೃದಯರಾದ ವಾಚಕರ ಪ್ರೋತ್ಸಾಹಕ್ಕಿಂತಲೂ ಅತಿಶಯವಾಗಿ ಸಂಘದ ಪರಿಪೋಷಕರ ಔದಾರ್ಯದಿಂದಲೇ ಈಡೇರಿತೆಂದು ಒಪ್ಪಿಕೊಳ್ಳದಿರಲಾರೆವು.

ಕನ್ನಡ ಸಾಹಿತ್ಯದ ಈಗಣ ಪರಿಸ್ಥಿತಿಯಲ್ಲಿ ಇಂತಹ ಉದ್ಗ್ರಂಥಗಳಿಗೆ ತಕ್ಕ ಪ್ರೋತ್ಸಾಹವು ದೊರಕುವುದೆಂದು ನಂಬುವುದು ತಪ್ಪೆಂದು ನಮ್ಮ ಕೆಲವು ಹಿತಚಿಂತಕರು ನಮ್ಮನ್ನು ಮುಂದಾಗಿ ಎಚ್ಚರಿಸಿದ್ದರು. ಆದರೂ ಹಿಡಿದ ಗ್ರಂಥದ ಚಿತ್ತಾಕರ್ಷಣಶಕ್ತಿಯಲ್ಲಿಯೂ ಕನ್ನಡಿಗರ ಸಾಹಿತ್ಯಾಭಿರುಚಿಯಲ್ಲಿಯೂ ನಮಗಿದ್ದ ವಿಶ್ವಾಸವು ಪ್ರಕಾಶನಕಾರ್ಯಕ್ಕೆ ತಕ್ಕ ಧೈರ್ಯವನ್ನು ಕೊಟ್ಟಿತು. ನಮ್ಮ ಅನುಭವವು ಮಾತ್ರ ನಮ್ಮ ಕೋರಿಕೆಯಂತಿರದೆ ನಮ್ಮ ಸ್ನೇಹಿತರ ಹಿತೋಕ್ತಿಯಲ್ಲಿಯೆ ಹೆಚ್ಚಿನ ನಂಬಿಕೆಯನ್ನು ಹುಟ್ಟಿಸತಕ್ಕದಾಗಿದೆ. ಭಾಷಾಭಿಮಾನಿಗಳಾದ ಜೈನ ಬಂಧುಗಳು, ಸಂಘದ ಯುವಕರು ಮಾಡಿದ ಸೇವೆಯನ್ನು ಮೆಚ್ಚಿ ಮಧ್ಯೆ ಕೈಗೊಟ್ಟು ನಡಿಸದೆ ಇದ್ದಿದ್ದರೆ ನಮ್ಮ ಮನೋರಥವು ಮುಂದುವರಿಯದೆ, ಸಾಹಿತ್ಯಸೇವೆಯಲ್ಲಿ ನಮಗಿದ್ದ ಉತ್ಸಾಹವು ಕುಂದಿಹೋಗುವುದರಲ್ಲಿ ಸಂದೇಹವಿರಲಿಲ್ಲ. ಆದುದರಿಂದ ಅವರ ಮಹದುಪಕಾರವನ್ನು ಇಲ್ಲಿ ಸ್ಮರಿಸದಿರಲಾರೆವು.

ನಮ್ಮ ಸಾಹಿತ್ಯದ ಜೀವನವು ಶಾಲಾವಿದ್ಯಾರ್ಥಿಗಳ ಮೇಲೆಯೆ ಅವಲಂಬಿಸಿರಬೇಕಾದರೆ, ಪಠ್ಯಪುಸ್ತಕವಾಗಲ್ಲದೆ ಒಂದು ಗ್ರಂಥವು ಬದುಕಲಾರದಾದರೆ ನಮ್ಮ ಸಾಹಿತ್ಯದ ಶುಭೋದಯಕಾಲವು ಇನ್ನೂ ಪ್ರಾಪ್ತವಾಗಿಲ್ಲವೆನ್ನಬೇಕಾಗುವುದಲ್ಲವೆ? ಏತಕ್ಕೆಂದರೆ, ''ಕನ್ನಡ ಸಹಕಾರಿ'' ಅಭಿಪ್ರಾಯಪಟ್ಟಂತೆ, ''ಕನ್ನಡ ಸಾಹಿತ್ಯಪ್ರಕಾಶನಕಾರ್ಯವು ಬಹಳ ಮಟ್ಟಿಗೆ ಶಾಲಾವಿದ್ಯಾರ್ಥಿಗಳನ್ನು ಬಲೆಯೊಳಗೆ ಹಾಕಿ ಲಾಭ ಹೊಡೆಯುವ ಗೊಂದಲದಲ್ಲಿಯೇ ಹಾಳಾಗಿಹೋಯಿತು.'' ಜನರ ಪ್ರೋತ್ಸಾಹವನ್ನು ನಂಬಿ ಹೇರಳ ಹಣವನ್ನು ವೆಚ್ಚ ಮಾಡಿ ಗ್ರಂಥವನ್ನು ಸಮಗ್ರವಾಗಿ ಪ್ರಕಟಿಸಿ ನಷ್ಟಪಡುವುದಕ್ಕಿಂತಲೂ ಮುಖ್ಯವಾದ ಭಾಗಗಳನ್ನು ಶಾಲಾವಿದ್ಯಾರ್ಥಿಗಳ ಬಗ್ಗೆ ಪ್ರಕಾಶಪಡಿಸಿ ಸಂಘಕ್ಕೆ ಲಾಭಮಾಡಬಹುದೆಂದು ಕೆಲವರು ಸೂಚಿಸಿದ್ದರೂ ಲಾಭದ ಕಡೆಗೆ ಲಕ್ಷ್ಯಗೊಡದೆ ಸಾಹಿತ್ಯಾಭಿರುಚಿಯನ್ನು ಶಾಲಾವಿದ್ಯಾರ್ಥಿಗಳಲ್ಲವಾದವರಲ್ಲಿಯೂ ಹುಟ್ಟಿಸುವ ಉದ್ದೇಶದಿಂದ ಸಮಗ್ರಕಾವ್ಯವನ್ನು ಅದರ ಯೋಗ್ಯತೆಗೆ ತಕ್ಕಂತೆ ಉತ್ತಮ ಕಾಗದ ರಕ್ಷಾಪತ್ರ ವಿಮರ್ಶಾತ್ಮಕವಾದ ಪೀಠಿಕಾಸಹಿತವಾಗಿ ಮುದ್ರಿಸಿ ಕನ್ನಡಿಗರಿಗೆ ಒಪ್ಪಿಸಿರುತ್ತೇವೆ.

ಗ್ರಂಥ ಪ್ರಚಾರಕ್ಕೆ ಅದರ ಅಸಾಧಾರಣವಾದ ಕ್ರಯವು ಅಭ್ಯಂತರವಾಗಿದೆ ಎಂದು ಕೆಲವರು ಸೂಚಿಸಿರುವರು. ಕನ್ನಡ ಗ್ರಂಥಗಳ ಮುದ್ರಣವನ್ನು ಕುರಿತು ವಿದ್ಯಾವಂತರಲ್ಲಿದ್ದ ಅಸಮಾಧಾನವನ್ನು ಹೋಗಲಾಡಿಸುವ ಉದ್ದೇಶದಿಂದ ಮುದ್ರಣದ ಅಂದಚಂದಕ್ಕೆ ನಾವು ಹೆಚ್ಚಿನ ಗಮನಕೊಟ್ಟುದರಿಂದ ಪ್ರಥಮ ಭಾಗದ ಕ್ರಯವು ಹಾಗಲ್ಲದೆ ಇರುವುದಕ್ಕೆ ಸಾಧ್ಯವಾಗಲಿಲ್ಲ. ದ್ವಿತೀಯ ಭಾಗದ ಮುದ್ರಣಕಾಲದಲ್ಲಿ, ಪೋಷಕರ ಧನಸಹಾಯವು ಒದಗಿದುದರಿಂದ ಪ್ರಥಮ ಭಾಗಕ್ಕಿಂತ ನೂರಾರು ಪುಟ ಹೆಚ್ಚಿಗೆ ಇದ್ದರೂ ಮೊದಲಿನಷ್ಟೆ ಕ್ರಯಕ್ಕೆ ದೊರಕಿಸುವದಕ್ಕೆ ಸಾಧ್ಯವಾಯಿತು. ಆದರೂ ಹಲವರು, ಮುಖ್ಯವಾಗಿ ವಿದ್ಯಾರ್ಥಿಗಳು, ಕ್ರಯದಲ್ಲಿ ಇನ್ನೂ ರಿಯಾಯಿತಿಯನ್ನು ಅಪೇಕ್ಷಿಸುವುದರಿಂದ ಕೇವಲ ಗ್ರಂಥ ಪ್ರಚಾರದೃಷ್ಟಿಯಿಂದ ಪುಸ್ತಕದ ಕ್ರಯವು ತಗ್ಗಿಸಲಾಗಿದೆ. ಸಂಘವು ಸಾಹಿತ್ಯಸೇವೆಗೆ ಮಹಾಜನಗಳಿಂದ ತಕ್ಕ ಪ್ರೋತ್ಸಾಹವನ್ನು ಎದುರು ನೋಡುತ್ತಲಿದೆ.

ಪ್ರಕಟನಾಕಾರ್ಯವು ಬಹಳ ಜವಾಬುದಾರಿಯ ಕೆಲಸವಾಗಿದೆ. ದಿಗ್ವಿಜಯ ಕಲ್ಯಾಣದೊಳಗಣ ಸ್ತ್ರೀರತ್ನ ಸಂಭೋಗಸಂಧಿಯ ನೂರಾರು ಪದ್ಯಗಳನ್ನು ಲೋಪಮಾಡಿದುದು ಸಮರ್ಪಕವಾಗಲಿಲ್ಲವೆಂದು ಹಲವರ ಅಭಿಪ್ರಾಯಗಳು ಬಂದಿವೆ. ಪ್ರಕಾಶಕರು ಆ ಭಾಗದಲ್ಲಿ ಸ್ವಾತಂತ್ರ್ಯ ವಹಿಸಿದುದು ಸಮಂಜಸವೆನಿಸ

ಲಿಲ್ಲವೆಂದು ಒಬ್ಬ ವಿಮರ್ಶಕರು ಒತ್ತಿ ಹೇಳಿರುವರು. ಶೃಂಗಾರ ವರ್ಣನೆಯಲ್ಲಿ ಔಚಿತ್ಯದ ಮೇರೆ ಮೀರಿದ ಆ ಪದ್ಯಗಳನ್ನು ಬಿಡುವುದರಲ್ಲಿ ಪ್ರಕಾಶಕರು ಪರಿಶೋಧಕರ ಮತ್ತು ಕೆಲವು ಹಿತಚಿಂತಕರ ಅಭಿಪ್ರಾಯವನ್ನು ಮನ್ನಿಸಿದರೇ ಹೊರತು ತಮ್ಮ ಅಧಿಕಾರವನ್ನು ವಿನಿಯೋಗಿಸಲಿಲ್ಲವೆಂದು ಇಲ್ಲಿ ತಿಳಿಸುವುದು ಅಗತ್ಯವಾಗಿದೆ. ಆದರೆ ಈಗ ಹಲಕೆಲವರು ನಮ್ಮ ಕಾರ್ಯಾಲಯಕ್ಕೆ ಬಂದು, ಬಿಟ್ಟ ಭಾಗಗಳನ್ನು ಮೂಲಪ್ರತಿಗಳಿಂದ ಬರೆದು ಕೊಂಡು ಹೋಗುವುದನ್ನು ಎಣಿಸಿದರೆ ಅದನ್ನು ಸೇರಿಸುವುದೇ ಉತ್ತಮವಾಗಿದ್ದಿತೆಂದು ತಿಳಿಯಬೇಕಾಗುವುದು.

ಔಚಿತ್ಯದ ಮೇರೆಯು ವಿಷಯದಲ್ಲಿ ಭಿನ್ನಾಭಿಪ್ರಾಯಗಳಿಗೆ ತುಂಬ ಅವಕಾಶವಿದೆ. ಅದರಲ್ಲಿ ಯಾವನೊಬ್ಬನೂ ತನ್ನ ಅಭಿಪ್ರಾಯವೇ ಮೇಲೆಂದು ವಾದಿಸುವ ಕೆಲಸವಿಲ್ಲ. "ಇಂಗ್ಲೀಷ್ ಸಾಹಿತ್ಯದಲ್ಲಿ ಔಚಿತ್ಯದ ಮೇರೆಯನ್ನು ಮೀರಿದ ದೃಷ್ಟಾಂತಗಳನ್ನು ಸ್ಪೆನ್ಸರ್ ಬೈರನ್ ಕವಿಗಳ ಕೃತಿಗಳಲ್ಲಿ ನೋಡಬಹುದು. ಷೇಕ್ಸ್ ಪಿಯರ್ ಕವಿಯ ನಾಟಕಗಳಲ್ಲಿ ಕೂಡ ಅನೌಚಿತ್ಯವು ಕೆಲವು ಕಡೆಗಳಲ್ಲಾದರೂ ಹಣಿಕಿ ನೋಡುತ್ತಲಿದೆ. ಆದರೆ ಅಂಥಾ ಅಂಶಗಳನ್ನು ತೀರಾ ಲೋಪಮಾಡಿ ಮುದ್ರಿಸುವ ದುರ್ದಶೆಯು ಮಾತ್ರ ಇಂಗ್ಲಿಷ್ ಸಾಹಿತ್ಯಕ್ಕೆ ಪ್ರಾಪ್ತವಾಗಲಿಲ್ಲ"ವೆಂದು "ಕನ್ನಡ ಸಹಕಾರಿ" ಹೇಳಿದುದನ್ನು ನಾವು ಒಪ್ಪಿಕೊಳ್ಳುವೆವು. ಸಾಹಿತ್ಯ ದೃಷ್ಟಿಗೆ ಮೆಚ್ಚುವಂತೆ ವರ್ತಿಸಬೇಕಾದುದು ನ್ಯಾಯವಾದುದರಿಂದ ಗ್ರಂಥಕ್ಕೆ ಪುನರ್ಮುದ್ರಣ ಸಂದರ್ಭವು ಒದಗಿದಾಗ ಆ ಭಾಗವನ್ನು ಸೇರಿಸುವ ಆಲೋಚನೆಯನ್ನು ಪುನಃ ಮಾಡುವೆವು.

ಎರಡು ವರ್ಷಗಳ ಕೆಳಗೆ ಅಧಿಕೋತ್ಸಾಹದಿಂದ ಪ್ರಾರಂಭಿಸಿದ ಈ ಗ್ರಂಥಪ್ರಕಾಶನ ಕಾರ್ಯವು ಪರಿಶೋಧಕರ ಶ್ರದ್ಧೆಯಿಂದಲೂ ಸ್ನೇಹಿತರ ಸಹಾಯದಿಂದಲೂ ರಸಿಕಜನರ ಪ್ರೋತ್ಸಾಹದಿಂದಲೂ ಜೈನ ಬಂಧುಗಳ ಬೆಂಬಲದಿಂದಲೂ ಛಾಪಖಾನೆಯವರ ಸಹನೆಯಿಂದಲೂ ಪರಮಾತ್ಮನ ಅಪಾರ ಕೃಪೆಯಿಂದಲೂ ಸಾಂಗವಾಗಿ ನೆರವೇರಿದುದಕ್ಕೆ ಸಂಘವು ಅವರೆಲ್ಲರಿಗೂ ಕೃತಜ್ಞತೆಯನ್ನು ತೋರುವುದು.

ಜೈನಯುವಕಸಂಘ,
ಪುತ್ತೂರು,
ಮಹಾವೀರ ಶಕ ೨೪೫೧,
ಶ್ರಾವಣ.

ಇತಿ ಸಜ್ಜನವಿಧೇಯ,
ಬಿಲಿಯೂರು ತಿಮ್ಮಯ್ಯ ಆರಿಗ,
ಕಾರ್ಯದರ್ಶಿ.

# ವಿಷಯಾನುಕ್ರಮಣಿಕೆ.



# ಭರತೇಶವೈಭವ

## ಶ್ರೀ ಸ್ತ್ರಾರೋಹಸಂಧಿ

ಪರಮಪರಂಜ್ಯೋತಿ ಕೋಟಿಚಂದ್ರಾದಿತ್ಯ । ಕಿರಣಾ ಸುಜ್ಞಾನಪ್ರಕಾಶಾ ॥
ಸುರರ ಮಕುಟಮಣಿರಂಜಿತಚರಣಾಬ್ಜ । ಶರಣಾಗು ಪ್ರಥಮಜಿನೇಶಾ ॥ ೧ ॥

ರಾಗಾದಿಪರಿಭವವಿಲ್ಲಾಗಿ ತ್ರಿಕರಣ । ಯೋಗವಿದ್ದರು ಬಂಧವಳಿದ ॥
ಯೋಗವಿಜಯನೆ ಸನ್ಮತಿದೋರು ಶ್ರೀವೀತ । ರಾಗಾ ನಿರಂಜನಸಿದ್ಧಾ ॥ ೨ ॥

ಶತ್ರುಗಳಿಲ್ಲವೆಂಬಂತೆ ಷಟ್ಖಂಡದ । ಧಾತ್ರೀಪಾಲರ ಗೆಲ್ದು ಚಕ್ರಿ ॥
ಮಿತ್ರಭಾವದೊಳಾಳುತಿರ್ದನುರ್ವಿಯನೇಕ । ಛತ್ರದೊಳೇನ ಬಣ್ಣಿಪೆನು ॥ ೩ ॥

ನೆರೆದ ಪೆಣ್ಗಂಡುಮಕ್ಕಳ ಮದುವೆಯ ಮಾಡು । ತುರೆ ಹಸುಳೆಗಳ ಮುದ್ದಿಸುತ ॥
ನಿರಿಗುರುಳಬಲೆಯರೊಳು ಲೀಲೆಮಾಡುತ । ಕ್ಕರಿನೊಳಿರ್ದನು ಮಹಾಸುಕೃತಿ ॥ ೪ ॥

ಮಸಗಿ ದಿನಂಪ್ರತಿಯೊಳು ತೋರ್ಪ ಹೊಸಪರಿ । ಯೊಸಗೆಯೊಳಾಟಪಾಟದೊಳು ॥
ಅಸಮಪುಣ್ಯದ ಫಲಪಾಕವನುಂಡು ತೀ । ರಿಸುತಿರ್ದನಾತ್ಮಸಾಕ್ಷಿಯೊಳು ॥ ೫ ॥

ಆವಾಗ ಲೀಲೆಯೊಳಿರೆ ತನ್ನ ಸೋದರ । ಮಾವಂದಿರೆನಿಪ ಯೋಗಿಗಳು ॥
ಕೈವಲ್ಯಬೋಧವಡೆದ ಸುದ್ದಿ ಪರಿದುದು । ಭೂವರ ಕೇಳ್ದರ್ತಿವಟ್ಟಾ ॥ ೬ ॥

ಪಟ್ಟದರಸಿ ನಲಿದಳು ತಾಯಿ ನಲಿದಳು । ತೊಟ್ಟನಷ್ಟಕೆ ಮಹಾಬೋಧಾ ॥
ಪುಟ್ಟಿತನಂತವೀರ್ಯರ್ಗರ್ಯರ್ಗಂಗೆಂದರು ಗುಡಿ । ಗಟ್ಟಿದನಾ ಸಾರ್ವಭೌಮಾ ॥ ೭ ॥

ಒಸಗೆವೇಳ್ಪನಿಗುಡತೊಡಲಿತ್ತನುತ್ಸಾಹ । ಪಸರಿಸಿತರಮನೆಯೊಳಗೆ ॥
ಉಸುರಲಳವೆ ಭರತೇಶನ ಚಿತ್ತದೊ । ಳೆಸೆವ ಧರ್ಮಾನುರಾಗವನು ॥ ೮ ॥

ಭುಜಬಲಿಯೋಗೀಂದ್ರನೆಂತಿರ್ದನೆಂದನು । ರಜತಗಿರಿಯ ಬಿಟ್ಟು ಬೇರೆ ॥
ಗಜವಿಪಿನದೊಳಿರ್ದನಾತನ ತಪದ ಬ । ಲ್ಬಜವ ಚಿತ್ತೈಸೆಂದರವರು ॥ ೯ ॥

ದೀಕ್ಷೆಗೊಂಡುದು ಮೊದಲಾಗೊಮ್ಮೆಯಾದರು । ಭಿಕ್ಷೆಗೆ ಗಮಿಸಿದುದಿಲ್ಲ ॥
ವೃಕ್ಷ ಶೋಷಣವಪ್ಪ ಬಿಸಿಲಲ್ಲಿ ನಿಂದನಾ । ತ್ತೀಕ್ಷ್ಣಯೋಗರೂಢಿಯೊಳು ॥ ೧೦ ॥
ಮುಚ್ಚಿದ ಕಣ್ಣು ಮುಚ್ಚಿದ ತುಟಿ ಬಿಟ್ಟ ತೋ । ಳೊಚ್ಚತಾಗಿರೆ ನಡೆವುಸುರು ॥
ಸಚ್ಚಿದಾತ್ಮನ ನೋಡುತ್ತೈದಾನೆ ಲೋಕವೆ । ಲ್ಲಚ್ಚರಿವಟ್ಟು ನೋಡುತಿದೆ ॥ ೧೧ ॥
ಹುತ್ತವೆದ್ದುವು ಬಳ್ಳಿ ಮೈಗೆ ಹಬ್ಬಿದುವು ಹಾ । ವತ್ತಿತ್ತ ಹರಿದುವಂಗದೊಳು ॥
ಚಿತ್ತ ಕಂಪಿಸದೆ ನಿಂದಿಹನೆ ಯೋಗದ ಕಲ್ಲ । ಪುತ್ತಳಿಯಂತೆ ಯೋಗೀಂದ್ರಾ ॥ ೧೨ ॥
ವರುಷವಾದುದು ದೀಕ್ಷೆಗೊಂಡಾತ ಮಂದರ । ಗಿರಿಯಂತೆ ನಿಂದನಂದಿಂದ ॥
ಅರುಹನೆ ಬಲ್ಲನಾ ತಪದ ಬಲ್ಮೆಯನೆನೆ । ಭರತೇಶನಚ್ಚರಿವಟ್ಟಾ ॥ ೧೩ ॥

ಇನಿತುಗ್ರವೇಕೆ ಸ್ವಾಮಿಯು ಕೇಳ್ವೆನೆಂದು ಭೋಂ । ಕನೆ ಪೊರಮಟ್ಟನಾ ಚಕ್ರಿ ॥
ಘನಮಾರ್ಗವಿಡಿದು ಕೈಲಾಸಾದ್ರಿಗೆಯ್ತಂದು । ಜನಕಗೆರಗಿದನರ್ತಿಯೊಳು ॥ ೧೪ ॥
ಕಚ್ಛಮಹಾಕಚ್ಛಜಿನರಿಗನಂತವೀ । ರ್ಯಾಚ್ಛಜಿನಗೆ ನಮಿಸಿದನು ॥
ಇಚ್ಛೆವಟ್ಟಯ್ಯನ ಪೂಜಿಸಿ ಮೂವರ್ಗೆ । ಸ್ವಚ್ಛದಿ ಪೂಜೆಮಾಡಿದನು ॥ ೧೫ ॥
ಸ್ತುತಿಮಾಡಿ ಮತ್ತೆಲೆ ಸರ್ವಜ್ಞ ಭುಜಬಲಿ । ಯತಿಗುಗ್ರತಪವಿನಿತೇಕೆ ॥
ಅತಿಘೋರತಪಸಾಗಿ ಘನಬೋಧವೇಕೆ ಶೋ । ಭಿತವಾಗದೆಂದನಯ್ಯನೊಳು ॥ ೧೬ ॥
ತಪಸುಗ್ರವಾದರೇನೊಳಗೆ ಕಷಾಯಗ । ಳುಪಶಮ ಬೇಕೆಲೆ ಭವ್ಯಾ ॥
ಚಪಲಚಿತ್ತವ ಕೂಡಬೇಕಾತ್ಮಕಲೆಯೊಳೆಂ । ದುಪದೇಶಗೈದನಾ ಸ್ವಾಮಿ ॥ ೧೭ ॥
ಕ್ರೋಧದ ಮಾನದ ಮಾಯೆಯ ಲೋಭದ । ಬೋಧದಿಂದೊಳಗೆ ನೋವರಿಗೆ ॥
ಬೋಧವೇಕಹುದು ಸುಚಿತ್ತದೊಳಾತ್ಮರ ಸ । ಮಾಧಿಯೊಳಗೆ ನಿಲ್ಲಬೇಕು ॥ ೧೮ ॥
ಹೊರಗೆ ಸರ್ವವ ಬಿಡಬಹುದು ಚಿತ್ತದೊಳಿದ್ದ । ಕರೆಯನೊಂದನು ಬಿಡಲರಿದು ॥
ಅರುವೆಯ ಬಿಸುಟರೆ ತಪಸಿಯೆ ಹೆರೆಬಿಟ್ಟ । ರರೆಗೋಲೆ ವಿಷಹೋಯ್ತೆ ಫಣಿಗೆ ॥ ೧೯ ॥
ಮನವ ನಿರ್ಮಲಮಾಡಿದವನೀಗ ಸುಖಿಯುದು । ಮುನಿಗಳಿಗೊಮ್ಮೆ ಕೂಡದೊಡೆ ॥
ನಿನಗಿಷ್ಟು ರಾಜ್ಯಭಾರದೊಳಿರ್ದು ದೊರಕಿತಾ । ತ್ಮನ ಗುಣಾದ್ಭುತವದು ಸಹಜಾ ॥ ೨೦ ॥
ತುಷಗಳೆದಕ್ಕಿಯ ತಳಿಸುವಂತಾತ್ಮನ । ವಿಷಯುಗಳೆದು ನೋಳ್ಪರೆಲ್ಲ ॥
ವಿಷಯದೊಳಿರ್ದು ನೀನಾತ್ಮನ ಶುಚಿಗೈವೆ । ಋಷಿಗಳೊಳಧಿಕನೈ ನೀನು ॥ ೨೧ ॥
ಉಯ್ಯ ಮುನ್ನೊತ್ತಿ ಕೇಸಕ್ಕಿಯ ತಳಿಸುವ । ರುಯ್ಯದ್ದು ಬಿಳಿಯಕ್ಕಿ ಬಿಳುಪು ॥
ಮೆಯ್ಯ ವಸ್ತ್ರವ ಹಾಕಿ ಕೆಲರು ಧ್ಯಾನಿಪರು ನೀ । ಮೆಯ್ಯ ಸಿಂಗರಿಸಿ ಧ್ಯಾನಿಸುವೈ ॥ ೨೨ ॥
ಅಂತರಂಗದ ಶುದ್ಧಕಾಗಿ ಬಾಹ್ಯದ ವಸ್ತು । ಸಂತತಿದೊರೆವರು ಕೆಲರು ॥
ಭ್ರಾಂತಿಯಾಗದೆ ಬಾಹ್ಯವಸ್ತುವಿದ್ದರು ಕೆಲ । ರಂತರಂಗದಿ ಶುದ್ಧರಹರು ॥ ೨೩ ॥

ಭೂಷಣದೊಟ್ಟು ಧ್ಯಾನಿಸಿ ಮುಕ್ತಿಗೆಯ್ದಿದ । ಭೂಷಣಸಿದ್ಧರೆಂದುಂಟು ॥
ಭೂಷಣವಳಿದು ಧ್ಯಾನಿಸಿ ಕೆಲರಾತ್ಮಸಂ । ತೋಷಿಗಳಿಹರಿಂತು ದ್ವಿವಿಧಾ ॥ ೨೪ ॥

ನಾವೆಲ್ಲ ಬಾಹ್ಯವ ತೊರೆದಾತ್ಮಧ್ಯಾನದಿ । ಕೈವಲ್ಯಸಿದ್ಧಿವಡೆದೆವು ॥
ಶೀವಿ ಬಾಹ್ಯದೊಳೆಲ್ಲವಿದ್ದು ನೀನಾತ್ಮಸು । ಖಾವಾಪ್ತಿವಡೆವೆಯ್ಯೆ ಧನ್ಯಾ ॥ ೨೫ ॥

ಜಿನನೆಂದರಹುದೆ ತಾಪಸನೆಂದರಹುದೆ ಆ । ತ್ಮನ ರುಚಿ ಬೇರದರಿಂದ ॥
ಅನುದಿನ ಲೀಲೆಯೊಳಿರ್ದಾತ್ಮಸಿದ್ಧಿವ । ರ್ಧನ ಕಾಣ ನೀನೆಂದನರ್ಹಾ ॥ ೨೬ ॥

ದೇವರ ಕರುಣೆಯೊಳುದಯಿಸಿದೊಂದು ಪ್ರ । ಭಾವದಿಂದೆನಗೆ ಲೀಲೆಯೊಳು ॥
ಕೈವಲ್ಯವಡೆವುದಾಗದೆಯೆಂದು ನೃಪನಾದಿ । ದೇವನೊಳ್ಬಿನ್ನವಿಸಿದನು ॥ ೨೭ ॥

ಅದು ಸಲ್ವುದಭವ ದೋರ್ಬಲಿಯೋಗಿಯಂತರಂ । ಗದೊಳಿರ್ದ ಪರಿಣತಿಯೇನು ॥
ಚಿದಮಲೇಕ್ಷಣ ಚಿತ್ಪ್ರಕಾಶಕ ನನಗನು । ವದಿಸಬೇಕೆಂದನಾ ನೃಪತಿ ॥ ೨೮ ॥

ಆ ಭುಜಬಲಿ ನಿನ್ನ ಬೀಳ್ಕೊಂಡು ಬಹಾಗ । ಶೋಭೆಯುಲ್ಲದ ನುಡಿಗೇಳ್ದಾ ॥
ಕ್ಷೋಭೆಯಾದುದು ಚಿತ್ತವದರಿಂದ ಘೋರತ । ಪೋಭಾರವಾಂತನ್ನೈ ಕೇಳು ॥ ೨೯ ॥

ನಿನ್ನ ಕೆಳೆಯರಿಬ್ಬರೆಮ್ಮರಸಿನ ರಾಜ್ಯ । ದನ್ನಪಾನವ ಬಿಟ್ಟು ಬೇರೆ ॥
ಇನ್ನೆಲ್ಲಿ ತಪಿಸುವೈ ಹೋಗೆಂದರದ ಕೇಳ್ದು । ಭಿನ್ನಮಾನಸನಾದನವನು ॥ ೩೦ ॥

ದೀಕ್ಷೆವಡೆದು ಮೋಕ್ಷಮಾರ್ಗವ ಕೇಳ್ದು ಹಂ । ಸೇಕ್ಷಣಕಡವಿಗೆಯ್ದಿದನು ॥
ಈ ಕ್ಷೇತ್ರ ತಾನು ಚಕ್ರಿಯದಲಾ ಎಂದು ಚಿ । ತ್ತಕ್ಷೋಭೆವೆತ್ತಿರುತಿಹನು ॥ ೩೧ ॥

ಇವನ ಸೀಮೆಯೊಳನ್ನಪಾನವ ಕೊಂಬೆನೆ । ವಿವಿಧಕರ್ಮವ ಸುಟ್ಟು ಬೇಗ ॥
ಶಿವವನೆಯ್ದುವೆನೆಂದು ನಿಂದನು ಧ್ಯಾನ ಸಂ । ಭವಿಸಿತಿಲ್ಲ ಗರ್ವದಿಂದ ॥ ೩೨ ॥

ಪರ್ವತದಂದದಿ ನಿಂದರೇನೊಳಗಣ । ಗರ್ವ ಹೋಗದು ಮತ್ತು ನಿನ್ನ ॥
ಉರ್ವಿಯ ಮೆಟ್ಟಿರ್ದನೆಂಬ ಶಲ್ಯದಿ ಹಂಸ । ತೋರ್ವುದಿಲ್ಲಾ ಮುನಿಗಿನ್ನು ॥ ೩೩ ॥

ವ್ಯವಹಾರಧರ್ಮ ತೋರುವುದು ನಿಶ್ಚಯಧರ್ಮ । ದವಲಂಬ ತೋರದಾತನಿಗೆ ॥
ಲವಮಾತ್ರವಾದರು ಕಷ್ಟಕಷಾಯವು । ಳ್ಳವಗದು ತೋರದು ಸಹಜಾ ॥ ೩೪ ॥

ಒಂದು ಸಂವತ್ಸರಮುಟ್ಟುಪವಾಸಾಗ್ನಿ । ಯಿಂದ ಕಷಾಯದಿ ನೊಂದಾ ॥
ಇಂದು ನೀನೆಯ್ದಿ ವಂದಿಸೆ ಶಲ್ಯ ಬಿಡುವುದೊ । ಳ್ಪಿಂದಹುದುತ್ತಮಧ್ಯಾನಾ ॥ ೩೫ ॥

ಘಾತಿಕರ್ಮಗಳಿಂದು ಕೆಡುವುವು ಸುಜ್ಞಾನ । ಜ್ಯೋತಿ ಬಿಂಬಿಸುವುದಾ ಮುನಿಗೆ ॥
ನೀ ತೆರಳೆನಲೊಸೆದೆರಗಿದನೆದ್ದನು । ಭೂತಳಪತಿ ತಪೋವನಕೆ ॥ ೩೬ ॥

ಕಂಡನು ಘೋರವಿಪಿನದಲ್ಲಿ ನಿಜಬಾಹು । ದಂಡವನಿಳುಹಿ ಕಣ್ಮುಚ್ಚಿ ॥
ಕೆಂಡದಂದದ ಬಿಸಿಲೊಳು ನಿಂದ ಮುನಿಯನಾ । ಮಂಡಲೇಶನು ಚೋದ್ಯವಟ್ಟಾ ॥ ೩೭ ॥

ಕಡುಬಿಸಿಲೊಳು ಹುತ್ತ ಬಿರಿದು ಕುಪ್ಪಳಿಸಿದ್ದು । ಪೊಡನೆ ಮತ್ತೊಣಗಿದ ಲತೆಯಾ ॥
ಕಡುಪಿಂದ ಬ್ರಾಹ್ಮಿಸೌಂದರಿಯರ ರೂಪಾಂತು । ಬಿಡಿಸುತಿದ್ದರು ಖಚರಿಯರು ॥ ೩೮ ॥
ಸುಜನಶೇಖರ ನೋಡುತೆಯ್ತಂದು ಪಾದವಾ । ರಿಜಗಳಿಗಿಟ್ಟು ಮಂಡೆಯನು ॥
ಭುಜಬಲಿಯೋಗೀಶ್ವರಾಯ ನಮೋ ನಮೋ । ವಿಜರಾತ್ಮನೇ ನಮೋಸ್ತೆಂದಾ ॥ ೩೯ ॥
ಕೂಡಿದಿರೊಳು ನಿಂದ ಚಕ್ರಿಯಾ ಮುನಿಪನ । ಕಾಡುವ ಖಳಕಷಾಯುವನು ॥
ಓಡಿಸುವಂತು ಭಕ್ತಿಯೊಳೊಲ್ದು ಸವಿಮಾತ । ನಾಡಿದನೇನ ಬಣ್ಣಿಪೆನು ॥ ೪೦ ॥
ಗುರುವೆ ನಿನ್ನಂತರಂಗದ ನೆಲೆಯನು ನಾನು । ಪುರುನಾಥನೊಳು ಕೇಳಿ ಬ್ಱದೆ ॥
ಧರೆ ನನ್ನದೆಂದು ನೆನೆವರೆ ಮಹಾತ್ಮ ಸ । ರ್ವರು ಮುನ್ನ ಪಿಡಿದಾಳ್ದುದಲ್ತೆ ॥ ೪೧ ॥
ಹಲಬರು ಮುನ್ನಾಳ್ದರಿಂದು ನಾನಾಳ್ವೆನಿ । ನ್ನೊಲಿದು ಮುಂದೆನಿಬರಾಳುವರೊ ॥
ಬೆಲೆವೆಣ್ಣಿನಂತಿರ್ದ ಭೂಮಿಯ ನನ್ನದೆಂ । ದೆಲೆ ಸುಬೋಧಾತ್ಮ ಯೋಚಿಪರೆ ॥ ೪೨ ॥
ಮರೆಯೇಕೆ ವೃಷಭಾದ್ರಿಯೊಳು ನನ್ನ ನಾಮಕೆ । ತೆರಪಿಲ್ಲದಿರೆ ಮುನ್ನಿನೊಂದು ॥
ದುರಿದುಂಬಿಲಿಪಿಯನುಜ್ಜಿಸಿ ಬರೆಸಿದೆನಿದ । ಹೊರಿಪರೆ ನನಗೆಂದು ನೀನು ॥ ೪೩ ॥
ನೆಲದ ಹೆಚ್ಚೇನಿದು ಮಣ್ಣೈಸೆ ಸ್ವರ್ಗದು । ಜ್ಜ್ವಲರತ್ನಮಯವಿಮಾನಗಳು ॥
ಸಲೆ ಕಲ್ಪತರು ದಿವಿಜರಿಗೆರವಲ್ತೆ ಭೂ । ತಳವ ನೀನೆನಗೆನ್ನಬಹುದೆ ॥ ೪೪ ॥
ಅಲ್ಲವೈ ಗುರುವೆ ಕೇಳಿನ್ನು ದೇಹಗಳಿನ್ನು । ವಲ್ಲವಿನ್ನುಳಿದ ವಸ್ತುಗಳಾ ॥
ಸೊಲ್ಲಿಸುವರೆಯೆನೆ ಮುನಿಯಹಂಕೃತಿ ಮೆಲ್ಲ । ಮೆಲ್ಲನಿಳಿವುತಿದ್ದುದಾಗ ॥ ೪೫ ॥
ನೀನಿಳೆಯನು ತೃಣವೆಂದು ಬಿಸುಟು ಬಂದೆ । ನಾನಿದ ಬಿಡಲಾರದಾದೆ ॥
ನೀನೀಗ ಗುರುವಾದೆ ಲಘುವಾದೆ ನಾನೆನೆ । ಮಾನ ಜಾರಿತು ಕೇಳ್ದು ಮುನಿಗೆ ॥ ೪೬ ॥
ಝೊಂಪಿಪ ಶಲ್ಯಭೂತವ ವಾಕ್ಯಮಂತ್ರದಿ । ತಾಂ ಪೊರಮಡಿಸೆ ಚಕ್ರೇಶಾ ॥
ತಂಪಾಯ್ತು ಚಿತ್ತ ತಳ್ಪಂಕ ಜಾರಿತು ಧ್ಯಾನ । ಸಂಪತ್ತು ಫಲಿಸಿತಾ ಮುನಿಗೆ ॥ ೪೭ ॥
ತನಗಂದು ನಮಿಸಿದ ತಮ್ಮಗಿಂದೆರಗಿದ । ಮುನಿಯೆಂದು ಮತ್ತಾತನೊಳಗೆ ॥
ಮುನಿಯಾಗಿ ಸಂಕ್ಲೇಶವಾಯ್ತೊತಗಿಲ್ಲ ರಾ । ಜನೊ ರಾಜಯೋಗಿಯೊ ಚಕ್ರಿ ॥ ೪೮ ॥
ಮೆಯ್ಯ ಬತ್ತಲೆಮಾಡಿ ಮನವ ಕತ್ತಲೆಮಾಡಿ । ಕೆಯ್ಯಿಕ್ಕಿ ನಿಂದನಾ ಮದನಾ ॥
ಹುಯ್ಯಲನಾ ರಾಯ ಬಿಡಿಸಿದನೆಂಬಾಗ । ಸಯ್ಯಮವಾರದಿಬ್ಬರೊಳು ॥ ೪೯ ॥
ಬಾಹ್ಯದೊಳೀತನಿಗಿದ್ದರೇನಾಯ್ತಾತ । ಬಾಹ್ಯವ ಬಿಟ್ಟೇನ ಪಡೆದಾ ॥
ಬಾಹ್ಯದೊಳುಗ್ರತಪಸುಗೈದರೇನಾಯ್ತು । ಬಾಹ್ಯರಾದವರು ತಮ್ಮೊಳಗೆ ॥ ೫೦ ॥
ಭಾವಿತಾತ್ಮನ ನುಡಿಗೇಳಿದಷ್ಟಕೆ ಚಿತ್ತ । ದೋವರಿಯೊಳ ಮಬ್ಬು ಹೋಯ್ತು ॥
ದೀವಿಗೆಹೊತ್ತಿಸಿದಂತಾತ್ಮರೂಪು ಪ್ರ । ಭಾವಿಸುತಿದ್ದುದಾ ಯತಿಗೆ ॥ ೫೧ ॥

ವ್ಯಗ್ರವಳಿದು ಚಿತ್ತ ನೊಸಲಲ್ಲಿ ನಿಲೆ ವಿಷ । ಯುಗ್ರಾಮವಾಯುಗಳಡಗೆ ॥
ವಿಗ್ರಹ ನಿಷ್ಕಂಪಋಜುವಾಗೆ ಬಾಹ್ಯಸಾ । ಮಗ್ರಿಯೊಳಳವಟ್ಟು ನಿಂದಾ ॥ ೫೨ ॥
ಪ್ರವಿಪಾಕದಾಜ್ಞೆಯಪಾಯಸಂಸ್ಥಾನದ । ವ್ಯವಹಾರಧರ್ಮಚಿಂತೆಯೊಳು ॥
ಅವಗತನಾಗಿದ್ದು ಶುದ್ಧಾತ್ಮ ನಾನೆಂಬ । ಸ್ವವಶಧರ್ಮಕೆ ಮನವಿಟ್ಟಾ ॥ ೫೩ ॥
ಸಿದ್ಧರ ಮೊದಲು ಧ್ಯಾನಿಸಿದನಾ ಸಿದ್ಧರ । ಸಿದ್ಧಾಷ್ಟಗುಣಗೂಡಿ ನಾನು ॥
ಸಿದ್ಧರಂತಿಹೆನೆಂದು ಕೂಡೆ ನಿರಂಜನ । ಸಿದ್ಧನ ನೋಡಿದನೊಳಗೆ ॥ ೫೪ ॥
ಒಳಗೆ ವಿಶೋಧಿ ಬೆಳೆವುತಿದ್ದುದಲ್ಲಿ ಮಾ । ರ್ಪೊಳೆವುತ ಮಸುಳುತ ಕೂಡೆ ॥
ಹೊಳೆವುತಿದ್ದುದು ಹಂಸಕಲೆಯದು ನಿಶ್ಚಯೋ । ಜ್ಜ್ವಲಧರ್ಮ ಹಲವು ಮಾತೇನು ॥ ೫೫ ॥
ದರುಶನ ವ್ರತಿಕ ತಾಪಸನಪ್ರಮತ್ತನೆಂ । ಬುರುಗುಣಸ್ಥಾನ ನಾಲ್ಕರೊಳು ॥
ದೊರೆಕೊಂಬುದಾ ಧರ್ಮವದರಿಂದ ಕರ್ಮ ನಿ । ರ್ಜರೆಮಾಡುತಿರ್ದನೇನೆಂಬೆ ॥ ೫೬ ॥
ಭಾವಿಸುವಾಗ ಹೊಳೆವುದೊಡನಳಿವುದು । ಧಾವಳ್ಯವಹುದು ಕಪ್ಪಹುದು ॥
ಸಾವಿರಸೂಳಪ್ರಮತ್ತಪ್ರಮತ್ತಪ । ರಾವೃತ್ತಿಗೈದನಾ ಧ್ಯಾನಿ ॥ ೫೭ ॥
ಸುಪ್ರಭೆ ತೋರುವಾಗಪ್ರಮತ್ತನು ಕೂಡೆ । ಸುಪ್ರಭೆ ಮಾಸೆ ಪ್ರಮತ್ತಾ ॥
ಅಪ್ರಮತ್ತನ ಸಪ್ರಮತ್ತನ ಬಗೆಯಿಷ್ಟೆ । ವಿಪ್ರಸಿದ್ಧಾಂತಶಾಸ್ತ್ರದೊಳು ॥ ೫೮ ॥
ಪೆರ್ಮಟ್ಟಿಗೆಯ್ದುವುದಪ್ರಮತ್ತಕನೆಂದ । ಪೂರ್ವನೆಂದನಿವೃತ್ತನೆಂದು ॥
ದೋರ್ವಲಕರಣಮೂರವರಿಂದ ಧರ್ಮಯೋ । ಗೋರ್ವಿಯ ಸಿರಿ ಹೆಚ್ಚಿತಾಗ ॥ ೫೯ ॥
ಪ್ರಾಯಾಸಬಟ್ಟಾತ ನಿಶ್ಚಯಧರ್ಮಯೋ । ಗಾಯತನಾದನಾಗಲಿಕೆ ॥
ಆಯಾಸವಿಲ್ಲದೆ ನಾರಕಸುರತಿರ್ಯ । ಗಾಯುಷ್ಯ ಕೆಟ್ಟುವು ಕೂಡೆ ॥ ॥ ೬೦ ॥
ನೋಯಿಪನಂತಾನುಬಂಧಿನಾಲ್ಕುರೆ ಮಿಥ್ಯೆ । ಹೇಯ ಸಮ್ಯಙ್ಮಿಥ್ಯೆ ಪ್ರಕೃತಿ ।
ಈಯೇಳು ಕರ್ಮ ಕೆಟ್ಟುವು ಕೂಡೆ ಮುನಿಪಗೆ । ಕ್ಷಾಯಿಕಸಮ್ಯಕ್ತ್ವವಾಯ್ತು ॥ ೬೧ ॥
ಭ್ರಮ್ಯಂಗದೇಳು ಪ್ರಕೃತಿ ಕೆಡಲಾತ್ಮಗೆ । ಸಮ್ಯಗೀಶ್ವರನೆಂಬ ದೃಢತೆ ॥
ಗಮ್ಯವಟ್ಟಳವಟ್ಟು ನಿಂದಿತು ಇಕ್ಷ್ವಾಕು । ಸಮ್ಯಕ್ತ್ವವಾಯ್ತೆಂಬರದನು ॥ ೬೨ ॥
ದಾಂಟಿದನಪ್ರಮತ್ತತೆಯನಪೂರ್ವವೆಂ । ಬೆಂಟನೆಯೆಡೆಯೊಳು ನಿಂದಾ ॥
ನಾಂಟಿತಾ ಸ್ಥಳದಲ್ಲಿ ಪ್ರಥಮಶುಕ್ಲಧ್ಯಾನ । ಹೆಂಟೆಯಂತಾದುವು ಕರ್ಮ ॥ ೬೩ ॥
ಅದು ತಾನು ವ್ಯವಹಾರವೆಂದು ನಿಶ್ಚಯವೆಂದು । ಚದುರರಿಗಿರ್ತೆರನಹುದು ॥
ತ್ರಿದಶರಹರು ವ್ಯವಹಾರಶುಕ್ಲದಿ ಮೋಕ್ಷ । ಪದ ನಿಶ್ಚಯಾಂಕದೊಳಹುದು ॥ ೬೪ ॥
ಉಪಶಮಶ್ರೇಣಿಗೆ ವ್ಯವಹಾರಶುಕ್ಲವ । ನಿಪುಣರೇರಿಸಿ ಸುರರಹರು ॥
ಕ್ಷಪಕಾಂತಶ್ರೇಣಿಯೊಳ್ ನಿಶ್ಚಯಶುಕ್ಲದಿಂ । ದಪವರ್ಗವಡೆವರು ಕೆಲರು ॥ ೬೫ ॥

ಶ್ರುತಿವಿಕಲ್ಪದಿ ಹೆಚ್ಚಿ ಹಂಸನೊಳ್ತೋರುವ । ಸಿತಕಾಂತಿ ವ್ಯವಹಾರಶುಕ್ಲಾ ॥
ಚ್ಯುತವಿಕಲ್ಪದೊಳಾತ್ಮಕಳೆ ಹೆಚ್ಚಿ ತೋರೆ ನಿ । ಶ್ಚಿತಶುಕ್ಲ ಕೊಸರುವಮಾತೇನು ॥ ೬೬ ॥
ತಲೆಯಿಂದ ಪಜ್ಜೆವುಟ್ಟಚ್ಚಬೆಳ್ದಿಂಗಳ । ತಿಳಿಬೊಂಬೆಯಂತಾತ್ಮ ತೋರೆ ॥
ಚಲಿಸಲ್ಕೆ ವ್ಯವಹಾರಶುಕ್ಲ ನಿಶ್ಚಯವಾಗಿ । ನೆಲಸೆ ನಿಶ್ಚಯಶುಕ್ಲಯೋಗಾ ॥ ೬೭ ॥
ಪರಿವಿಡಿ ಮಿಗೆ ವ್ಯವಹಾರಶುಕ್ಲದೊಳೊಮ್ಮೆ । ಕರಣಮೂರನು ರಚಿಸಿದನು ॥
ಸ್ಫುರಿಸಿತು ಕಾಂತಿ ನಿಶ್ಚಯಶುಕ್ಲಯೋಗ ಹೊಂ । ಕರಿಸುತೆದ್ದಿತು ಹೃದಯದೊಳು ॥ ೬೮ ॥
ಮೊದಲ ಮೂರಾಯು ಕೆಟ್ಟುವು ಮನುಜಾಯುಷ್ಯ । ಪುದಿದೆದ್ದುದಾ ತಪೋಧನನಗೆ ॥
ಅದು ಹೊರಗಾದೇಳುಕರ್ಮದ ಸ್ಥಿತಿ ಶಕ್ತಿ । ಸದರವಾದುವು ನಿಮಿಷದೊಳು ॥ ೬೯ ॥

ಮತ್ತದ ದಾಂಟಿದನನಿವೃತ್ತನಾಮದೊಂ । ಭತ್ತನೆಯೆಡೆಯೊಳು ನಿಂದಾ ॥
ಒತ್ತಿ ಮೂವತ್ತಾರುಕರ್ಮವ ಕಳೆದನೊಂ । ಭತ್ತುಸೂಳದರೊಳಿಂತೆನಲು ॥ ೭೦ ॥
ಆತಪ ಸೂಕ್ಷ್ಮ ಸಾಧಾರಣ ಸ್ಥಾವರ । ದ್ಯೋತ ದುರ್ಗತಿ ಪಶುಗತಿಯಾ ॥
ದ್ವೈತವೆಂದೆನೆ ಕರ್ಮನಾಲ್ಕವೇಕೇಂದ್ರಿಯ । ಜಾತಿ ಮುಂತೆನೆ ಜಾತಿನಾಲ್ಕು ॥ ೭೧ ॥
ಸ್ತ್ಯಾನಗೃದ್ಧಿಯು ಮತ್ತೆ ಪ್ರಚಲಾಪ್ರಚಲೆ ನಿ । ದ್ರಾನಿದ್ರೆ ಮೂರಿವು ಕೂಡಿ ॥
ಧ್ಯಾನಿ ತಾನೀರೆಂಟು ಕ್ಷಣದಲ್ಲಿ ಕರ್ಮವ । ಹಾನಿಮಾಡಿದನೊಂದೆ ಬಾರಿ ॥ ೭೨ ॥
ವ್ರತಕಷಾಯಗಳ ನಿರ್ವ್ರತಕಷಾಯಗಳೆಂಟ । ಚ್ಯುತಿಗೈದನೊಮ್ಮೆ ಮತ್ತೊಮ್ಮೆ ॥
ಹತಿಸಿದ ಪುಂವೇದವ ಮತ್ತೆ ಸ್ತ್ರೀವೇದ । ದತುಳಕರ್ಮವ ಕೆಡಿಸಿದನು ॥ ೭೩ ॥
ಅರತಿ ಜುಗುಪ್ಸೆ ಮಹಾಭೀತಿ ರತಿ ಶೋಕ । ಪರಿಹಾಸವೆನಲಾರನೊಮ್ಮೆ ॥
ಪುರುಷವೇದವನೊಮ್ಮೆ ಕೆಡಿಸಿದ ಮುನಿಪತಿ । ಪರಮಾತ್ಮಯೋಗಧಾರೆಯೊಳು ॥ ೭೪ ॥
ಸುಗಮ ಸಂಜ್ವಲನದ ಮುನಿಸೊಮ್ಮೆ ಹಮ್ಮೊಮ್ಮೆ । ತೆಗೆದುಹೋದುವು ಮುಂದೆ ಲೋಭಾ ॥
ಮಿಗೆ ಸೂಕ್ಷ್ಮದೊಳು ನಿಂದುದದರ ಬಾದರಗೂಡಿ । ಜಗುಳಿತು ಮಾಯೆ ಲೆಕ್ಕಿಸದೆ ॥ ೭೫ ॥

ಗುರುಸೂಕ್ಷ್ಮಸಾಂಪರಾಯಕವೆಂಬ ದಶಮದೊ । ಳಿರದೆ ಲೋಭವ ಕೆಡಿಸಿದನು ॥
ಅರಿಮೋಹಕರ್ಮದಿಪ್ಪತ್ತೆಂಟು ಪ್ರಕೃತಿ ನಿ । ರ್ಜರೆಯಾಗಲೊಡನೆ ಮುಂದೆದ್ದಾ ॥ ೭೬ ॥
ಉಪಶಾಂತಿಯೆಂಬ ಪನ್ನೊಂದನೆಯೆಡೆಯನಾ । ತಪಸಿ ಹೊದ್ದದೆ ದಾಂಟಿ ಮುಂದೆ ॥
ಕ್ಷಪಿಸಲೆಳಸಿದನು ಪನ್ನೆರಡನೆಯ ಶೋ । ಭಿಪ ತಾಣದೊಳು ಕರ್ಮತತಿಯಾ ॥ ೭೭ ॥
ಕ್ಷೀಣಕಷಾಯವೆಂಬೆಡೆಯದರೊಳಗಾಯ್ತು । ಹೊಣೆ ದ್ವಿತೀಯಶುಕ್ಲಾಂಕ ॥
ಮಾಣದೆ ನಿದ್ರೆಯಪ್ರಚಲೆಯನೊಂದೆ ಬಾ । ರೊಣೆಯಪುಗದೆ ಖಂಡಿಸಿದಾ ॥ ೭೮ ॥
ದರುಶನಾವರಣನಾಲ್ಕಂತರಾಯಗಳೈದು । ವರಬೋಧಪಿಹಿತಗಳೈದು ॥
ಜರಿದಿವು ಪದಿನಾಲ್ಕು ಕೆಡಲೊಮ್ಮೆ ಘಾತಿ ಸೈ । ಸರಿಸೆ ತನ್ಮುನಿ ಜಿನನಾದಾ ॥ ೭೯ ॥

ಸ್ವೇದ ಹಸಿವು ತೃಷೆ ನಿದ್ರೆ ಮುಂತೆನಿಸಿದ । ಷ್ವಾದಶದೋಷವಳಿದುವು ॥
ದ್ವಾದಶವಳಿದು ಸಯೋಗಿಯೆಂದೆಂಬ ತ್ರ । ಯೋದಶಸ್ಥಾನೇಶನಾದಾ ॥ ೮೦ ॥
ಮಾರುತನಂತೇಳ್ವ ಮನಸ್ಸೈಕ್ಯವಾಯ್ತು ಶ । ರೀರವ ಸೋಂಕದಾತ್ಮನೊಳು ॥
ಚಾರಿತ್ರಮೋಹನಾಶದೊಳು ಯಥಾಖ್ಯಾತ । ಚಾರಿತ್ರವಾಯ್ತೆಂಬರದನು ॥ ೮೧ ॥
ಮೋಹವೆಂಬುದು ತಮವದು ಕೆಡೆ ಪ್ರಭೆಯಾಯ್ತು । ಶ್ರೀಹಂಸನಿಶ್ಚಯವಾಯ್ತು ॥
ಆ ಹಂಸನೊಳೆ ಚಿತ್ತ ನಿಲಲದ ಕೆಲಬರು । ದಾಹರಿಪರು ಸುಖವೆಂದು ॥ ೮೨ ॥
ಆವರಣಗಳೆರಡಳಿಯೆ ಮಹಾಬೋಧ । ಪೀವರದರ್ಶನವಾಯ್ತು ॥
ಏವೇಳ್ವೆನಂತರಾಯದ ಕೇಡಿನೊಳು ಶಕ್ತಿ । ಕೈವಲ್ಯಸುಖ ಫಲಿಸಿದುವು ॥ ೮೩ ॥
ಅರುವತ್ತಮೂರು ಕರ್ಮಾವಳಿ ಕೆಡೆ ಕಾಂತಿ । ಪೊರಪೊಣ್ಮುತದ್ಭುತವಾಯ್ತು ॥
ಮರೆ ಜಾರಿದರ್ಕಮಂಡಲದಂತೆ ಸುಜ್ಞಾನ । ಮೆರೆದುದಾ ಜಿನನಾತ್ಮನಲ್ಲಿ ॥ ೮೪ ॥
ಭುವನದೊಳಗುಹೊರಗನು ಕಾಣ್ಬನರಿವನು । ಭುವನವನೆತ್ತಿವಾರ್ಪಾಯ್ತು ॥
ಪ್ರವರಾತ್ಮಸುಖವಾದುದಾ ನಾಲ್ಕರೊಳೆ ನೋಡೆ । ನವವಿಧಲಬ್ಧಿ ಕೂಡಿದುವು ॥ ೮೫ ॥
ನೆಟ್ಟಂತೆ ನಿಂದು ಧ್ಯಾನಿಸುತಿದ್ದು ಬಹುಕರ್ಮ । ಕೆಟ್ಟಾತ್ಮಸಿದ್ಧಿ ಸಂಗಡಿಸೆ ॥
ಬೆಟ್ಟ ಲಂಘಿಸುವಂತೆ ಮೈಗೂಡಿ ನೆಗೆದು ಬಾಂ । ಬಟ್ಟೆಯೊಳ್ನಿಂದನಾ ಸ್ವಾಮಿ ॥ ೮೬ ॥
ನರಸುರಭುಜಗರು ಜಯಜಯಯೆನುತಾಗ । ಬರುತಿರ್ದರಖಿಳದಿಕ್ಕಿನೊಳು ॥
ವಿರಚಿಸಿದನು ಕ್ಷಣದಲಿ ಗಂಧಕುಟಿಯನು । ತ್ತರದಿಕ್ಕಿನರಸನಾ ಜಿನಗೆ ॥ ೮೭ ॥
ಆಗಸದೆಡೆಯೊಳಿದ್ದುದು ಗಂಧಕುಟಿ ನೋಡ । ಲಾ ಗಂಧಕುಟಿಯೊಳಂಬುಜದ ॥
ಮೇಗೆ ನಾಲ್ವೆರಳಷ್ಟು ಸೋಂಕದೊಪ್ಪಿದನು ಸ । ಯೋಗಿಯಾ ಭುಜಬಲೀಶ್ವರನು ॥ ೮೮ ॥
ಭರತರಾಜೇಂದ್ರನಾನಂದಬಟ್ಟನು ಮನೋ । ಹರದಿ ಪೂಜಿಸಿದ ಕೀರ್ತಿಸಿದಾ ॥
ನಿರುತಸಾಷ್ಟಾಂಗವೆರಗಿದನೆದ್ದೀಕ್ಷಿಸಿ । ಶಿರದೂಗಿ ಪೊಗಳ್ದನಾ ಜಿನನಾ ॥ ೮೯ ॥
ಸ್ವಾಮಿ ನನ್ನಿಂದುಪಸರ್ಗವಾದುದೆಯೆಂದು । ಭೂಮಿಶ ಬಿನ್ನವಿಸಿದನು ॥
ಆ ಮಾತು ಬೇಡೆಲೆ ಭವ್ಯ ದುಷ್ಕರ್ಮಾಳಿ । ನೇಮಿಸಿತೆಂದನಾ ಸ್ವಾಮಿ ॥ ೯೦ ॥
ನಮ್ಮ ಪಾಪವೆ ನಿನ್ನ ಕೂಡೆ ಹೋರಿಸಿತಿಂತು । ಹಮ್ಮಿಂದ ತಪಸುಮಾಡಿಸಿತು ॥
ನಮ್ಮ ಪುಣ್ಯವೆ ನಿನ್ನ ತಂದೊಳ್ಪುಮಾಡಿತು । ನಮ್ಮಿಂದ ಸುಖವಾಯ್ತು ನಮಗೆ ॥ ೯೧ ॥
ದುರಿತದಿ ದುಃಖ ಪುಣ್ಯದಿ ಸುಖವಹುದದ । ರಿರವನರಿಯದೆ ಮಾನವರು ॥
ಪರರು ಮಾಡಿದರೆಂಬರಾ ದುಃಖಸುಖಗಳ । ಸರಿಗಂಡರಹುದಾತ್ಮಸಿದ್ಧಿ ॥ ೯೨ ॥
ತನುವಿಡಿದಾದೊಂದು ಸುಖದುಃಖವೇನವು । ಕನಸ ಕಂಡಂತೆ ಮಾಜುವುವು ॥
ವಿನುತಾತ್ಮಸುಖವೊಂದೆ ನಿತ್ಯವಾ ಸುಖವಾರ್ಧಿ । ಗನಿಮಿಷಸುಖ ಬಿಂದುಮಾತ್ರ ॥ ೯೩ ॥

ಕಠಿನಕರ್ಮಗಳೆಮ್ಮವದರಿಂದ ತಪದಲ್ಲಿ । ಜಠರವನಲೆದು ಜಾರಿದುವು ॥
ಸುಟಿವಂತ ಮೃದು ನಿನ್ನ ಕರ್ಮಗಳವು ಭೋಗ । ಮಠದೊಳೊಯ್ಯನೆ ತೊಲಗುವುವು ॥ ೯೪ ॥

ಈ ಪರಿ ಮುಕ್ತಿವಡೆವ ಪ್ರಾಪ್ತಿ ನಮಗೆ ನೀ । ನಾ ಪರಿ ಸುಖಿಯಹ ಪ್ರಾಪ್ತಿ ॥
ಲೇಪವಳಿದರೆ ಸರ್ವರು ಸರಿಯೆಂದು ನಿ । ರೂಪಿಸಿದನು ಪರಮಾತ್ಮಾ ॥ ೯೫ ॥

ರಜತಶೈಲಕೆ ನಾವು ಗಮಿಸಬೇಕೆಲೆ ಭವ್ಯ । ನಿಜಪುರಿಗೆಯ್ದು ನೀನೆನಲು ॥
ವಿಜಿತನೊಲ್ದೆರಗಿ ಬೀಳ್ಕೊಂಡನಾ ಜಿನ ಸುರ । ವ್ರಜಗೂಡಿ ತಳರ್ದನೋಜೆಯೊಳು ॥ ೯೬ ॥

ಜಯ ಜಯ ಸರ್ವಜ್ಞಯೆಂಬ ಸಂಭ್ರಮದಿ ಸ್ವಾ । ಮಿಯ ಗಂಧಕುಟಿಯುತ್ತ ತೆರಳೆ ॥
ನಿಯಮಿತಜನಗೂಡಿ ಕೌಶಲಿಗಿತ್ತ ಲೀ । ಲೆಯೊಳೆಯ್ದುತಿರ್ದನಾ ಚಕ್ರಿ ॥ ೯೭ ॥

ಧ್ಯಾನಸಾಮರ್ಥ್ಯಕೆ ಕರ್ಮ ಕೆಟ್ಟುದಕೆ ಸು । ಜ್ಞಾನ ಪೂರ್ಣಿದದೊಂದು ಸಿರಿಗೆ ॥
ಆನಂದಬಡುತೆಯ್ದುತಿರ್ದನಂಬರದಿ ವಿ । ಮಾನವನೇರಿ ಚಕ್ರೇಶಾ ॥ ೯೮ ॥

ಜಿನಗಾದ ಸಿರಿಯಲ್ಲ ತನಗೆ ತಜ್ಜಿನಪದ । ಜನಿಸಿತೊಯೆಂಬ ಲೀಲೆಯೊಳು ॥
ನನೆಕೊನೆವೋಗುತೆಯ್ತಂದು ಪಟ್ಟಣವ ಹೊ । ಕ್ಕನು ನಿವಾಸವ ಹೊಕ್ಕನೊಡನೆ ॥ ೯೯ ॥

ತಾರಾದ್ರಿಗೆಯ್ದಿದುದಾದಿಯಾಗಾದ ವಿ । ಚಾರವನೆಲ್ಲರಿಗರುಹಿ ॥
ಭೂರಾಮನಿದ್ದನೆಂಬಲ್ಲಿಗೆ ಕ್ಷಪಕಶ್ರೇ । ಣ್ಯಾರೋಹಸಂಧಿ ಸುಗಂಧಿ ॥ ೧೦೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೦೨ ॥

ಕಿರುವೆಳಗಿಂದ ಧರ್ಮಧ್ಯಾನರೂಪ ಪೊ । ಚ್ಚರಿಪ ಮಹಾಪ್ರಭೆಯಿಂದ ॥
ಮಿರುಪ ಶುಕ್ಲಧ್ಯಾನರೂಪ ನನ್ನೆದೆಯೊಳಿ । ರೆರೆಯು ಚಿದಂಬರಪುರುಷಾ ॥ ೧೦೩ ॥

ಶ್ರೇಣ್ಯಾರೋಹಸಂಧಿ ಸಂಪೂರ್ಣಂ

# ಸ್ವಯಂವರಸಂಧಿ

ಸುಜ್ಞಾನಶೇಖರ ಸುಕೃತಾತ್ಮರೊಡೆಯ ಗು । ಣಜ್ಞರ ಮನಮೆಚ್ಚಿನಭವಾ ॥
ವಿಜ್ಞಾನದೋರು ಸನ್ಮತಿದೋರು ಗುರುವೆ ಸ । ರ್ವಜ್ಞಾ ನಿರಂಜನಸಿದ್ಧಾ ॥ ೧ ॥

ಭುಜಬಲಿಸ್ವಾಮಿಗನಂತವೀರ್ಯಸ್ವಾಮಿ । ಗಜಡದಿ ಕಚ್ಛನಾಥರಿಗೆ ॥
ಪ್ರಜಿತಮಹಿಮೆಯಾಗೆ ಮೆಚ್ಚುತ ಭರತಭೂ । ಭುಜನಿದ್ದನೊಲಿದಯೋಧ್ಯೆಯೊಳು ॥ ೨ ॥

ಎಳಸಿ ಮಹಾಬಲರಾಜನಿಗಾ ರತ್ನ । ಬಲರಾಜಸುಬಲರಾಜರಿಗೆ ॥
ಬಳೆದುದರಿದು ಮದುವೆಯ ಮಾಡಿ ತಂದೆ ಹೋ । ದಳಲ ಹಿಂಗಿಸಿದನಾ ಸುಗುಣಾ ॥ ೩ ॥

ಅಳಿಯಂದಿರೊಡಗೂಡಿ ಹೆಣ್ಣುಮಕ್ಕಳ ತನ್ನ । ನಿಳಯಕೆ ಕರೆಸುತರ್ತಿಸುತ ॥
ಬಲುಸಿರಿಗೊಟ್ಟು ಬೀಳ್ಕೊಡುತಿಂತು ಕಾಲವ । ಕಳೆವುತಿರ್ದನು *ವಿಲಾಸದೊಳು ॥ ೪ ॥

ಜನಕನಾ ಪುರದೊಳಿಂತಿರೆ ಯುವರಾಜ ತ । ನ್ನನುಜನೊಬ್ಬನುಗೂಡಿ ಪಿತನ ॥
ಅನುಮತದಿಂದೆಯ್ದಿ ಲೀಲಾರ್ಥ ರಾಜ್ಯರಂ । ಜನೆನೋಡುತಿರ್ದನೇನೆಂಬೆ ॥ ೫ ॥

ಅತಿದೂರವಲ್ಲದಾರ್ಯಾಖಂಡದೊಳಗುಳ್ಳ । ನುತಪುರಾವಳಿಯನಲ್ಲಲ್ಲಿ ॥
ಚತುರಕುಮಾರನೀಕ್ಷಿಸುತೆಯ್ದುತಿರ್ದನಾ । ಕ್ಷಿತಿಪರೊಳಗೆ ಪೂಜೆಗೊಳುತ ॥ ೬ ॥

ಕೆಲವುದೇಶವ ನೋಡುತೆಯ್ದೆ ಕರ್ಣಾಟಭೂ । ತಳಪತಿಯೆಯ್ತಂದು ತನ್ನ ॥
ಪೊಳಲಿಗೆ ಕೊಂಡೊಯ್ದನಾತ ಸೋದರಮಾವ । ನಳಿಯನ ಕರೆದೊಯ್ಯದಿಹನೆ ॥ ೭ ॥

ಕುಂತಲಾವತಿಯಣ್ಣ ಭಾನುರಾಜನು ಭಾಗ್ಯ । ವಂತನು ಕಿಷ್ಕಿಂಧಪುರಕೆ ॥
ನೋಂತರ್ಕಕೀರ್ತ್ಯಾದಿರಾಜರನೊಯ್ದನ । ನಂತವೈಭವವ ಮಾಡಿದನು ॥ ೮ ॥

ಅಂದೆಲ್ಲ ಕಿಷ್ಕಿಂಧಪುರವೆಂಬರಾನೆಯ । ಗೊಂದಿಯೆಂಬರು ಕಲಿಯುಗದಿ ॥
ತಂದಲ್ಲಿ ತನ್ನ ಪುತ್ರಿಯರನಿಬ್ಬರನಳಿ । ಯಂದಿರಿಬ್ಬರಿಗಿತ್ತನೊಸೆದು ॥ ೯ ॥

ಭಾನುಮತಿಯನರ್ಕಕೀರ್ತಿರಾಜಗೆ ವಸಂ । ತಾನಿಯನಾದಿರಾಜನಿಗೆ ॥
ಭೂನಾಥ ಕೊಡಲು ಕೈಕೊಂಡು ಪಶ್ಚಿಮದೇಶ । ಕಾ ನೃಪರೊಯ್ಯನೆಯ್ದಿದರು ॥ ೧೦ ॥

ವಾರತೆಗೇಳ್ದೆಬ್ದಿ ಕುಸುಮಾಜಿಯಣ್ಣನು । ವೀರವಿಮಲರಾಜನವರಾ ॥
ಸೌರಾಷ್ಟ್ರದೇಶದ ಗಿರಿನಗರಿಗೆ ತಂದು । ಭೂರಿಸತ್ಕಾರಮಾಡಿದನು ॥ ೧೧ ॥

---

* ಮಹಾಸುಕೃತಿ.

ವಿಮಲಾಜಿಯೆಂಬ ಪುತ್ರಿಯ ಯುವರಾಜಗೆ । ಸಮನಿಸಿ ತನ್ನಿಂದ ಕಿರಿಯ ॥
ಕಮಲರಾಜನ ಪುತ್ರಿ ಕಮಲಾಜಿಯೆಂಬಳ । ಕ್ರಮಗೈದನಾದಿರಾಜನಿಗೆ ॥ ೧೨ ॥

ತಡೆಯದಲ್ಲಿಂದೆದ್ದು ಕೆಲವು ದೇಶದೊಳರ್ತಿ । ವಡುತ ಕಾಶಿಯ ನಾಡ ಹೊಕ್ಕ ॥
ಅಡಿಯಿಡುವಾಗಲ್ಲಿ ಹೊಸತೊಂದು ಸುದ್ದಿ ಸಂ । ಗಡಿಸಿತಾ ನೃಪರಿಗೇನೆಂಬೆ ॥ ೧೩ ॥

ವಾರಾಣಸಿಯನಾಳ್ವಕಂಪರಾಜನ ಸುಕು । ಮಾರಿ ಸುಲೋಚನಾದೇವಿ ॥
ಕೋರಿಸಿಕೊಂಬ ಪೆಣ್ಣವಳ ಸ್ವಯಂವರ । ಪ್ರಾರಂಭವಾಯ್ತೆಂದರಲ್ಲಿ ॥ ೧೪ ॥

ನೋಡಿ ಸುಲೋಚನಾದೇವಿ ಮಾಲೆಯನೊಲ್ದು । ಸೂಡಿದಾತನಿಗೀವೆನೆಂದು ॥
ನಾಡರಸುಗಳಿಗೋಲೆಯನಟ್ಟಲೆಲ್ಲರು । ಕೂಡಿದ್ದರೆಂದುಸುರಿದರು ॥ ೧೫ ॥

ಹೆಣ್ಣೆಂಬ ವಾರ್ತೆಯ ಕೇಳಿ ಕಾಮುಕರೆದೆ । ಹಣ್ಣಾಗಿ ಬಾಕುಳಿಗೊಂಡು ॥
ಹಣ್ಣುಳ್ಳ ಮರಕೆ ಹಕ್ಕಿಗಳೋಡಿ ಬಹ ಮೋಡಿ । ಹಣ್ಣಿ ಕೂಡಿದರೆಂದರೊಡನೆ ॥ ೧೬ ॥

ಅಂಬುಜವಿದ್ದ ತಾಣಕೆ ದಿಕ್ಕುದಿಕ್ಕಿಂದ । ತುಂಬಿಗಳೋಡಿ ಬಹಂತೆ ॥
ಅಂಬುಜಮುಖಿಯಿದ್ದ ಪುರಕೆ ಭೂಪರು ಬಂದು । ತುಂಬಿದ್ದರೆಂದುಸುರಿದರು ॥ ೧೭ ॥

ಬೀಡೂಟ ಮೊಹದಿಂದುಡುಗೊರೆಯಿಂ ನಾಟ್ಯ । ಕ್ರೀಡೆಯಿಂದೆಲ್ಲರ್ಗೆ ಮುದವಾ ॥
ಮಾಡಿದಕಂಪರಾಜಗೆ ಸರಿಯುಂಟಿಯೆಂ । ದಾಡುತಿರ್ದರು ತವತವಗೆ ॥ ೧೮ ॥

ಗಾಡಿವಡೆದುದು ಸ್ವಯಂವರಮಂಟಪ । ಕೂಡೆ ಸಿಂಗರವಾಯ್ತು ನಗರಾ ॥
ಸೂಡುವಳಾಕೆ ಮಾಲೆಯನದು ನಾಳೆಯೊ । ನಾಡಿದೊಯೆಂದರಲ್ಲಲ್ಲಿ ॥ ೧೯ ॥

ಆ ಸುದ್ದಿಗೇಳ್ದು ಪರಾಕುಮಾಡಿದರು ಪ್ರ । ಕಾಶದಿ ಕೊಸರಿ ಲಾಲಿಸದೆ ॥
ಕೌಶಲ್ಯರೇಕಾಂತದೊಳು ಬಗೆದರು ಭರ । ತೇಶನ ಸುಕುಮಾರರತ್ತೆ ॥ ೨೦ ॥

ಆದಿದೇವರು ಹೇಳು ವಾರಾಣಸಿಗೆ ನಾವು । ಹೋದರೊಳ್ಳಿತೆಯೆಂದನಣ್ಣಾ ॥
ಹೋದರೇನೆಮ್ಮ ಬಂಟರ ಪುರಿಗಾವೆಯ್ದು । ಲಾದ ಕೊರತೆಯಾವುದೆಂದಾ ॥ ೨೧ ॥

ಅವನ ಮಗಳಿಗಾಸೆವಟ್ಟೋಲೆವಿಡಿದು ಬಂ । ದವರಂತೆ ಬಂದೆವೆ ನಾವು ॥
ಅವನಿಯ ನೋಡಲಪ್ಪಾಜಿಗರುಹಿ ಬಂದ । ಸುವಿಲಾಸವಿದು ಲೋಕವರಿಕೆ ॥ ೨೨ ॥

ಅದು ಹೋಹ ದಾರಿ ನಾವಿನ್ನೋರೆಯಾಗಿ ಸಾ । ಗಿದರದು ಗಂಭೀರವಲ್ಲ ॥
ಮದದಾನೆವಟ್ಟೆಯೊಳ್ಪೋಗುವವಲ್ಲಿ ತ । ಳ್ವದೆ ಮುಂದೆ ಸಾಗುವವೆಂದಾ ॥ ೨೩ ॥

ಕಂಡ ಮೇಲವರೆಮ್ಮ ಬಿಡಲರಿಯರು ಬೇಡಿ । ಕೊಂಡು ತಡೆವರು ನಿಂದಾಗ ॥
ಮಂಡಿತವೆನಿಪ ಸ್ವಯಂವರಗೃಹಕೊಡ । ಗೊಂಡೊಯ್ದರೆಂತೆಂದನಣ್ಣಾ ॥ ೨೪ ॥

ಕ್ಷೀಣರೆಯ್ದುವರು ಸ್ವಯಂವರಶಾಲೆಗೆ । ಜಾಣರೆಯ್ದುವರೆ ಎಯ್ದಿದರೆ ॥
ಏಣಾಕ್ಷಿ ಮಾಲೆಯನೊರ್ವಗಿಕ್ಕುವಳೆಲ್ಲ । ರೂಣೆಯಬಟ್ಟು ಜಾರುವರು ॥ ೨೫ ॥

ಅರಡಿಗುರುಳಳನಾಸೆವಟ್ಟೆಲ್ಲರು । ಮೋರೆಯ ಬಾತುಕೊಂಡಿದ್ದು ॥
ನೀರೆಯೊಬ್ಬಗೆ ಮಾಲೆಯಿಡೆ ತಮ್ಮ ಲಜ್ಜೆಯ । ಮಾರಿ ಜಾರುವರದು ಬದುಕೆ ॥ ೨೬ ॥
ಒಂದು ಹೆಣ್ಣಿಗೆ ಸರ್ವರಾಶೆವಡುವುದದು । ಚಂದವೆ ಅವಳೊಬ್ಬ ನೃಪಗೆ ॥
ಸಂದಿಸೆ ಮಾಲೆಯ ತಾವೆಲ್ಲ ಶೋಭನ । ವೆಂದು ಹಾಡಿದ ಭಂಡರಲ್ತೆ ॥ ೨೭ ॥
ಆದರಿಂದ ನಾವಲ್ಲಿಗೆಯ್ದಬಾರದು ನಮ್ಮ । ಸದನದೊಳಿಹವೆಂದನನುಜಾ ॥
ಅದು ಕಾರ್ಯವಹುದೆಮ್ಮ ಕಾಲ್ಗಳಿಗೆರಗಿ ಕಾ । ಡಿದರೆಂತುಟೆಂದನಗ್ರಜನು ॥ ೨೮ ॥
ಬರಬಾರದೆಂದರಕಂಪ ನೋವನು ಮತ್ತೆ । ದೊರೆಗಳೆಲ್ಲರಿಗೆ ಸಿಗ್ಗಹುದು ॥
ಕರೆದಾಗ ದೇವರವರಿಗೆ ನಿರೂಪಿಸು । ವಿರವ ಬಿನ್ನೈಪೆ ಚಿತ್ತೈಸು ॥ ೨೯ ॥
ಹಲಬರಿಗೋಲೆಗಳುಹಿದಂತೆ ನವಗೋಲೆ । ಗಳುಹಿತಿಲ್ಲೆಂದೊಂದು ನೆವದಿ ॥
ತೊಲಗಿಸು ನಾವು ಬೀಡಾರದೊಳಿಹವವ । ರೆಳಸಿದರ್ಥವ ಮಾಡಲೆಂದಾ ॥ ೩೦ ॥
ಭಲರೆ ನನ್ನೆದೆಯೊಳಿರ್ದುದು ತಾನೆ ನೀನಿದ । ತಿಳಿದುದಾಯ್ತೆಂದಿಬ್ಬರೊಪ್ಪಿ ॥
ಕೆಲದವರರಿಯದಂದದಿ ಮಾಜಿ ಪೊರಮಟ್ಟು । ತಳರುತಿರ್ದರು ವಿಲಾಸದೊಳು ॥ ೩೧ ॥

ಯುವರಾಜನೆಯ್ತರುತಿಹನೆಂಬ ಸುದ್ದಿ ಹು । ಟ್ಟುವುದು ಕಾಶಿಯ ಭೂಪ ತನ್ನ ॥
ಕುವರಿಯುದ್ವಾಹಕೆಯ್ತಂದನೆಂದೆನ್ನ ಪು । ಣ್ಯವೆಯೆಂದು ನಲಿದನೆದೆಯೊಳು ॥ ೩೨ ॥
ಭೂಚರಖೇಚರರೆಯ್ದಿದರೇನು ಮ । ಹಾಚಕ್ರಧರನ ನಂದನರು ॥
ಈ ಚೆಲ್ವೆಕೂರ್ತೆನ್ನ ಬಳಿಗೆಯ್ದಿದಾಗ ನಾ । ನೇ ಚಿತ್ರತರಭಾಗ್ಯನೆಂದಾ ॥ ೩೩ ॥
ಎರೆಯನ ಸುತರೊಂದು ನೆವದೊಳೆಯ್ತಂದರು । ಬೆರತಾಗ ನನಗೆ ಕೇಡಹುದು ॥
ಅರಿದತಿಭಯಭಕ್ತಿಮಾಡಬೇಕೆಂದು ಮೈ । ಮರೆಯದುಜ್ಜುಗಿಸಿದನವನು ॥ ೩೪ ॥
ತನ್ನರಮನೆಯ ತೆರಪುಮಾಡಿ ತಾನೊಂದು । ಭಿನ್ನಗೃಹದೊಳೊಕ್ಕಲಾದಾ ॥
ತನ್ನಯ ಪುರಜನಪರಿಜನಗೂಡಿ ಗು । ಣೋನ್ನತನಿದಿರೆಯ್ದುತಿರ್ದಾ ॥ ೩೫ ॥
ನಾಳಿನ ನಾಡಿದಿನಾಣ್ಮರೆಂಬಾಗ ಭೂ । ಪಾಲರು ಕಾಶಿಯಾಣ್ಮನೊಳು ॥
ಮೇಳೈಸಿ ತೆರಳಿದರೊಡೆಯರೆಯ್ತಹುದ ಕೇ । ಳ್ದಾಳುಗಳಿಹರೆ ಮೈಮರೆತು ॥ ೩೬ ॥
ಚೀರುವ ಕಾಳೆ ತಂಬಟ ಭೇರಿಯಿಂದೆತ್ತಿ । ತೋರುವ ಟಕ್ಕೆಯದಿಂದ ॥
ಮೂರುಪಯಣವ ಬಂದೆಲ್ಲರು ಕಂಡರು । ಧೀರಕುವರರರನೋಜೆಯೊಳು ॥ ೩೭ ॥

ತಂಡತಂಡದೊಳು ನಿವಾಳಿಕಾಣಿಕೆಯಿಕ್ಕಿ । ದಿಂಡುಗೆಡೆದ ಸರ್ವನೃಪರಾ ॥
ಕಂಡರ್ಕಕೀರ್ತಿರಾಜೇಂದ್ರನೇಳೇಳಿರೈ । ಪಿಂಡಿತಾನಂದಿಗಳೆಂದಾ ॥ ೩೮ ॥
ನಲಿದೆದ್ದರೆಲ್ಲರಕಂಪರಾಜನ ಮೋರೆ । ಯೊಳೆದು ನಿಟ್ಟಿಸಿ ಯುವರಾಜಾ ॥
ನೆಲದಾಣ್ಮರೆಲ್ಲರು ನಿನ್ನೊಡನೆಯ್ದಿದ । ಗ್ಗಳವೇನಕಂಪಾಂಕಾಯೆಂದಾ ॥ ೩೯ ॥

ಅಲ್ಲಲ್ಲಿ ನಾಡ ನೋಡುತ ಬಂದೆವಾ ನಾಡಿ । ನಲ್ಲಿ ನಾಡೊಡೆಯರೆಯ್ತಹರು ॥
ಇಲ್ಲಿ ಪಲವುನಾಡಿನವರು ಕೂಡಿದುದೇನು । ಸೊಲ್ಲಿಸೈ ಚೋದ್ಯವಿದೆಂದಾ ॥ ೪೦ ॥
ಅರುಹಪೂಜೆಯೊ ಮದುವೆಯೊ ಅಲ್ಲವಿದು ಸ್ವಯಂ । ವರಕೆ ಕೂಡಿದ ಕೂಟದಂತೆ ॥
ಕರ ಸೊಬಗಾಗಿದೆ ಹೇಳೆಂದನರಿಯುದ । ಪರಿಯೊಳಾ ರಾಜವೋಡಿಗನು ॥ ೪೧ ॥
ಹುಸಿಯದು ದೇವರ ಕಡೆಯು ನಿರೂಪ ಚೆ । ಲ್ವೆಸೆವೊಬ್ಬ ಪುತ್ರಿಯುಂಟವಳ ॥
ಒಸಗೆಗೀ ನೃಪರೆಯ್ದಿದರು ದೇವರೆಯ್ದೆ ಸಂ । ತಸಕೆ ಸಂತಸವಾದುದೆಂದಾ ॥ ೪೨ ॥
ಭರತೇಶ ಚಿತ್ತೈಸಿದಂತಾಯ್ತು ದೇವರಿ । ಬ್ಬರು ಬಿಜಯಂಗೈದು ನನ್ನ ॥
ಧರೆಯ ಪಾವನವ ಮಾಡಿದಿರೆಂದು ಕಾಶಿಯ । ದೊರೆಯುಬ್ಬಿ ಬಿನ್ನವಿಸಿದನು ॥ ೪೩ ॥
ಮೇಘೇಶ ಮೊದಲಾದ ಭೂಚರಾವಳಿ ಖೇಚ । ರಾಘವೆರಸಿಯಿದಿರ್ಗೊಂಡು ॥
ಶ್ಲಾಘಿಸುತಾ ಭೂಪ ತನ್ನ ಪುರಕೆ ತಂದ । ನಾ ಘನೋಜ್ಜ್ವಲರಾಜಸುತರಾ ॥ ೪೪ ॥
ಪುರದೊಳೆಯ್ತುರುವಾಗ ಬೀಡಾರಕೀತ ತ । ನ್ನರಮನೆದೆಗೆದಿರ್ದನೆಂಬ ॥
ಪರಿಗೇಳ್ದು ತಮ್ಮನ ಮೊಗನೋಡಲಾದಿಭೂ । ವರನಣ್ಣಗಿಂತೆಂದನಾಗ ॥ ೪೫ ॥
ತೆರಪಿನರ್ತಿಯ ತೊಡಗಿರ್ದನಕಂಪಾಂಕ । ತೆರಪಿನ ಮನೆ ತನಗಿರಲಿ ॥
ತೆರಪಿನೊಳೊಸಗೆಯಾಗಲಿ ಬೇರೆ ಬೀಡಾರ । ತೆರಪು ದೇವರಿಗಾಗಲೆಂದಾ ॥ ೪೬ ॥
ಆದಿರಾಜನ ಮಾತ ಕೇಳಕಂಪಾಂಕಯೆಂ । ದಾದರದಿಂದಣ್ಣ ನುಡಿದಾ ॥
ಕಾದಿ ಕೇಳದೆ ತನ್ನ ಮನೆಗೆ ಕರೆವನವ । ನೋದೋದಿ ತಡೆದನಾ ನೃಪತಿ ॥ ೪೭ ॥
ನನಗೆಂದು ತೆರಪುಗೊಟ್ಟಾಗಳೆ ನೀನಿದ್ದ । ಮನೆ ನನ್ನ ಬೀಡಾರವಾಯ್ತೆ ॥
ಜನಗೋಷ್ಠಿ ಬೇಡೂರ ಹೊರಗೊಂದು ವನದಲ್ಲಿ । ಮನೆಯುಳ್ಳರುತ್ತಮವೆಂದಾ ॥ ೪೮ ॥
ಚಿತ್ರಾಂಗನೆಂಬ ದೇವನು ಪೂರ್ವಭವದೆನ್ನ । ಮಿತ್ರನವನು ಸ್ವಯಂವರವಾ ॥
ಚಿತ್ರಿಸಿ ವನದೊಳೆರಡುಮನೆಗೈದನಾ । ಕ್ಷೇತ್ರವ ನಿಟ್ಟಿಸಿಯೆಂದಾ ॥ ೪೯ ॥
ಪರಮಸಂಭ್ರಮದೊಳಾ ವನಕೆಯ್ದಿ ರಾಜರಿ । ಬ್ಬರು ಮನೆಗಳೊಳೊಕ್ಕಲಾಗೆ ॥
ಪರಿವಾರವೆಲ್ಲವು ಹೊರಗೆ ಪಾಳೆಯಬಿಟ್ಟ । ಸಿರಿಯೆ ತನ್ಮಯವಾದುದಾಗ ॥ ೫೦ ॥
ಸಾರವಸ್ತುಗಳುಲುಪೆಯೊಳೈದುದಿನವುಪ । ಚಾರಗೈದಾ ನೃಪರೆಡೆಗೆ ॥
ಭೂರಿನೃಪರುಗೂಡಿ ಕಾಶಿಯಣ್ಣನು ಬಂದು । ವಾರತೆಗೈದನೇನೆಂಬೆ ॥ ೫೧ ॥
ಯುವರಾಜ ಬಿನ್ನಹ ದೇವರೆಯ್ತರೆ ಮುನ್ನ । ಹವಣಿಸಿದೊಂದು ಲಗ್ನದೊಳು ॥
ಅವಸರಗೊಳ್ಳದುಳುಹಿದೆನು ನಾಳಿನ । ದಿವಸವುತ್ತಮಲಗ್ನವೆಂದಾ ॥ ೫೨ ॥
ಅಣ್ಣತಮ್ಮದಿರು ನೀವಾ ಸ್ವಯಂವರಮುಟ್ಟ । ಪಣ್ಣನೆ ಬಿಜಯಂಗೈದು ॥
ಹೆಣ್ಣಿನುದ್ವಾಹವ ಸೊಬಗುಮಾಡುವುದೆಮ್ಮ । ಕಣ್ಣ ಹಬ್ಬವ ಮಾಳ್ಪುದೆಂದಾ ॥ ೫೩ ॥

ಬಾರೆವಲ್ಲಿಗೆ ನಾವು ನೀನಿನ್ನು ಮಿಕ್ಕಿನ । ಭೂರಮಣರ ಕೂಡಿಕೊಂಡು ॥
ಪ್ರಾರಂಭಗೈದ ಕಾರ್ಯವ ಚಂದಮಾಡು ನ । ಮ್ಮಾರೈಕೆಯೆಂದನಾ ನೃಪತಿ ॥ ೫೪ ॥
ನೀವೆಯ್ದದಿದ್ದರುದ್ವಾಹ ಚೆಲ್ವಹುದೆ ಪ್ರ । ಭಾವದಿಂದೆಯ್ದಬೇಕೆಂದು ॥
ಭೂವರರೊಡಗೂಡಿ ಪ್ರಾರ್ಥಿಸುವಾಗ ಕ । ಲಾವಿದ ನುಡಿದನಿಂತೆಂದು ॥ ೫೫ ॥
ಕೇಳಕಂಪಾಂಕ ಸರ್ವರಿಗೋಲೆಗಳುಹಿದಂ । ತೋಲೆಯ ಕಳುಹಿತಿಲ್ಲೆಮಗೆ ॥
ಲೀಲಾರ್ಥ ದಾರಿಗರಾಗಿ ಬಂದವರು ಕ । ನ್ಯಾಲಯಕಡಿಯಿಡಬಹುದೆ ॥ ೫೬ ॥
ಆ ಕಾರ್ಯಕರ್ತೃ ಬಂದರಸುಗಳ್ವೆರಸು ನೀ । ನಾ ಕಾರ್ಯವೆಸಗು ನಾವದಕೆ ॥
ಏಕಚಿತ್ತದೊಳೊಡಂಬಟ್ಟೆವು ನಡೆಯೆಂದು । ತೂಕದೊಳ್ನುಡಿದನಾ ನೃಪತಿ ॥ ೫೭ ॥
ಸಾರ್ವಭೌಮನ ಕುವರರಿಗೋಲೆಗಳುಹುವ । ದೋರ್ವಲಕಳುಕಿರ್ದನೈಸೆ ॥
ಗರ್ವದೊಳಿರ್ದವನಲ್ಲ ಚಿತ್ತೈಸೆಂದ । ಪೂರ್ವವಿನಯದೋರಿ ನುಡಿದಾ ॥ ೫೮ ॥
ಸರಿವಂಶದವರೊಸಗೆಗೆ ಕರೆವುದಕೆ ಭೀ । ಕರವೇಕೆ ಸಿರಿಯ ಹೆಚ್ಚೇನು ॥
ಕರೆಯದೆ ಬಂದವರಲ್ಲಿಗೆ ಬರಬಾರ । ದರಸುಮಕ್ಕಳ ಸುಮಾರ್ಗವಿದು ॥ ೫೯ ॥
ಅಪ್ಪಾಜಿಯರ ಚಿತ್ತಕಾಗದು ನಾವಿಬ್ಬ । ರಿಪ್ಪೆವೆಮ್ಮಾಪ್ತಿಗರ್ಬಹರು ॥
ಛಪನ್ನದೇಶದ ನೃಪರು ಖೇಚರರಿಹ । ರೊಪ್ಪವ ಮಾಡು ಹೋಗೆಂದಾ ॥ ೬೦ ॥
ಸುರಚಂದ್ರ ಶುಭಚಂದ್ರ ಗುಣಚಂದ್ರ ಶ್ರೀಚಂದ್ರ । ವರಚಂದ್ರ ವಿಕ್ರಾಂತಚಂದ್ರಾ ॥
ಹರಿಚಂದ್ರ ರಣಚಂದ್ರರೆಂಬೆಂಟು ಮಂದಿ ಚಂ । ದ್ರರ ಕಳುಹಿದನು ತನ್ನವರಾ ॥ ೬೧ ॥
ಉದ್ದಂಡಮತಿಯೆಂದು ಸನ್ಮತಿಯೆಂದಿಬ್ಬ । ರಿದ್ದರು ತನ್ನ ಮಂತ್ರಿಗಳು
ಬಿದ್ದಿನರೊಸಗೆಯ ಕಂಡೆಯ್ಬರೆಂದು ಪೆಂ । ಪೆದ್ದು ಬೀಳ್ಕೊಟ್ಟನಾ ಸುಮುಖಾ ॥ ೬೨ ॥
ನಾವಿದ್ದೇವೆಂಬಳ್ಕು ಬೇಡ ಶೃಂಗಾರಪ್ರ । ಭಾವದೊಳಾಟಪಾಟದೊಳು ॥
ನೀವರ್ತಿಮಾಳ್ಪುದೆಂದಖಿಳರಾಜರಿಗೊರೆ । ದಾ ವಿನೋದಾರ್ಥಿ ಬೀಳ್ಕೊಟ್ಟಾ ॥ ೬೩ ॥
ಸುರಚಂದ್ರಮುಖ್ಯವಾದಷ್ಟಚಂದ್ರರು ತನ್ನ । ಪರಿವಾರ ಮುಖ್ಯರಾಪ್ತಿಗರು ॥
ಅರಸುಮಕ್ಕಳು ಚೆಲ್ವರವರು ಮಂತ್ರಿಗಳೊಡ । ವರಲೆಲ್ಲರೊಪ್ಪಿ ಸಾಗಿದರು ॥ ೬೪ ॥

ಮರುವಗಲೆಸೆವ ಮೂರನೆಯ ಜಾವದೊಳೂರ । ಪೊರಗೆ ರಾಜಿಪ ಸ್ವಯಂವರಕೆ ॥
ತುರುಗಿದ ನೃಪಸುತರೆಲ್ಲರು ಬಪ್ಪುದೆಂ । ದೊರಲಿತು ಭೇರಿಯ ಸನ್ನೆ ॥ ೬೫ ॥
ಸಿಂಗರಿಸಿದ ರಾಜಸುತರೆಲ್ಲರಾತ್ಮಬ । ಲಂಗೂಡಿ ವಾದ್ಯಘೋಷದೊಳು ॥
ಮಂಗಲಮಸಗೆ ಬಂದಾ ಸ್ವಯಂವರವ ಬೆ । ಡಂಗಿಂದ ಹೊಕ್ಕರುಬ್ಬಿನೊಳು ॥ ೬೬ ॥
ಅಗಲದ ಮಂಟಪದಲ್ಲಿ ಸಾಲಾಗಿ ಗ । ದ್ದುಗೆಯಿಟ್ಟು ಬೇರೆಬೇರಾಗಿ ॥
ಬಗೆಯರಿದೆಲ್ಲರ್ಗೆ ರಚಿಸಿರ್ದ ಹಲವುಚಾ । ಕಿಗೆಯಲ್ಲಿ ಕುಳಿತರೊಪ್ಪದೊಳು ॥ ೬೭ ॥

ಮಾಲೆಯಿಕ್ಕಿದ ಮೇಲೆ ದಿಗಿಲನೆ ಪೋಪರೆಂ । ದಾಲೋಚಿಸಿ ಕಾಶಿಯಾಣ್ಮ ॥
ವೀಳೆಯದುಗುಲದಿ ಪರಿಮಳದಿಂದ ಭೂ । ಪಾಲರ ಮೊದಲೆ ಮನ್ನಿಸಿದಾ ॥ ೬೮ ॥

ಗೆಲ್ಲವರೆಯ ರಭಸದಿ ತನ್ನ ಸೇನೆಯ । ಚೆಲ್ಲಕಾತಿಯರ ಮೇಳದೊಳು ॥
ಪಲ್ಲಕ್ಕಿಯೇರಿ ಸುಲೋಚನಾದೇವಿ ತ । ಳ್ಪಿಲ್ಲದೆಯ್ತುರುತಿರ್ದಳಾಗ ॥ ೬೯ ॥

ಕಡುಚೆಲ್ವೆಯಹುದು ಸ್ವಯಂವರಕೊಪ್ಪುವ । ಮಡದಿ ತಾನಹುದಾದರವಳು ॥
ಪಿಡಿವ ಪೂರುಷನಲ್ಪನದರಿಂದ ವೆಗ್ಗಳ । ನುಡಿಯೆನಲ್ಪವನೆ ಸೂಚಿಪೆನು ॥ ೭೦ ॥

ನಾಂಟೆ ಚಕ್ರಿಯ ಮತ್ತೆ ಚಕ್ರೇಶನರಸಿಯ । ರ್ಗುಂಟಾದ ಗುಣವ ಪೇಳ್ವಂತೆ ॥
ಬಂಟರ ಪೆಂಡಿರ ಪೇಳ್ವೆನೆಂದರೆ ಜಿಹ್ವೆ । ಕುಂಟುತಿರ್ದುದು ಹರಿಯದಿದೆ ॥ ೭೧ ॥

ಮೆಚ್ಚಿ ಬಣ್ಣಿಸುವರೆ ಪಾಡಲ್ಲ ಕವಿತೆಯೊ । ಳುಚ್ಚಸ್ವಯಂವರವೆಂದು ॥
ಒಚ್ಚತರಸದೋರದಿರೆ ಸೊಗಸಲ್ಲ ವೊ । ಪ್ಪಚ್ಚಿ ಬಣ್ಣಿಸುವೆನೆಂತೆನಲು ॥ ೭೨ ॥

ಮದನನ ಮದದಾನೆ ಬರುತಿದೆ ಮೋಹಸಾ । ರದ ತೇರು ನೂಂಕಿಯೆಯ್ದುತಿದೆ ॥
ಇದಿರಾಗದಿರು ತೊಲತೊಲಗೆಂದು ವೇತ್ರದ । ಸುದತಿಯರುಲಿಯಲೆಯ್ದಿದಳು ॥ ೭೩ ॥

ಚಿಮ್ಮುವ ಚಾಮರ ಛತ್ರ ಪತಾಕೆಯಿಂ । ದಿಮ್ಮೆಯ್ಯೊಳೆಸೆವ ಗಾನದೊಳು ॥
ಕಮ್ಮಗೋಲನ ವೀರಸಿರಿಯಂತೆ ಬಂದಳು । ಘಮ್ಮನೆ ತೀಡೆ ವೈಭಾಳಿ ॥ ೭೪ ॥

ಉಕ್ಕಂದದರಸುಗುವರರಾಸೆವಟ್ಟು ಕ । ಣ್ಣಿಕ್ಕಿ ದಾರಿಯ ನೋಡಲೆಯ್ದಿ ॥
ಸೊಕ್ಕುಜವ್ವನೆ ಚಾಂಗು ಭಲ ಜಯಯೆನಲು ಪ । ಲ್ಲಕ್ಕಿಯಿಂದಿಳಿದಳಾ ನೀರೆ ॥ ೭೫ ॥

ನಿರಿಗುರುಳಬಲೆ ಪಲ್ಲಕ್ಕಿಯ ಪನ್ನಂಗ । ಮರೆ ಜಾರಿ ನಿಂದಾಗ ಸ್ಮರನು ॥
ಒರೆಯಿಂದ ಜಡಿದುಚ್ಚಿ ಪಿಡಿದ ಕೂರಸಿಯಂತೆ । ಮೆರೆದಳು ನೋಳ್ಪರ ಕಣ್ಗೆ ॥ ೭೬ ॥

ಸೊಗಸಾದುದಿಲ್ಲವಾ ನುಡಿಯದಂತಿರಲಿ ತೊ । ಟ್ಟಗೆ ಮರೆ ಜಾರಿ ನಿಂದಾಗ ॥
ಮುಗಿಲು ಜಾರಿದ ಚಂದ್ರಲೇಖೆಯೊ ಎಂಬಂತೆ । ಮೃಗಧರವದನೆಯೊಪ್ಪಿದಳು ॥ ೭೭ ॥

ಸ್ಮರನರಗಿಳಿ ಪೊನ್ನ ಪಂಜರವಿಳಿದು ಸಿಂ । ಗರವನದೊಳು ಹೋಗುವಂತೆ ॥
ತರುಣಿ ಪಲ್ಲಕ್ಕಿಯಿಂದಿಳಿದು ಭೂಪಾಲರ । ನೆರವಿಗೆಯ್ದಿದಳೇನನೆಂಬೆ ॥ ೭೮ ॥

ಕಾಂಚನರತ್ನಭೂಷಣದ ಪ್ರಕಾಶ ಪ । ಳಂಚೆ ಶರೀರಕಾಂತಿಯೊಳು ॥
ಮಿಂಚಿನ ಮಾಲೆಯೊ ಬಾಲೆಯೊಯೆಂಬಂತೆ । ಚಂಚಲನೇತ್ರೆಯೆಯ್ದಿದಳು ॥ ೭೯ ॥

ಖೇಚರಭೂಚರನೃಪರ ನೋಡಿದಳು ವಿ । ಲೋಚನಪ್ರಭೆ ತಳತಳಿಸೆ ॥
ಆ ಚೆಲ್ವೆಗೊಪ್ಪುವುದೆನಿಸಿದುದಾಗ ಸು । ಲೋಚನೆಯೆಂದೆಂಬ ನಾಮಾ ॥ ೮೦ ॥

ತೆಂಕಣ ಗಾಳಿಯ ತೀಟದಿ ವನತರು । ಸಂಕುಳ ಚಿಗುರೇರುವಂತೆ ॥
ಪಂಕಜಾಕ್ಷಿಯ ನೋಟ ತಾಗಲೊಡನೆ ಪುಳ । ಕಾಂಕುರ ನೆಗೆದುವೆಲ್ಲರಿಗೆ ॥ ೮೧ ॥

ಚಾರುಚಂದ್ರಮನ ಕಾಂತಿಗೆ ಮೋರೆ ಬಾತು ಚ । ಕೋರಪಕ್ಷಿಗಳು ನೋಳ್ಪಂತೆ ॥
ಆ ರಮಣಿಯ ರೂಪಿಗೆದೆಸೋತು ಕೂಟಕೆ । ಹಾರೈಸಿ ನೋಡಿದರವರು ॥ ೮೨ ॥

ಮೊಗದಲ್ಲಿ ಕೊರಳಲ್ಲಿ ಬಲ್ಮೊಲೆಯಲ್ಲಿ ತೋ । ಳುಗಳಲ್ಲಿ ಸೆಳೆನಡುವಿನೊಳು ॥
ಪೊಗುವುವು ನೃಪರ ಕಂಗಳು ಪೊಕ್ಕ ಬಳಿಕಿತ್ತ । ತೆಗೆದರೆ ಬಾರವೇನೆಂಬೆ ॥ ೮೩ ॥

ನಿರಿಯೆಂಬ ತೆರೆಯಲ್ಲಿ ಮೀನಂತೆ ಹರಿದೊಳ । ಗೆರಗಿ ನುಣ್ದೊಡೆಯನಪ್ಪುವುವು ॥
ಪೊರವಾರಿಗೇರಿ ಕೆಂಬಜ್ಜೆಗಿಳಿದು ಪರಿ । ಮರಿಯಾಡಿದುವು ಕಂಗಳವರ ॥ ೮೪ ॥

ಕೂಟದ ಸುಖ ಮುಂದದಾವಗಹುದೊ ಇಂದು । ನೋಟದ ಸುಖವೆಲ್ಲಗರ್ಾಯ್ತು ॥
ಬೇಟವ ಮಾಡಿದರೆಲ್ಲರೊಬ್ಬಳಿಗೆ ಭಂ । ಡಾಟವಲ್ಲವೆ ಸ್ವಯಂವರವು ॥ ೮೫ ॥

ಆಸೆವಟ್ಟಿಲ್ಲರನವಳು ನೋಡಿದಳೆಲ್ಲ । ರಾಸೆವಟ್ಟವಳ ನೋಡಿದರು ॥
ಮೀಸಲಳಿದು ಭಾವರತಿಯಾಯ್ತು ಬಲು ಪರಿ । ಹಾಸವಲ್ಲವೆ ಸ್ವಯಂವರವು ॥ ೮೬ ॥

ಅರೆಬಾಯಬಿಟ್ಟಕ್ಷಿದೆರೆದು ವಿವೇಕಶೂ । ನ್ಯರು ನೋಡಿದರು ಭ್ರಾಂತರಾಗಿ ॥
ಭರತನಂದನರಲ್ಲಿಗೇಕೆಯ್ದಿತಿಲ್ಲ ಜಾ । ಣರ ದೇವನಾತ್ಮಜರಲ್ತೆ ॥ ೮೭ ॥

ನಡೆದಳು ಪೂಮಾಲೆವಿಡಿದಾಕೆ ಜೆಲ್ವರ । ನೆಡಬಲದಲ್ಲಿ ನಿಟ್ಟಿಸುತ ॥
ಒಡನೆ ಮಹೇಂದ್ರಿಕೆಯೆಂಬ ಕಟ್ಟಿಗೆಕಾತಿ । ನುಡಿದು ಕಾಣಿಸಿದಳೇನೆಂಬೆ ॥ ೮೮ ॥

ನೋಡೀತ ನೇಪಾಳರಾಜನೆಂದಳು ಪಾಟ । ಮಾಡದೆಯ್ದಿದಳಾಕೆ ಮುಂದೆ ॥
ಬಾಡಿತಾತನ ಮೋರೆ ಲಾಗುತಪ್ಪಿದ ಹೊಸ । ಕೋಡಗದಂತಿದ್ದನವನು ॥ ೮೯ ॥

ಹಮ್ಮೀರಪತಿ ಈತ ನೋಡೆನೆ ನಿಟ್ಟಿಸಿ । ಸುಮ್ಮನೆಯ್ದಿದಳು ಮುಂಗಡೆಗೆ ॥
ಉಮ್ಮಳವ ಕಂಬನಿ ಮಿಗೆ ಮರುಗಿದನವ । ತಮ್ಮಯ್ಯನೊಡನೆ ಹೋದಂತೆ ॥ ೯೦ ॥

ಚೀನದೇಶದ ರಾಯನಿವನೆನಲೀಕ್ಷಿಸಿ । ಮೀನಾಕ್ಷಿ ಮುಂದಕೆಯ್ದಿದಳು ॥
ಛೀ ನನ್ನ ಬದುಕೇನು ಸುಡುಸುಡೆಂದವ ನಾಣ್ಚಿ । ಮೌನದಿ ಕುಸಿದನು ತಲೆಯಾ ॥ ೯೧ ॥

ಲಾಟದೇಶದರಾಯನಿವನೆನಲೀಕ್ಷಿಸಿ । ಪಾಟಿಮಾಡದೆ ಹೋದಳವಳು ॥
ಕೂಟಕೆ ಬಂದು ನೂಕಿಸಿಕೊಂಡರಂತೆದೆ । ಗೋಟಲೆಗೊಳುತಿದ್ದನವನು ॥ ೯೨ ॥

ಗೌಡದೇಶದ ರಾಯನಿವನೆನೆ ಹಳ್ಳಿಯು । ಗೌಡನೆಂದೆಣಿಸಿ ಸಾಗಿದಳು ॥
ಔಡುಗಚ್ಚಿದನವ ಸೆರೆತು ನೋಡಿದ ತನ್ನ । ಗೌಡಿಯೊ ಬೆದರಿ ಬಹಾಗ ॥ ೯೩ ॥

ಬಂಗಾಳದರಸೀತ ನೋಡೆಂದರೀಕ್ಷಿಸಿ । ಮುಂಗಡೆಗೆಯ್ದಿದಳೊಡನೆ ॥
ಸಿಂಗಾರಮುರುಕು ವಿಡಾಯಹಾರಿತು ಹೊಸ । ಬಿಂಗಿಯಂತಿರ್ದನಾ ನೃಪತಿ ॥ ೯೪ ॥

ಅಂಗದೇಶಾಧೀಶನೀತ ಕಾಶ್ಮೀರ ಕ । ಳಿಂಗನು ಕಾಂಭೋಜನಿವನು ॥
ಸಿಂಗಳದರಸೀತನೆನೆ ನೋಡಿ ನಗುತ ಮ । ತಂಗಜಗಮನೆ ಸಾಗಿದಳು ॥ ೯೫ ॥

ಇವರು ಮ್ಲೇಚ್ಛೋರ್ವೀಪಾಲರು ನೋಡು ದೇವಿ ಮ । ತ್ತಿವರು ವಿದ್ಯಾಧರನೃಪರು ॥
ರವಿಕುಲ ಶಶಿಕುಲವಿಂತಂತುಟಿನೆ ಕೇಳ್ದು । ಯುವತಿ ಸಾಗಿದಳೋರೆವೊಗದಿ ॥ ೯೬ ॥
ಗುಣಚಂದ್ರರಾಜನು ಶುಭಚಂದ್ರರಾಜನು । ರಣಚಂದ್ರ ಸುರಚಂದ್ರನೆಂದು ॥
ಗಣನೆಯೊಳಷ್ಟಚಂದ್ರರ ತೋರಿದರೆ ನೋಡಿ । ತೃಣಕೆಣೆಗಂಡು ಸಾಗಿದಳು ॥ ೯೭ ॥

ಪರಿಪರಿಯರಲನೆಲ್ಲವ ಬಿಟ್ಟು ತುಂಬಿ ತಾ । ವರೆಯೊಂದ ಕಂಡು ನಿಲ್ವಂತೆ ॥
ದೊರೆಗಳೆಲ್ಲರ ತೊರೆದೊಬ್ಬನೊತ್ತಿಲಿ ನಿಂದ । ಳರರೆ ನೋಡವನ ಸೈಪೆಂತೊ ॥ ೯೮ ॥
ದೂರಿಸಿ ತನ್ನ ನೋಡಿದರ ಚಿತ್ತಕೆ ಬಾಯಿ । ನೀರ ಬರಿಸಿ ನೂಂಕಿ ಹೋಗಿ ॥
ನಾರಿ ತಾನೊಬ್ಬನ ಸೋತು ನೋಡಿದಳೆಂದ । ರಾ ರಾಯನೇನು ಚೆನ್ನಿಗನೊ ॥ ೯೯ ॥
ಒಡತಿಯು ಸೋಲವನರಿತು ಮಹೇಂದ್ರಿಕೆ । ಗುಡಿಗಟ್ಟಿ ಹೊಂಜೆಳೆಯೆತ್ತಿ ॥
ಬೆಡಗಾಯ್ತು ದೇವಿ ಕೇಳೀತನ ನೆಲೆಯು ಕ । ನ್ನಡಿಪೆನೆಂದಿಂತೆಂದಳಾಗ ॥ ೧೦೦ ॥
ಅಪ್ರತಿಹತನೀತ ಹಸ್ತಿನಪುರದ ಸೋ । ಮಪ್ರಭರಾಜನಾತ್ಮಜನು ॥
ಸುಪ್ರಸಿದ್ಧನು ಕುರುವಂಶಭೂಷಣನು ಕ । ಲಾಪ್ರವೀಣನು ಗುಣೋತ್ತಮನು ॥ ೧೦೧ ॥
ಭರತಚಕ್ರೇಶನ ಸೇನಾಗ್ರಗಣ್ಯನು । ಪರಬಲಕಾಲಭೈರವನು ॥
ಅರಿಗಳನಟ್ಟಿ ವೀರಾಗ್ರಣಿಯೆಂದೆಂಬ । ಬಿರುದನಾಂತವನಿವನೀಗ ॥ ೧೦೨ ॥
ಮೇಘಮುಖರ ಕಾಲಮುಖರನೋಡಿಸಿದ ಮ । ಹಾಘನವಿಕ್ರಾಂತನಿವನು ॥
ಮೇಘೇಶ್ವರನೀತ ಮಾಲೆಯ ಸೂಡೆಂದು । ಶ್ಲಾಘಿಸಿ ನಿಂದಳಾ ನೀರೆ ॥ ೧೦೩ ॥
ಬಗಸೆಗಣ್ಬೆಳಗಿನ ಮಾಲೆವೆರಸಿ ನಸು । ನಗೆವೆಳಗಿನ ಮಾಲೆಗೂಡಿ ॥
ತೆಗೆದು ಪೂಮಾಲೆಯನಿಟ್ಟಳಾತನಿಗೆ ಹೆ । ಣ್ಣುಗಳುಬ್ಬಿ ಜಯಜಯವೆನಲು ॥ ೧೦೪ ॥

ಮಾಲೆಯನವಳಾತಗಿಡಲಿದ್ದ ನೃಪರಿಗೆ । ಶೂಲೆಯಾದುದು ಹೊಟ್ಟೆಯೊಳಗೆ ॥
ಕಾಳಗಮುರಿದೋಡುವಂತೋಡಿದರು ಬೀಳು । ತೇಳುತೆಲ್ಲರು ಕಂಡಕಡೆಗೆ ॥ ೧೦೫ ॥
ಆನೆಯ ಮೇಲಳಿಯನು ತನ್ನ ಮಗಳೆಯ್ದ । ಲಾನದಕಂಪಭೂವರನು ॥
ಸಾನುರಾಗದೊಳೂರಪೊಕ್ಕರಮನೆಯ ಪೊ । ಕ್ಕಾನಂದವಡೆದಿರ್ದನತ್ತ ॥ ೧೦೬ ॥
ಇತ್ತ ಸ್ವಯಂವರಕೆಯ್ದಿದ ನೃಪರೆಲ್ಲ । ನೆತ್ತವನಾಡಿ ಸೋತಂತೆ ॥
ವಿತ್ತ ಹಾಳಾದಂತೆ ಮರುಗುತಿರ್ದರು ತಮ್ಮ । ಹೆತ್ತ ತಾಯ್ಸತ್ತಂದೆ ಹೋದಂತೆ ॥ ೧೦೭ ॥
ಒಬ್ಬರೊಬ್ಬರ ಮೋರೆನೋಡಿ ನಾಣ್ಚುವರತಿ । ಸಿಬ್ಬಿದಿಗೊಂಡು ಜಾರುವರು ॥
ಒಬ್ಬಳಿಗೆಲ್ಲರು ಬಂದುದಾಯ್ತಲ್ಲೆಂಬ । ರುಬ್ಬಸವಡುವರೆದೆಯೊಳು ॥ ೧೦೮ ॥

ಶುಭಚಂದ್ರರಾಜ ಮುಂತಾದಷ್ಟಚಂದ್ರರು । ಪ್ರಭೆಹಾರಿ ಚಿಂತಿಸುವಾಗ ॥
ಅಭಿಮುಖದೊಳಗೆ ನಿಂದುದ್ದಂಡಮತಿಯೊಂದು । ಕ್ಷುಭಿತವ ನುಡಿದನೇನೆಂಬೆ ॥ ೧೦೯ ॥

ಏನಿರೈ ನೀವು ಕ್ಷತ್ರಿಯರಲ್ತೆ ನಿಮ್ಮನು । ಹೀನಗಂಡವಳು ಮಾಲೆಯನು ॥
ಆ ನೃಪಗಿಡಲೊಪ್ಪಿ ಜಾರಬಹುದೆ ಆಭಿ । ಮಾನಿಗಳಂಗವೆಯೆಂದಾ ॥ ೧೧೦ ॥
ನಿವಗೆ ಬೇಡವನಿಗೆ ಬೇಡ ಮತ್ತಾ ಹೆಣ್ಣ । ಯುವರಾಜಗನುಗೊಳಿಪಂತೆ ॥
ಅವನೀಶರೆಲ್ಲರು ಕೂಡಿ ಯೋಚಿಸಿರೆನೆ । ಕಿವಿಗೊಟ್ಟರೆಲ್ಲರಾ ನುಡಿಗೆ ॥ ೧೧೧ ॥
ವಾರಣವಾಜಿನಾರಿಯರೊಳುತ್ತಮವಸ್ತು । ಸೇರಬೇಕೆನ್ನೊಡೆಯಗೆ ॥
ಈ ರೂಪಿನಬಲೆ ಈ ಬಂಟಗೆ ಸಲ್ವಳೆ । ದಾರಿಯೈ ನೀವೊಪ್ಪಿರೆಂದಾ ॥ ೧೧೨ ॥
ಅಹುದಹುದುದ್ದಂಡಮತಿ ಕಂಡುದಿದು ದುರಾ । ಗ್ರಹವಲ್ಲ ಸತ್ಯವೆಂದದಕೆ ॥
ಮಹಿಪರೊಪ್ಪಿದರಷ್ಟಚಂದ್ರರೊಪ್ಪಿದರು ಸಂ । ಗ್ರಹಿಸಿತು ನೋಡೊಂದು ಕದನಾ ॥ ೧೧೩ ॥
ಕ್ರೂರರಿಂದೇನಾಗದಾ ಮಂತ್ರಿ ಪೇಳೆ ಗಂ । ಭೀರಗೆಟ್ಟವರೊಪ್ಪಿ ತವಗೆ ॥
ಬಾರದೊಡವೆಯ ಬಲ್ಲಿದಗೆ ಕೋರುವವೆಂದು । ನೇರದೊಳೊಗ್ಗಾದರೆಲ್ಲ ॥ ೧೧೪ ॥
ಸಲ್ಲದೀ ಕೃತ್ಯವೆಂದುದ್ದಂಡಮತಿಗೊಂದು । ಸೊಲ್ಲ ಸನ್ಮತಿ ಪೇಳ್ದನದಕೆ ॥
ಎಲ್ಲರು ಮಸಗಿ ಝುಂಕಿಸಿದರು ನೀನೇನ । ಬಲ್ಲೆಯೈ ಸುಮ್ಮನಿರೆಂದು ॥ ೧೧೫ ॥
ವಸುಧಾಗ್ರಗಣ್ಯಗುತ್ತಮದ ನಾರಿಯ ನಾವು । ಬೆಸುಗೆಮಾಳ್ಪಾಗ ನೀನೊಂದು ॥
ಕಿಸುರ ಹಣ್ಣದಿರೆಂದು ಸರ್ವರಾಡಲು ತುಟಿ । ಮಿಸುಕದಿರ್ದನು ನೋಡುತವನು ॥ ೧೧೬ ॥
ನ್ಯಾಯಮಾರ್ಗವನು ನಮ್ಮರಸಿಗೆ ನಾನೊಂದು । ಪಾಯದಿ ನುಡಿದೊಡಂಬಡಿಸಿ ॥
ತೋಯಜಾಕ್ಷಿಯ ನೆರಪುವೆನೆಂದು ರಾಜನಿ । ಕಾಯಕೆ ಪೇಳ್ದನಾ ಮಂತ್ರಿ ॥ ೧೧೭ ॥
ಅಷ್ಟಚಂದ್ರರು ದುಷ್ಟಮಂತ್ರಿಯೊಂದಾಗಿ ವಿ । ಶಿಷ್ಟಮಂತ್ರಿಯ ಮಾತ ಹೊಳಿ ॥
ಕಷ್ಟವ ನೆನೆಯೆ ತಾಳದೆ ಹೋದನೆನೆ ಸೂರ್ಯ । ನಷ್ಟರೊಳಗೆ ಮಾಯವಾದಾ ॥ ೧೧೮ ॥
ಅಂಬುಜಸಖನುದಯಿಸಿದಾಗ ನೃಪನ ಕ । ರ್ಣಂಬುಗೆ ಪೇಳ್ವೆವೆಂದೆಣಿಸಿ ॥
ಇಂಬುಗೊಂಡಲ್ಲಲ್ಲಿ ಸರ್ವರಿದ್ದೆಡೆಗೆ ಸ್ವ । **ಯಂಬರಸಂಧಿ** ಸುಗಂಧಿ ॥ ೧೧೯ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೦ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೧ ॥
ಅಂಬರ ಮೆಯ್ಯಾದ ಪುರುಷ ಸುಜ್ಞಾನವೆ । ತುಂಬಿ ಮೆಯ್ಯಾದ ಸತ್ಪುರುಷಾ ॥
ತಂಬೆಳಗಿನ ಮೆಯ್ಯ ಪುರುಷ ನಮೋಸ್ತು ಚಿ । ದಂಬರಪುರುಷ ಚಿತ್ಪುರುಷಾ ॥ ೧೨೨ ॥

ಸ್ವಯಂವರಸಂಧಿ ಸಂಪೂರ್ಣಂ

# ಲಕ್ಷ್ಮೀಮತಿಯುದ್ವಾಹಸಂಧಿ

---

ಶ್ರೀನಿಧಿ ಗುಣನಿಧಿ ಸುಖನಿಧಿ ಮೋಕ್ಷಕ । ಲಾನಿಧಿ ತೀರ್ಥವಾರಿನಿಧಿ ॥
ಭಾನಿಧಿ ಶುಭನಿಧಿ ಮತಿದೋರು ಬೋಧನಿ । ಧಾನಾ ನಿರಂಜನಸಿದ್ಧಾ ॥ ೧ ॥

ಧೂರ್ತರಾಟವನಿಷ್ಟು ನೋಡುವೆನೊಡನರ್ಕ । ಕೀರ್ತಿರಾಜನ ಸುಮಂಗಲದ ॥
ವಾರ್ತೆಯ ಕೇಳ್ದು ಪೋಗುವೆನೆಂದು ಬಂದಂತೆ । ಮಾರ್ತಾಂಡ ಮೂಡ ಮೂಡಿದನು ॥ ೨ ॥

ಎದ್ದುದಯದಿ ಮೊಗದೊಳೆದರ್ಘ್ಯಪಾದ್ಯವ । ತಿದ್ದಿಕೊಂಡಖಿಳಭೂಭುಜರು ॥
ಉದ್ದಂಡಮತಿಗೂಡಿ ಕಂಡರು ಯುವರಾಜ । ನಿದ್ದೆಡೆಗೆಯ್ದಿ ಲಗ್ಗೆಯೊಳು ॥ ೩ ॥

ಏನಾದುದೈ ನಿಮ್ಮ ಕೂಟದ ಕಾರ್ಯವೆಂ । ದಾ ನರಪತಿ ಕೇಳ್ದ ನಗುತ ॥
ನೀನೊಬ್ಬ ಬಿನ್ನವಿಸುದ್ದಂಡಮತಿಯೆಂದು । ಮೌನದೊಳಿರ್ದರಾ ನೃಪರು ॥ ೪ ॥

ಮಾಲೆಯನೊಬ್ಬಗಿಕ್ಕಿದಳೆಂದರಾ ಹೆಣ್ಣ । ಮೇಲಾಸೆ ನೃಪಗಾಗದೆಂದು ॥
ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ । ಜಾಳಿಸಿ ನುಡಿದನೇನೆಂಬೆ ॥ ೫ ॥

ಬಿನ್ನಹ ವಿಭುವೆ ಸ್ವಯಂವರಶಾಲೆಗೆ । ಕನ್ನೆ ಬಂದೆಲ್ಲರ ನೋಡಿ ॥
ಭಿನ್ನಮಾನಸೆಯಾದಳಾರಿಗೂ ಮಾಲೆಯ । ತನ್ನರ್ತಿ ಮಿಗೆ ಸೂಡಿತಿಲ್ಲ ॥ ೬ ॥

ಬಂದ ಮೇಲೊಬ್ಬಗೆ ಮಾಲೆಯ ಸೂಡಬೇ । ಕೆಂದು ತಮ್ಮವರು ಪೇಳಿದರು ॥
ನಿಂದಾಕೆ ಸುಮ್ಮನಿರ್ದಳು ತನ್ನ ಮನಸಿಗೆ । ಬಂದುದಿಲ್ಲೇನೊ ಭೂವರರು ॥ ೭ ॥

ಲಂಚವ ಕೊಟ್ಟಿರ್ದನೇನೊ ಮೇಘೇಶ್ವರ । ಕಂಚುಕಿ ಹೊಗಳಿದಳವನಾ ॥
ಅಂಚೆಗಮನೆ ನೋಡಿ ಮೊಗದಿರುಹಿದಳು ಪ । ಳಂಚಿತು ತಂದೆಗೆ ಚಿಂತೆ ॥ ೮ ॥

ಕೂಡಿದ ನೃಪರೊಳಗೊಬ್ಬಗೆ ಮಾಲೆಯ । ಸೂಡದರೇಕಹುದವಗೆ ॥
ಸೂಡಹೇಳೆಂದಾತ್ಮಪುತ್ರಿಯ ಕರ್ಣದೊ । ಳಾಡಿಸಿದನು ಕಾಶಿಯಾಣ್ಮ ॥ ೯ ॥

ಅವಳೊಲ್ಲದಾದಳಾಕೆಯ ಕೈಯ ಮಾಲೆಯ । ಯುವತಿಯೊರ್ವಳು ಸೆಳೆಕೊಂಡು ॥
ಅವನ ಕೊರಳಿಗಿಕ್ಕಿ ಜಯಜಯಯೆಂದು ಘೋ । ಷವ ಮಾಡಿದರು ತಮ್ಮತಾವೆ ॥ ೧೦ ॥

ನೆರೆದ ಮಗಳಿಗೊಬ್ಬ ಪತಿಯಾಗಬೇಕೆಂಬ । ಮರುಕದೊಳವನೊಯ್ದನವನ ॥
ಸೆರೆಹೋಗುವಂತಾಕೆ ಹೋದಳು ನೃಪರದ । ನರಿದಿತ್ತ ಕೊಳಪಿದರೊಡನೆ ॥ ೧೧ ॥

ಒಲಿದರೊಬ್ಬಗೆ ಮಾಲೆಯಿಕ್ಕಬೇಕವಳೆಮ್ಮ । ಹಲಬರ ಕರೆಸಿಕೊಂಡಿವನು ॥
ಬಲುಹಿನೊಳೊಬ್ಬಗೆ ಕೊಡುವುದೇನೆಂದಿವ । ರಳಲೆದ್ದರರಸುಗಳತ್ತ ॥ ೧೨ ॥

ಮಾರ್ಗದಿ ಬಂದರೆ ತಾಳ್ವರಲ್ಲದೆ ವಕ್ರ । ಮಾರ್ಗಕೆ ನೃಪರು ಸೈರಿಪರೆ ॥
ಆರ್ಗೆ ಬೇಡಾ ಹೆಣ್ಣು ಯುವರಾಜಗಿರಲೆಂದು । ತಾಗೊಂಡು ತಾವೆಣಿಸಿದರು ॥ ೧೩ ॥
ಆನೆ ಕುದುರೆ ಹೆಣ್ಣೊಳಧಿಕವಸ್ತುಗಳು ಮ । ಹಾನರೇಂದ್ರಗೆ ಸಲ್ಲುವೈಸೆ ॥
ಆ ನೀರೆ ನಿನಗಲ್ಲದುಳಿದರ್ಗೆ ಸಲ್ಲಳೆಂ । ದೀ ನೃಪರೆಲ್ಲರೊಪ್ಪಿದರು ॥ ೧೪ ॥
ಪದೆದಷ್ಟಚಂದ್ರರಂತುಟೆ ಕಂಡರೆವ್ವಿಬ್ಬ । ರೆದೆಯೊಳಂತುಟೆ ತೋರಿತದನು ॥
ಮುದದಿ ಬಿನ್ನವಿಸಿದೆ ಕಾರ್ಯವು ನಿಮಗೆ ಸ । ಲ್ವುದು ಪರಾಂಬರಿಸೆಂದನವನು ॥ ೧೫ ॥
ನೀವು ಪೇಳ್ದಂತೆ ಪೆಣ್ಣಿನ ತಂದೆ ಪೇಳ್ದರೆ । ವೈವಾಹಕಾನೊಪ್ಪಬಹುದು ॥
ಭಾವೆಯನೆನಗೀವುದೆಂದಾನು ಬೇಳ್ಪಾಗ । ದಾವ ದೊಡ್ಡಿತು ಹೋಗಿರೆಂದಾ ॥ ೧೬ ॥
ನೀನದ ಹಾರಬೇಡಾವೆಯ್ದಿ ತಂದು ಸಂ । ಧಾನಿಪೆವೆಂದನಾ ಮಂತ್ರಿ ॥
ಭೂನಾಥನಿಷ್ಟು ಯೋಚಿಸುತಿರೆ ಕಂಡನು । ಮಾನದೋರಿದನಾದಿರಾಜಾ ॥ ೧೭ ॥
ಚೊಕ್ಕಸ್ವಯಂವರವೆಸಗಿ ಮಗಳು ಮಾಲೆ । ಯಿಕ್ಕಿದರದು ರಸಭಂಗಾ ॥
ಠಕ್ಕಿನೊಳ್ಬಣ್ಣವ ಮಾಡಿದನಹುದಾಕೆ । ಕೊಕ್ಕರಿಸಿದರುಂಟೆ ಮದುವೆ ॥ ೧೮ ॥
ಬಾಲೆಗೊತ್ತಂಬದಿ ಮದುವೆಯೆಂಬಾಗ ದೀ । ಕ್ಷಾಲಂಬಕೆದ್ದರೇಳುವಳು ॥
ಮಾಲೆಯನಿಟ್ಟ ಸೇವಕಿಯು ಮೇಘೇಶ್ವರ । ಗೂಳಿಗಕೊಲಿದೀಯಬಹುದು ॥ ೧೯ ॥
ಪೆಣ್ಣತ್ತಲೊಪ್ಪದೆಂಬಾಗಿತ್ತಲೆನಲಿದೆ । ಹಣ್ಣಹುದೆಲ್ಲರೊಪ್ಪುವರು ॥
ಅಣ್ಣಾಜಿಯರ್ಗನುಗೊಳಿಸಿರ್ದೆಯೆನೆ ಮೋರೆ । ಬಣ್ಣವಟ್ಟೆಲ್ಲರುಬ್ಬಿದರು ॥ ೨೦ ॥
ಸಂಪತ್ತುವೆರಸೆಯ್ದಿ ಕೇಳ್ದರಾ ಹೆಣ್ಣಿಗ । ಕಂಪಗುತ್ಸಹವಹುದದಕೆ ॥
ನಾಂ ಪಡೆಗೂಡಿ ಪೋಗುವೆನೆಂದು ಮಂತ್ರಿ ಚ । ದುಂಪಿಸಿ ಬೀಳ್ಕೊಂಡನೊಡನೆ ॥ ೨೧ ॥
ಎರಡುಸಾವಿರಗಣಬದ್ಧರ ನೃಪನೊತ್ತಿ । ಲಿರಿಸಿ ಮತ್ತೆರಡು ಸಾವಿರವಾ ॥
ಕರೆದುಕೊಂಡಷ್ಟಚಂದ್ರರು ದೊರೆಗಳು ಸೇನೆ । ವೆರಸಿ ಸನ್ಮತಿಯು ತುಯ್ದೆದ್ದಾ ॥ ೨೨ ॥
ನಯದಿಂದ ತಹೆನೆಂದು ನುಡಿದು ಬಂದೂರ ಕೋ । ಟೆಯ ಹೊರಗಾ ಮಂತ್ರಿ ನಿಂದು ॥
ಭಯದ ಶಾಸನವನಕಂಪಮೇಘೇಶ್ವರಾ । ಲಯಕಟ್ಟಿದನು ಬಲುತಂತ್ರಿ ॥ ೨೩ ॥
ಕಡುಚೆಲ್ವಿನಬಲೆ ಬಂಟಗೆ ಸಲ್ಲಳೆನಗೆ ಸಂ । ಗಡಿಸುವುದೆಂದು ರಾಯಸವಾ ॥
ಒಡೆಯನ ಪೆಸರಲ್ಲಿ ಬರೆದು ಕಳುಹಲವ । ರೊಡೆದೋದಿ ಕಂಗೆಟ್ಟರೆಲ್ಲ ॥ ೨೪ ॥
ತಾನೆನ್ನ ಸ್ವಾಮಿ ನಾನಾಳು ನನ್ನಭಿಮಾನ । ಹಾನಿಮಾಳ್ಪುದು ಲೇಸೆಯೆಂದು ॥
ಜಾನಿಸಿ ಬಿನ್ನವತ್ತಳೆಯ ಮೇಘೇಶ್ವರ । ನಾನದಟ್ಟಲು ಮಂತ್ರಿ ಕಂಡಾ ॥ ೨೫ ॥
ಓಲೆಯ ತಂದನ ತಡೆದುಕೊಂಡೊಡೆಯಗೊಂ । ದಾಳ ಕೈಯೊಳಗಟ್ಟಿದಂತೆ
ಮೇಳೈಸಿ ಬಂದಿತು ಪ್ರತಿವಾರ್ತೆಯೆಂದವ । ರಾಳ ಕೈಯೊಳೆ ಕಳುಹಿದನು ॥ ೨೬ ॥

ಅನುಪಮದಾನೆ ಕುದುರೆ ಪೆಣ್ಣು ನನಗೈಸೆ । ನಿನಗೆ ಸಲ್ವವೆ ನಿನ್ನ ಮನೆಯು ॥
ವನಿತೆಯರ್ಕಳ ಬೇಡಿತಿಲ್ಲಭಿಮಾನವೆಂ । ದೆನದಿರೆಂದೋದೆ ಕೇಳಿದನು ॥ ೨೭ ॥

ಧಾರೆಯಾಗದ ಮುನ್ನ ಸೂಚಿಸಿದೆನು ನಿನ್ನ । ನಾರಿಯೆಂತಾದಳಾಕೆಯನು ॥
ಸೇರಿಪುದೆನಗಲ್ಲದಿರದೊಡ್ಡಿ ನಿಲ್ವುದೆಂ । ಬಾ ನುಡಿಗೇಳಿ ಚಿಂತಿಸಿದಾ ॥ ೨೮ ॥

ಮಡದಿಯ ಕೊಟ್ಟು ಜೀವಿಪುದೆಂತು ಕದನವ । ನೊಡೆಯನೊಳಿಸಗುವುದೆಂತು ॥
ಪಿಡಿಯಬಾರದು ಬಿಡಬಾರದಿನ್ನೆಂತೆಂದು । ಮಿಡುಕಿ ಚಿಂತಿಸಿದನಾ ಮಾನಿ ॥ ೨೯ ॥

ತೋಳೊಳಿದ್ದಬಲೆಯ ಕೊಡುವಾಗ ಸುಡು ಮಲೆ । ಯಾಳರೆ ತುಳುವರೆ ನಾವು ॥
ನಾಳೆ ವಿನಾಸೆಯ ತಿದ್ದಿ ಬಾಳ್ವುದೆಂತೆಂದು ಹೀ । ಹಾಳಿಕೆಮುಟ್ಟ ನುಡಿದನು ॥ ೩೦ ॥

ಅರಸು ಶಕ್ತಿಯೊಳೊಯ್ದನೆಂದಳುತಳುತ ಪೆಂ । ಡಿರ ಬಿಟ್ಟು ಜಾರಿ ಹೋಹಾಗ ॥
ಪರದರೆ ಪಾರ್ವರೆ ಒಕ್ಕಲಿಗರೆ ನನ್ನ । ಹರಣ ಹೋಗಲಿ ಕೊಡೆನೆಂದಾ ॥ ೩೧ ॥

ಮೂರ್ತಿ ಕೆಡುವುದೈಸೆ ಕೀರ್ತಿ ಕೆಡದು ಪೆಣ್ಣ । ಕೂರ್ತೆನ್ನ ತಲೆ ಹೋಗಲಿನ್ನು ॥
ಕೀರ್ತಿಗಾಗಿಯೆ ಸಾವೆನೆಂದು ಧೈರ್ಯದಿ ಚಕ್ರ । ವರ್ತಿಯ ಸುತಗಿದಿರಾದಾ ॥ ೩೨ ॥

ವಾರಾಣಸಿಯ ರಾಜ ತನ್ನೊಳೊಗ್ಗಾದನು । ಭೇರಿ ಸೂಳೈಸಿತಾರ್ಭಟಿಸಿ ॥
ಊರ ಹೆಬ್ಬಾಗಲಿಕ್ಕಿತು ತನ್ನ ಪಡೆಯಾಳು । ವೇರಿಯ ಹತ್ತಿತುಬ್ಬಿನೊಳು ॥ ೩೩ ॥

ಇದಿರಾದನೆಂಬುದನರಿದಸ್ಸುಚಂದ್ರರ । ಗ್ಗದ ದೊರೆಗಳು ಕೋಪ ಮಸಗೆ ॥
ಕದನಕೆ ಪಡೆಗೂಡಿ ನಡೆದರು ಬಹುವಾದ್ಯ । ಸದೆಯೆ ಭಯಂಕರವೆನಿಸಿ ॥ ೩೪ ॥

ಕರೆದರು ಕಲ್ಲುಗುಂಡಂಬಿನ ಮಳೆಯ ಬೊ । ಬ್ಬಿರಿದವಕೋರ್ಟೆಯ ನೆಮ್ಮಿ॥
ತರಿದರಂಬಿಂದಂಬ ಹರಿಗೆ ಬದ್ದಾರದ । ಮರೆವಿಡಿದೊತ್ತಿದರವರು ॥ ೩೫ ॥

ಕಾಳಗ ಹಣ್ಣಿತು ಕಿರಿದಲ್ಲ ರಕ್ತದ । ಕಾಲುವೆ ಹರಿವ ಪಾಟಿಯದು ॥
ಪೇಳಲೇನವರ ಪುಣ್ಯದೊಳದು ನಿಂದಿತು । ಲೀಲೆಯೊಳೆಂತುಟೆಂದೆನಲು ॥ ೩೬ ॥

ಮುನ್ನ ಮೇಘೇಶ್ವರ ಪಾವೊಂದ ಮಡಿವಾಗ । ಮನ್ನಿಸಿ ಗತಿಮಾಡಿಕೊಡಲು ॥
ಪನ್ನಗೇಶ್ವರನಾಗಿ ಬಾಳುತಿದ್ದಾತನು । ಸನ್ನಿಧಿಗೆಯ್ತಂದನಾಗ ॥ ೩೭ ॥

ನೀನಂದು ನನಗುಪಕಾರವನೆಸಗಿದೆ । ನಾನಿಂದು ನಿನಗಿದಿರಾದ ॥
ಸೇನೆಯ ಕೊಲ್ವೆನೆಂದಾ ನಾಗರಾಜ ಮಿ । ತ್ರಾನುಕೂಲದಿ ನಿಂದು ನುಡಿದಾ ॥ ೩೮ ॥

ಅಂತು ಬೇಡೆಂದು ನೀನಿಲ್ಲಿಗೆ ಬಂದುದು । ಸಂತಸವಾಯ್ತು ದರಿಂದ ॥
ಮುಂತೆ ಸರ್ವರಿಗೆ ಸಂತಸವಪ್ಪದೊಂದನೆ । ಚಿಂತಿಸೆಂದನು ಮೇಘರಾಜಾ ॥ ೩೯ ॥

ಅವರ ಕೊಂದಾನವರಿಂದ ಮಡಿವೆನೆಂದು । ಬವರವ ತೊಡಗಿದೆನಹುದು ॥
ಅವಧಿಯಿಂದರಿದು ನೀನೆಯ್ದಿದ ಮೇಲಿನ್ನು । ನವಗವರ್ಗೊಳ್ಪು ಮಾಡೆಂದಾ ॥ ೪೦ ॥

ಒಡೆಯನ ಸೇನೆಯ ಕೊಂದಮೇಲೆಮಗುಳು । ಕಡೆಯುಂಟೆ ಅದರಿಂದ ನೀನು ॥
ಪಿಡಿದಷ್ಟಚಂದ್ರರನಾ ಮಂತ್ರಿಯನೆ ಕಟ್ಟಿ । ಕೊಡು ನನಗದೆ ಸಾಲ್ವದೆಂದಾ ॥ ೪೧ ॥

ಇದು ನನಗೊಂದು ಗಣ್ಯವೆಯೆಂದು ಪಾಯ್ದು ಬೇ । ಗದಿ ನಾಗಪಾಶದಿ ಕಟ್ಟಿ ॥
ಸದರದೊಳೊಂಭತ್ತುಮಂದಿಯು ತರುತಿರ್ದ । ಗದಗಾಪುಗೊಳೆ ರಾಜಕಟಕಾ ॥ ೪೨ ॥

ಫಣಿಪಸನೊಯ್ವಾಗ ಕಂಡೆರಡುಸಾವಿರಮಂದಿ । ಗಣಬದ್ಧರುಗ್ರಾಪಿವಿಡಿದು ॥
ಬಣಗನ ಹಿಡಿಹಿಡಿ ಹೊಡೆಹೊಡೆಯೆಂದು ಟೆಂ । ಟಣಿಸಿ ಬೆಂಕೊಂಡರಾರ್ಭಟಿಸಿ ॥ ೪೩ ॥

ಗೋಡೆಗಟ್ವಾಗಿ ಬಳಸಿಕೊಂಡ ವೀರರ । ನೋಡಿ ನಾಗೇಂದ್ರ ವ್ಯೆಬೆದರಿ ॥
ಪಾಡುದಪ್ಪಿತು ತನ್ನ ಕಾರ್ಯವೆಂದವರ ಬಿ । ಟ್ಟೋಡಿದನಿರದೆ ತನ್ಮಾರ್ಗೆ ॥ ೪೪ ॥

ಗಗನದಿ ಬೀಳ್ವರ ಗಣಬದ್ಧರಾಂತು ಕ । ಟ್ಟುಗಳ ಬಿಟ್ಟರು ಹುಯ್ಯಲಾಗ ॥
ಮಿಗಿಲಾಗೆ ಚಕ್ರಿಯ ಸುತರು ಕೇಳ್ದೇನು ಕಾ । ಳಗವಾಯ್ತೆಯೆಂದೆಣಿಸಿದರು ॥ ೪೫ ॥

ಸಂದೇಹಬಟ್ವಾದಿರಾಜ ತಾನಾರಯ್ದು । ಬಂದಪನೆಂದಣ್ಣಗುಸುರಿ ॥
ದುಂದುಭಿಘೋಷಣನೆಂಬಾನೆಯೇರಿಯೆ । ಯ್ತಂದನು ಬಲುವಿಡಾಯದೊಳು ॥ ೪೬ ॥

ಸಾವಿರಗಣಬದ್ಧ ಸುರರನಗ್ರಜನ ವ್ಯೆ । ಗಾವಲಿಗಿರಿಸಿ ತನ್ನೊಡನೆ ॥
ಸಾವಿರಗಣಬದ್ಧರೆಯ್ತರೆ ಬಂದು ಸೇ । ನಾವಾರ್ಧಿಯೊಳವೊಕ್ಕನಾಗ ॥ ೪೭ ॥

ಆನೆಯ ಮೇಲೆ ಬಪ್ಪಾದಿರಾಜನ ಕಾಣು । ತೇನೊಂದು ಕೋಲಂಬನೆಸದೆ ॥
ಆ ನಗರಿಯ ಪಡೆ ನೋಡುತಿರ್ದುದು ತನ್ನ । ಸೇನೆ ತನ್ನತ್ತ ತಿರುಗಿತು ॥ ೪೮ ॥

ಕೂಟದ ನೃಪರು ಮಂತ್ರಿಗಳು ಕ್ಯೆಮುಗಿಯೆ ಕಿ । ರೀಟಿಯ ಸುಕುಮಾರ ನೋಡಿ ॥
ಕೋಟೆಮುತ್ತಿಗೆಯೇಕೆ ಪೆಣ್ಣನಾರಿಂತು ಕೊಂ । ದಾಟದಿ ತರವೇಳ್ದರೆಂದಾ ॥ ೪೯ ॥

ಠಕ್ಕರಿವರು ಸ್ವಾಮಿ ಮೇಘರಾಜಗೆ ಮಾಲೆ । ಯಿಕ್ಕಿದಳಾಕೆ ತಾನವಳು ॥
ಚೊಕ್ಕವೆಣ್ಣೆಂದಾಣ್ಮಗಿರಲೆಂದು ನೆನೆದರೆಂ । ದುಕ್ಕಿ ಸನ್ಮತಿಮಂತ್ರಿ ನುಡಿದಾ ॥ ೫೦ ॥

ಬೇಡವೆಂದೆನು ನಾನು ಯುವರಾಜಗೊಳ್ವೆಣ್ಣು । ಬೇಡವೆಂಬ್ಯೆಯೆಂದರಿವರು ॥
ನಾಡೆಲ್ಲರೊಳು ಕಷ್ಟವೇಕೆಂದು ಮೌನದಿ । ನೋಡುತಿರ್ದೆನು ನಿನ್ನೆತೊಟ್ಟು ॥ ೫೧ ॥

ಮಡದಿಯ ಕೊಡುವರಾರಾ ನೃಪ ಕದನವ । ತೊಡಗಿದನೊಡನೆ ಮಂತ್ರಿಯನು ॥
ಜಡಿದಷ್ಟಚಂದ್ರರ ಫಣಿಪನೊಯ್ವಾಗಟ್ಟಿ । ಬಿಡಿಸಿದರ್ಗಣಬದ್ಧರೀಗ ॥ ೫೨ ॥

ಮುಂದಣ ಸ್ಥಿತಿಯ ದೇವರೆ ಬಲ್ಲಿರೆಂದಾಡಿ । ನಿಂದನಾ ಸನ್ಮತಿಯುದಕೆ ॥
ನಿಂದಿತಾರ್ಥವನೆಸಗಿದರಲ್ತೆ ಜಿನಜಿನ । ಯೆಂದಾದಿರಾಜ ಚಿಂತಿಸಿದಾ ॥ ೫೩ ॥

ಸನ್ಮತಿ ಹೋಗು ಮೇಘೇಶನ ಕರೆಯೆಂದ । ರುನ್ಮದದಿಂದೆಯ್ದಿ ಸೇಳೆ ॥
ಸನ್ಮತವರಿದವ ಬಂದು ಕಂಡನು ವ್ಯಾಕು । ಲೋನ್ಮಾದದೋರಲೊಡೆಯನಾ ॥ ೫೪ ॥

ಬಿಣ್ಣಿತೆಂದೆನಿಪ ಸ್ವಾಮಿದ್ರೋಹಗೆಯ್ದನ । ಕಣ್ಣಿಟ್ಟು ಕರೆಸಲೇಕೆನುತ ॥
ಕಣ್ಣ ನೀರ್ಗಳುಗುಳನೊಗುತಡ್ಡಬಿದ್ದನು । ಮಣ್ಣೊಳಾ ಗಜದ ಮುಂದವನು ॥ ೫೫ ॥
ವಿಜಯಜಯಂತನಕಂಪ ಮುಂತಾದರು । ರಜಸಿನೊಳ್ಮೈಯಿಕ್ಕೆ ಕಂಡು ॥
ಗಜದ ಮೇಲಿದ್ದೇಳಿರೇಳಿರೈಯೆಂದ ಭೂ । ಭುಜವಾಕ್ಯ ಕೇಳ್ದಿದ್ದರೆಲ್ಲ ॥ ೫೬ ॥
ಮೋಹರಗೊಂಡು ದೇವರ ಸೇನೆ ಕವಿದಿಂದು । ಸಾಹಸದೋರ್ಪಗ ನಾನು ॥
ದ್ರೋಹವನೇನ ಮಾಡಿದೆನೆನುತಳುತ ನಿಂ । ದೂಹಿಸಿದನು ಮೇಘರಾಜ ॥ ೫೭ ॥
ಅಭಿಮಾನಕಾಗಿ ಬಲ್ಲಿದರ ಪೊರ್ದುವರಾಳ್ವ । ಪ್ರಭುವೆ ತನ್ನಾಳ ತೇಜವನು ॥
ಪ್ರಭೆಗೆಡಿಸುವನೆನೆ ಕಾವರಾರೆಂದೆದೆ । ಕ್ಷುಭಿತವಹಂತತ್ತು ನುಡಿದಾ ॥ ೫೮ ॥
ಪರರು ಬಂಟನ ಮಾನಗೆಡಿಸದಂತಾರಯ್ವ । ದೊರೆಯೆ ಬಂಟನ ಸತಿಗೆಳಸೆ ॥
ಗುರುವೆಂದು ನಮಿಸಹೋದಾಕೆಗಾ ಗುರುವೆ ಕಾ । ತರವಟ್ಟರಿನ್ನುಂಟೆ ಧರ್ಮ ॥ ೫೯ ॥
ಕರುಣಿಸುವೊಡೆಯನೆ ಭೃತ್ಯನ ಮಹಿ ಮಾನ । ಕೆರಡಿಲ್ಲದಾಸೆವಟ್ಟಾಗ ॥
ಶರಣೆಂದು ಹೊಕ್ಕರ ಮೇಲೆ ದೇಗುಲ ಬಿದ್ದ । ಪರಿಯಲ್ತೆ ಆದು ನನ್ನ ಪಾಪಾ ॥ ೬೦ ॥
ಒಡೆಯನೆ ಬಂಟನ ಬಣ್ಣವ ತೆಗೆವೆನೆಂ । ದೊಡರಿಸಿದಾಗ ಬಲ್ಲಾಳು ॥
ಒಡಲುವಿಡಿವುದೊಂದು ಬದುಕೆ ಯುದ್ಧದಿ ವೈಯ । ಬಿಡುವೆನೆಂದೆಣಿಸಿದೆ ನಾನು ॥ ೬೧ ॥
ನನ್ನಭಿಮಾನಕಿಂದಳಿಯದವನು ನಾಳೆ । ಹೊನ್ನಿತ್ತ ಮಣ್ಣಿತ್ತನೆಂದು ॥
ನಿನ್ನಭಿಮಾನಕೆ ಸಾವೆನೆ ಇದಿರಾದೆ । ನಿನ್ನ ಮಾಳ್ಪುದ ಮಾಡು ನೀನು ॥ ೬೨ ॥
ಅಳ್ದನ ಸುತರಿಗಂಜಿದೆನನ್ಯನೃಪರೆಯ್ದಿ । ಬಾಳ್ದೋರಿ ಸೆಣಸಿದರವರ ॥
ಸೀಳ್ದು ದಿಗ್ಬಲಿಗೊಟ್ಟು ಬಿಡೆನೆಯೆಂದತಿರೋಷ । ದಾಳ್ದು ಪಲ್ಮೊರೆದನು ಕೂಡೆ ॥ ೬೩ ॥
ಎಣಿಸಿದೆನಹುದು ನಿನ್ನಿದಿರಲ್ಲಿ ಪರರೆನ್ನ । ಕೆಣಕಿದರಾದರಾ ಕ್ಷಣವೆ ॥
ರಣಭೂತಕುಣಲಿಕ್ಕಿ ಬಿಡೆನೆಯೆನುತ ಮಿಾಸೆ । ಕುಣಿದಾಡಿ ನುಡಿದನಾ ವೀರಾ ॥ ೬೪ ॥
ಮೆಯ್ಯೊಡ್ಡಿ ದರಿಗಳ ಗೆಲಲಾರದೊಡೆಯಗೆ । ಹುಯ್ಯಲ ಪೇಳ್ವಾಗ ಹೋಗೆ ॥
ಅಯ್ಯಯ್ಯೊ ನಾನೊಬ್ಬ ವೀರನೆ ನೋಡು ನಿ । ನ್ನಯ್ಯ ಪಾಲಿಸಿದ ಕೂರಾಳೆ ॥ ೬೫ ॥
ರಾಯ ನಿನ್ನಹಿತರ ಮೇಲೆನ್ನ ಬಿಡದೆ ನೀ । ನಾಯಾಸಗೊಳಿಪರೆಯೆನಲು ॥
ನೋಯದಿರ್ಮೇಘೇಶ ಕೇಳೆಂದು ತನ್ನಭಿ । ಪ್ರಾಯವ ನುಡಿದನಾ ಕುವರಾ ॥ ೬೬ ॥
ಮಾಲೆಯನಿಕ್ಕಿತಿಲ್ಲೆಂದಿವರೆಮ್ಮನು । ಚಾಳೈಸಲೊಪ್ಪಿದೆವೈಸೆ ॥
ಕಾಳಗಗೈದನ್ಯರಬಲೆಯು ತಹುದೆಂದು । ದಾಳಿಯ ಬಿಡುವೆವೆ ನಾವು ॥ ೬೭ ॥
ಆರ ಪೆಂಡಿರನಾರು ಬೇಡಬಹುದು ಪರ । ನಾರೀಸಹೋದರನೆಂಬ ॥
ನೇರದ ಬಿರುದ ಬಿಸಾಡಿ ಬಾಳ್ವೆವೆ ನಮ್ಮ । ಚಾರಿತ್ರದೊಳಗ ನೀನರಿಯ ॥ ೬೮ ॥

ಪೆಂಡಿರನಾರು ಕೊಡುವರೊಮ್ಮೆ ಕೊಡಲವ । ರುಂಡೆಂಜಲೋಪಾದಿಯವರಾ ॥
ಮಂಡಲೇಶ್ವರರು ಕೈಕೊಂಬಾಗ ಮಲೆಯಾಳ । ಭಂಡರೆ ತುಳುವರೆ ನಾವು ॥ ೭೯ ॥
ಅದುವಲ್ಲ ನೀವಣ್ಣತಮ್ಮಂದಿರೆಮಗೆ ಮಾ । ಡಿದ ಸೇವೆ ಸ್ವಲ್ಪವೆ ನಿಮ್ಮ ॥
ಹೃದಯವ ನೋಯಿಸಿದಾಗ ನಾವೇನು ಕೋ । ವಿದರೆ ಲೇಸರಿಯದರಲ್ತೆ ॥ ೮೦ ॥
ನಾವೆಲ್ಲರೆಮ್ಮಯ್ಯನೊತ್ತಿಲಿದ್ದೆವು ನಾಡ । ನೀವು ಸಾಧಿಸಿ ತಂದಿರಲ್ತೆ ॥
ಆವಾಗ ನಿಮ್ಮ ಪೊರೆಯದಾಗ ಮಾಡಿದ । ಸೇವೆಯನರಿಯದರೈಸೆ ॥ ೮೧ ॥
ಬಿಡು ಬಿಡಿನ್ನಾ ಮಾತ ನವಗಿಂದಕಂಪಾಂಕ । ಕಡುಭಕ್ತಿಮಾಡಿದನಲ್ತೆ ॥
ತೊಡಗಿದ ಮದುವೆಗೆ ಕಿಸುರನಿಟ್ಟಾಗರ್ತಿ । ಗೆಡುಕರಲ್ಲದೆ ನಾವು ನೃಪರೆ ॥ ೮೨ ॥
ಇದಕೆ ನಾವೊಪ್ಪಿದೆವಾದರಪ್ಪಾಜಿಯು । ಮೃದುಪಾದಪದ್ಮಂಗಳಾಣೆ ॥
ಚದುಪಿಸಿ ನಮ್ಮನು ವಿಾರಿವರಿಂತು ಮಾ । ಡಿದರದಕೇನಾಯ್ತು ಕೇಳು ॥ ೮೩ ॥
ಅವರಿಗಾಜ್ಞೆಯ ಮಾಳ್ಪವದಕೆ ನಾನರಸಲ್ಲ । ಯುವರಾಜನೊತ್ತಿಗೆ ಪೋಪಾ ॥
ಕವಿದ ಚಿಂತೆಯ ಬಿಡು ನನ್ನಾಣೆಯೆನೆ ಮಹೋ । ತ್ಸವಬಟ್ಟನಾ ಮೇಘರಾಜಾ ॥ ೮೪ ॥
ಹರಿದುದು ಚಿಂತೆಯೆಂದನುಜರು ಮಾವನು । ವೆರಸಿ ಮತ್ತವನಡ್ಡ ಬಿದ್ದಾ ॥
ಪರಿಪರಿಯುಡುಗೊರೆಯಿತ್ತನಾ ಪ್ರತ್ಯಕ್ಷ । ಭರತೇಶ ತಾನೇಯೆಂಬಂತೆ ॥ ೮೫ ॥

ಮತ್ತೊಂದು ಕಾರ್ಯವ ನೆನೆದು ಸರ್ವರು ದೂರ । ದತ್ತಿಪ್ಪ ಸಾರಿರೈಯೆಂದು ॥
ಒತ್ತಿಗೆ ಸನ್ಮತಿಗೂಡಿ ಮೇಘೇಶನ । ತೆತ್ತಿಗರೊಡಗೂಡಿ ಕರೆದಾ ॥ ೮೬ ॥
ಕೇಳಿರೈ ವಿಜಯಜಯಂತಾಂಕರೆಲೆ ಮಂತ್ರಿ । ಕೇಳಕಂಪಾಂಕಾ ಮೇಘೇಶಾ ॥
ಬಾಳೊಂದ ಕೆಡುವುದ ಬಾಳಿಸುವುದು ಲೇಸೊ । ಹಾಳು ಮಾಳ್ಪದು ಲೇಸೊಯೆಂದಾ ॥೭೭॥
ಕೆಡುವುದ ರಕ್ಷಿಸ ಬೇಕಲ್ಲದದ ಕುಟ್ಟಿ । ಕೆಡಿಸಬಹುದೆಯೆಂದರವರು ॥
ಬಿಡಲಾಗದೀ ಮಾತ ಕಡೆಮುಟ್ಟ ನೀವೆನೆ । ಬಿಡೆವೆಂದರಿನ್ನಾದುದೆಂದಾ ॥ ೭೮ ॥
ಅಪ್ಪಚಂದ್ರರ ಮಂತ್ರಿಯನುವ ಕೇಳ್ದರೆ ದೇಶ । ಭ್ರಷ್ಟರ ಮಾಡೆಂಬನಯ್ಯಾ ॥
ಅಪ್ಪಕುಡಿಗೆದೊರೆದವರು ದೀಕ್ಷೆಯ ಕೊಂಬ । *ರಿಪ್ಪು ನಿಮ್ಮಿಂದಾಗಬೇಕೆ ॥ ೭೯ ॥
ಬಲುನೋವನೆಸಗಿದರಿವರಿಗಾಜ್ಞೆಯನಿಕ್ಕೆ । ಸಲುವುದಾಗಳೆ ಕೆಟ್ಟರಲ್ತೆ ॥
ಕುಲಪಕ್ಷದಿಂದ ನಾವೊಮ್ಮೆ ಮಾಜುವೆವೆಂದ । ರೊಲಿದೆಲ್ಲರೊಡಬಟ್ಟರದಕೆ ॥ ೮೦ ॥
ಯುವತಿಯ ತರಲೆಂದು ಬಂದರಣ್ಣಾಜಿಯ । ಗರ್ವರ ಮನ್ನಿಸುವುದೆಂತೆಂದಾ ॥
ಕುವರಿಯಿನ್ನೊಬ್ಬಳುಂಟವಳನಿತ್ತಪೆನೆಂದು । ವಿವರಿಸಿದನು ಕಾಶಿಯಾಣ್ಮಾ ॥ ೮೧ ॥

---

*ಇಪ್ಪ ನಿಮ್ಮಿಂದಾಗಬೇಕು ॥

ಈಕೆಯಿಂದಾಕೆ ಶೋಭಾಂಗಿ ಸ್ವಯಂವರಾ । ಲೋಕನದಿಂದೀವೆನೆನಲು ॥
ಏಕೊ ತಾನದು ಬೇಡವೆಂದಳೆಂದೆನಲಣ್ಣ । ಗಾ ಕಾಂತೆ ತಕ್ಕಳಾಯ್ತೆಂದಾ ॥ ೮೨ ॥

ಕಂಟಕವಾಯ್ತಷ್ಟಚಂದ್ರಮೇಘೇಶರ್ಗೆ । ನಂಟು ಮಾಳ್ಪೆಂದವೆಂತೆನಲು ॥
ಎಂಟುಮಂದಿಗೆ ಎಂಟುಪೆಣ್ಗಳ ಕೊಡುವೆನಿ । ನ್ನಂಟೆಮ್ಮ ವಂಶದೊಳೆಂದಾ ॥ ೮೩ ॥

ಪುರಯೆಂದನಾದಿರಾಜನು ಕರೆದಷ್ಟಚಂ । ದ್ರರಿಗೆ ಮೇಘೇಶ್ವರಗೊಡನೆ ॥
ನಿರವಿಸಲಪ್ಪಿಕೊಂಡರು ಲೇಸನಾಡಿದ । ರರಸುಮಕ್ಕಳ ರೀತಿಯಲ್ತೆ ॥ ೮೪ ॥

ಉದ್ದಂಡಮತಿಗೆ ಸನ್ಮತಿಗೆ ಸಂತಸಮಾಡಿ । ಯಿದ್ದರೆಲ್ಲರ ಕೂಡಿಕೊಂಡು ॥
ಎದ್ದನು ಯುವರಾಜನೆಡೆಗೆ ಚಾ ಹೋಯೆನೆ । ಗೆದ್ದನು ಜಗದ ಜಾಣರನು ॥ ೮೫ ॥

ದುಂದುಭಿಘೋಷಣನಿಳಿದು ಸರ್ವರುಗೂಡಿ । ಬಂದು ಕೈಮುಗಿದನಗ್ರಜಗೆ ॥
ಒಂದಾಗಿ ಮೇಘೇಶನೆಯ್ದೆ ಕಂಡಾ ಹೆಣ್ಣ । ನಿಂದಿತೆಂದರಿದನಾ ರಾಯಾ ॥ ೮೬ ॥

ಹೆಣ್ಣಿತ್ತಲಾದರಿಂದಿವ ನಾಣ್ಚಿ ಬಾರನಾ । ಹೆಣ್ಣಾತ್ತಲಾದುದೆಂದರಿದು ॥
ಬಣ್ಣಿಸಿರೈ ನಿಮ್ಮ ಕಾರ್ಯವೇನಾಯ್ತೆಂದು । ಪಣ್ಣನೆ ಕೇಳ್ದನೆಲ್ಲರನು ॥ ೮೭ ॥

ನೋಡುತೆಲ್ಲರು ಸುಮ್ಮನಿರ್ದರಾಲಸ್ಯವ । ಮಾಡದಷ್ಟರೊಳಾದಿರಾಜಾ ॥
ಮಾಡಿದ ದುಷ್ಟರ ದೋಷವ ಮರೆಸಿ ಮೈ । ಮಾಡಿಕೊಂಡೊರೆದನೇನೆಂಬೆ ॥ ೮೮ ॥

ಅವಧರಿಪುದು ದೇವರಿಂದು ಸಮಸ್ತಬಾಂ । ಧವರನುಮತದೊಳಾ ಕನ್ನೆ ॥
ಇವರು ಪೋಪಷ್ಟರೊಳಾತಗೆ ಮಾಲೆಯು । ಸುವಿಧಾನದಿಂದಿಟ್ಟಳೆಂದಾ ॥ ೮೯ ॥

ನಿನ್ನೆ ಮಾಲೆಯ ನೀಡದವಳಿಂದು ಮಾಲೆಯ । ಬಿನ್ನಣಿಸಿದರೆ ವಾದ್ಯಗಳ ॥
ಸನ್ನಾಹ ಮಿಗೆ ಕುಟ್ಟಿ ಕೂಗಿದರೊಸಗೆಯ । ಬಿನ್ನವಿಸಲ್ಬಂದರೆಲ್ಲ ॥ ೯೦ ॥

ಒಡನೊಂದು ಕಾರ್ಯವ ನುಡಿದರಂತದಕೆ ನಿ । ವ್ಮೊಡೆಯನನಾರಯ್ವುದೆಂದೆ ॥
ಮಡಗಲೇಕುದ್ದಂಡಮತಿ ಹೇಳು ಸನ್ಮತಿ । ನುಡಿಯೆಂದನಾ ಜಾಣಕುವರಾ ॥ ೯೧ ॥

ಸ್ವಾಮಿ ಬಿನ್ನಹ ಕಾಶಿಯಾಣ್ಮಗಿನ್ನೊಬ್ಬಳು । ಕೋಮಲಾಂಗದ ಪುತ್ರಿಯುಂಟು ॥
ಆ ಮದವತಿಯ ದೇವರಿಗೆ ಸಂಬಂಧಿಪ । ಪ್ರೇಮದೋರಿದನೆಂದರವರು ॥ ೯೨ ॥

ನಸುನಕ್ಕನದಕೆ ಸಾಕಾ ಮಾತು ಹೋಗಿ ನಿ । ವ್ಮೊಸಗೆಯನೆಸಗಿರೈಯೆಂದಾ ॥
ಹಸನಾಯ್ತು ಸ್ವಾಮಿ ನಿನ್ನುದ್ವಾಹ ತಾನೆ ನ । ವ್ಮೊಸಗೆಯೆಂದವರೆರಗಿದರು ॥ ೯೩ ॥

ಕಳುಹಚಿತ್ತೈಸಿಂದಿಗೆಲ್ಲರ ನಾಳೆ ಸಂ । ಗೊಳಿಸಲೊಸಗೆಯೆಂದನನುಜಾ ॥
ಕಳುಹಿದನೆಲ್ಲರನಂದಿನ ದಿನ ಹೋಯ್ತು । ಬೆಳಗಾಗೆ ತೊಡಗಿತು ಮದುವೆ ॥ ೯೪ ॥

ಹಗಲೂಟವಿವಾಹಮನ್ನಣೆಯಲ್ಲಿ ಹೋಯ್ತು ರಾ । ತ್ರಿಗೆ ಧಾರೆಗನುಕೂಲವಾಯ್ತು ॥
ಸುಗಮುವನದೊಳಿರ್ದ ಗೃಹಕೆ ಸಿಂಗರಿಸಿದ । ಮಗಳ ತಂದನು ಕಾಶಿಯರಸು ॥ ೯೫ ॥

ಅಂಗದ ಕೋಮಲ ಕೋಮಲದೊಡನೆ ತ । ರಂಗಿಪ ತನುಕಾಂತಿಯಿಂದ ॥
ಶೃಂಗಾರರಸ ತಾನೆ ಸ್ತ್ರೀರೂಪನಾಂತ ಬೆ । ಡಂಗಿನೊಳಿರ್ದಳಾ ಕನ್ನೆ ॥ ೯೬ ॥

ಏರುವ ಜವ್ವನವದಕನುಕೂಲಸಿಂ । ಗಾರಿಕೆವೆತ್ತ ಶೃಂಗಾರಾ ॥
ನೀರೆಯಿದ್ದಳು ಯುವರಾಜನ ಚಿತ್ತವ । ಸೂರೆಗೊಂಬಂತೆ ಲೀಲೆಯೊಳು ॥ ೯೭ ॥

ಪಿಡಿನಡು ನಗೆಮೊಗ ಬಗಸೆಗಣ್ಬಲುವೊಲೆ । ನಿಡುದೋಳು ಗುರುಕಟಿಯಿಂದ ॥
ಕಡುಚೆಲ್ವೆಯಿದ್ದಳು ದೊರೆ ಮುನ್ನ ತಪಸಿದ್ದು । ಪಡೆದನೊ ಮಝು ಭಾಪೆನಲು ॥ ೯೮ ॥

ಓತು ಬಣ್ಣಿಸಲತಿ ಜೋಲಿಯಹುದು ನಾಡ । ಮಾತು ಸಾಕಮರಕಾಂತೆಯರು ॥
ಆ ತರುಣಿಯನೊಮ್ಮೆ ಕಂಡರಾದರೆ ದೃಷ್ಟಿ । ಪಾತವಪ್ಪಂತಿರ್ದಳವಳು ॥ ೯೯ ॥

ಆ ಕಾಂತೆ ಲಕ್ಷ್ಮೀಮತಿಯೆಂಬಳುರೆ ಲಕ್ಷ್ಮಿ । ಯಾಕೆಗೆ ಪಾಸಟಿಯಲ್ಲ ॥
ಏಕೆಂದರಾ ಲಕ್ಷ್ಮಿ ಸರ್ವರಿಗೊಲಿದಳೀ । ಶ್ರೀಕಾಂತೆ ವಿವಾಸಲುವೆಣ್ಣು ॥ ೧೦೦ ॥

ತುಂಬಿ ಸ್ವಯಂವರವಾದರೆ ತನ್ನ ಪ । ಲಂಬರು ಬಯಸುವರೆಂದು ॥
ಡೊಂಬಿಯೆಂದದಕೆ ಕೊಕ್ಕರಿಸಿದಳೆಂಬಾಗ । ಡಂಬವೆಣ್ಣುಗಳಾಕೆಗೆಣೆಯೆ ॥ ೧೦೧ ॥

ಕರಚೆಲ್ವಗೆಳಸಿ ಸರ್ವರಿಗೆ ವೈಗಾಣಿಸ । ದುರುತರಗೂಢದೊಳಿರಲು ॥
ಧರೆಗೆ ಚೆನ್ನಿಗನತಿಸಿರಿವಂತ ದೊರೆಕೊಂಡ । ನರಿದುಂಟೆ ಶೀಲಪಾಲರಿಗೆ ॥ ೧೦೨ ॥

ಅರಸುಗಳೆಲ್ಲರ ನೆರಹಿ ಸುಲೋಚನೆ । ಪುರುಷನ ಪಿಡಿದಳಲ್ಪನನು ॥
ಭರತಚಕ್ರೇಶನ ಸುತಗೀಕೆ ಸತಿಯಾದ । ಳರರೆ ಸೌಭಾಗ್ಯವಿನ್ನೆಂತೊ ॥ ೧೦೩ ॥

ಕಂತುರಾಜಗೆ ರತಿದೇವಿಯ ತಂದು ವ । ಸಂತರಾಜನು ವನದೊಳಗೆ ॥
ಸಂತಸವಿಗೆ ಕೊಡುವೊಲು ಕೊಟ್ಟನವಳನಾ । ಕಂತುರೂಪಗೆ ಕಾಶಿಯಾಣ್ಮ ॥ ೧೦೪ ॥

ಮಂಗಳಾಷ್ಟಕ ಧಾರೆ ಹೋಮ ಮುಂತಾದ ಕ್ರ । ಮಂಗೂಡಿ ಸತಿಯ ಕೈವಿಡಿದು ॥
ಸಂಗಡಿಸಿದರ ನೋಟದಿ ಕಳುಹಿದನು ಲೀ । ಲಾಂಗ ಹೊಕ್ಕನು ರಾಜಗೃಹವಾ ॥ ೧೦೫ ॥

ಮರುದಿನ ಮೇಘರಾಜನಿಗೆ ಸುಲೋಚನೆ । ಗೆರಕವಟ್ಟಾಯ್ತು ವಿವಾಹಾ ॥
ತೆರನರಿದಷ್ಟಚಂದ್ರರಿಗೆ ಮಂಗಲವಾಯ್ತು । ಸರಿವಿಂಡಿವೆಣ್ಗಳೆಣ್ಬರೊಳು ॥ ೧೦೬ ॥

ಭೂವಿಶನಾದಿರಾಜನಿಗೊಬ್ಬ ಕನ್ನೆಯು । ನೇಮಿಪರಾತಗೆ ತಕ್ಕ ॥
ಕೋಮಳೆಯಿಲ್ಲಾಗಿ ಮಾಣ್ದರೆಂಬೆಡೆಗೆ ಲ । ಕ್ಷ್ಮೀಮತಿಯುದ್ವಾಹಸಂಧಿ ॥ ೧೦೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೮ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೯ ॥

ಇಂದ್ರಿಯವೆಂಬ ಭೃತ್ಯರುಗೂಡಿ ಸುಖಿಸುತ । ಶೀಂದ್ರಿಯಸುಖವ ಸಾಧಿಸುವಾ ॥
ಇಂದ್ರವಂದಿತನೆ ನನ್ನೆದೆಯೊಳಿರವ್ಮೃತಯೋ । ಗೀಂದ್ರ ಚಿದಂಬರಪುರುಷಾ ॥ ೧೧೦ ॥

ಲಕ್ಷ್ಮೀಮತಿಯುದ್ವಾಹಸಂಧಿ ಸಂಪೂರ್ಣಂ

# ನಾಗರಸಲ್ಲಾಪಸಂಧಿ

ಬಯಲಲ್ಲಿ ಬರೆದ ಪುರುಷರೂಪೊ ಪ್ರಭೆಯ ಬೊಂ । ಬೆಯೊಯೆನೆ ತೋರ್ಪ ಸ್ವರೂಪಾ ॥
ಜಯ ಜಯ ಗುರುವೆ ಸನ್ಮತಿದೋರು ಲೋಕವಿ । ಸ್ಮಯನೆ ನಿರಂಜನಸಿದ್ಧಾ ॥ ೧ ॥

ಮದುವೆಯಾದೇಳೆಂಟು ದಿನದ ಮೇಲಣ್ಣನ । ಸದನವ ಪೊಕ್ಕಾದಿರಾಜಾ ॥
ಪುದಿದಷ್ಟಚಂದ್ರರು ಮಂತ್ರಿಯು ಮುನ್ನ ಮಾ । ಡಿದ ಕುತಂತ್ರವನರುಹಿದನು ॥ ೨ ॥

ಭುಗಿಲನೆ ಕೋಪಿಸಿದನು ಕೂಡೆ ತಮ್ಮನ । ಮೊಗವ ನೋಡಿದನು ದುಷ್ಟರಿಗೆ ॥
ಮಿಗೆ ಕರುಣಿಸಿದ ಮೇಲೇನೆಂಬೆನೊಂದುಬಾ । ರಿಗೆ ಹೋಗಲೆಂದನಾ ನೃಪತಿ ॥ ೩ ॥

ತಮ್ಮ ಸುಖಕೆ ನೆನೆದರೆ ಹೆಣ್ಣುದೇವರ । ಸೊಮ್ಮಾಗಲೆಂದು ನೋಡಿದರು ॥
ನಮ್ಮ ವಂಶಜರಲ್ತೆ ತಪ್ಪಹುದಾ ತಪ್ಪ । ನೊಮ್ಮೆ ಪಾಲಿಪುದೆಂದನನುಜಾ ॥ ೪ ॥

ಅಸಮಾನವಾದಿದೇವರು ನಿನ್ನ ಬಗೆಯೆಂದು । ನಸುನಕ್ಕು ಕಳುಹಿದನಣ್ಣಾ ॥
ಬಿಸಿನೆತ್ತರುರೆ ಹರಿವೊಲು ಯುದ್ಧವಾಯ್ತೆಂದು । ದೆಸೆಗೆ ಹಬ್ಬಿತು ಬಹುವಾರ್ತೆ ॥ ೫ ॥

ತಾಯಿಂದ ಸೋದರಮಾವನಗ್ಗದ ಪ್ರೇಮ । ದಾಯಕನೆಂಬುದು ಹುಸಿಯೆ ॥
ಆಯೆಡೆಗುರೆ ಭಾನುರಾಜವಿಮಲರಾಜ । ರಾಯಾಸಗೊಳುತೊದಗಿದರು ॥ ೬ ॥

ಬಂದ ಮಾತುಲರಿಗೆ ವಿನಯವ ಮಾಡಿ ಮ । ತ್ತೊಂದು ಪಗಲಿನುದಯದೊಳು ॥
ವೃಂದಭೂಸುರರೊಳರ್ಕಕೀರ್ತಿಕುಮಾರ ಪೆಂ । ಪಿಂದ ತಾನೋಲಗವಾದಾ ॥ ೭ ॥

ಉದಯರಾಗದೊಳಾತ್ಮಸಾರವ ಪಾಡೆ ಸಂ । ಪದ ಮಿಗೆ ಕೇಳುತಿಪ್ಪಾಗ ॥
ಸದೆವ ವಾದ್ಯದ ದನಿ ದೂರದಿ ಕೇಳಲಾ । ಯ್ತದರ ವಿಚಾರವಾಯ್ತೊಡನೆ ॥ ೮ ॥

ಪರಿದೊರ್ವ ಬನದ ಪೊರಗೆ ನೋಡಿ ಬಂದೆಲೆ । ನರನಾಥ ಹಲವು ವಿಮಾನಾ ॥
ಬರುತಿವೆ ಹಿಂದೆ ಮುಂದೊಂದೆ ವಿಮಾನವೆ । ಯ್ತರುತಿದೆ ಗಗನದೊಳೆಂದಾ ॥ ೯ ॥

ನುಡಿದವ ನಿಲ್ವನಿತರೊಳು ವಿಮಾನವ । ಕಡುಬೇಗದೊಳು ನೂಂಕಿ ಬಂದು ॥
ಪೊಡವಿಗಿಳಿದು ನೃಪನೆಡೆಗೆಯ್ದಿ ದೂರದಿ । ಪೊಡವಟ್ಟನೊಬ್ಬ ಮಾನವನು ॥ ೧೦ ॥

ಮಹಿಪ ನಾಗರಸಖ ಬರುತಿಪ್ಪನೆಂದು ಬಿ । ನ್ನಹಗೈದನವನು ಕಾಳಗದ ॥
ಬಹು ಸುದ್ದಿಗೇಳ್ದು ಚಕ್ರೇಶ್ವರನಟ್ಟಿದ । ನಹುದೆಂದರೆಲ್ಲರಾ ಕ್ಷಣವೆ ॥ ೧೧ ॥

ಅವರಂತು ನೆನೆವನಿತಕೆ ನಾಗರಾಂಕ ತ । ನ್ನವರನೆಲ್ಲರ ಹೊರಗಿರಿಸಿ ॥
ಯುವರಾಜನೆಡೆಗೆಯ್ದುತಿರ್ದನು ಲೀಲೆಯೊ । ಳವಗೊಂದು ತಡೆ ಕಾವಲುಂಟೆ ॥ ೧೨ ॥

ದೂವಟಿಯುಡೆಸುತ್ತಿ ಚಾವಡಿಯೊಳಹೊಕ್ಕು । ಭೂವರನೆಡೆಗೆಯ್ದುವಾಗ ॥
ದೇವ ಪರಾಕು ನಾಗರಸಖ ಸಾರ್ದನೆಂ । ದಾ ವೇತ್ರಧಾರರೆತ್ತಿದರು ॥ ೧೩ ॥

ನೋಡುತಿರ್ದನು ಯುವರಾಜನಾ ಸಖ ಸಾರ್ದು । ಕೂಡೆ ನಿವಾಳಿಯನಿಟ್ಟು ॥
ನೀಡಿ ಕಾಣಿಕೆಯು ಸಮ್ಮುಖದಲ್ಲಿ ತನ್ನ ಮೈ । ನೀಡಿ ಸಾಷ್ಟಾಂಗವೆರಗಿದಾ ॥ ೧೪ ॥
ತವರಾಜ ಚಕ್ರಿ ನಿಮ್ಮನು ರಾಜವಿನಯದಿ । ತವ ರಾಜಸಿಹಿಯೆ ನಿನ್ನೆಡೆಗೆ ॥
ಯುವರಾಜ ಚತುರಶೀತಿಯ ಲಕ್ಷ ಪೂರ್ವೆಯ । ಯುವರಾಜ ಜಯಯೆನುತೆದ್ದಾ ॥ ೧೫ ॥
ಇದು ಮಂತ್ರಿಯಟ್ಟಿದ ಕಾಣಿಕೆ ದಕ್ಷಿಣ । ವೊದಲಾದ ಸಖರ ಭಕ್ತಿಯಿವು ॥
ಪದೆದವಧರಿಸೆಂದು ಕೊಟ್ಟು ಮತ್ತೊವ್ಮೆ ನೀ । ಟದೊಳಡ್ಡ ಬಿದ್ದೆದ್ದನವನು ॥ ೧೬ ॥
ಇತ್ತ ಬಾ ನಾಗರ ಕುಳ್ಳಿರೆಂದರಸ ತ । ನ್ನೊತ್ತಿನೊಳಾಸನಗೊಡಿಸೆ ॥
ಹತ್ತಿರಿರ್ದಾದಿರಾಜನಿಗೆ ಕೈಮುಗಿದೋಜೆ । ವೆತ್ತು ಕುಳಿತನೊಡನವನು ॥ ೧೭ ॥

ನೋಡಿರೈ ನಾಗರನೊಂದು ಪ್ರೀತಿಯ ನಾವು । ನಾಡ ಮೇಲೆಯ್ದಿದರೆಮ್ಮಾ ॥
ನೋಡಲೆಯ್ತಂದನೆಂದಿದ್ದ ಭೂಭುಜರೊಡ । ನಾಡಿದನಾ ಯುವರಾಜಾ ॥ ೧೮ ॥
ಆರಗಲಿರಬಹುದೊಡೆಯ ನಿಮ್ಮೋಲಗ । ವಾರಾರ ಮನವ ಸೋಲಿಸದು ॥
ಬಾರದಿಹನೆ ನಾಗರೋತ್ತಮನೆಂದವ । ರಾರಯ್ದು ನುಡಿದರರ್ತಿಯೊಳು ॥ ೧೯ ॥
ನಾಗರ ಹೇಳು ಸ್ವಾಮಿಗೆ ಕುಶಲವೆ ಗೃಹ । ಭಾಗದೊಳೆಲ್ಲರ್ಗೆ ಸುಖವೆ ॥
ಆಗಸದೊಳು ಬಂದ ಬರವಿದು ತವಕವಿ । ಷ್ಟಾಗಲೇಕೆಂದನಾ ಕುವರಾ ॥ ೨೦ ॥
ಬಿನ್ನವಿಸುವೆನೆನುತವನೆದ್ದು ನಿಂದನು । ನಿನ್ನಯ್ಯಗಧಿಕಸುಕ್ಷೇಮಾ ॥
ಹೊನ್ನರಮನೆಯೊಳೆಲ್ಲರಿಗೆ ನಿನ್ನನುಜರ್ಗೆ । ಸನ್ನುತಸಂತೋಷವೆಂದಾ ॥ ೨೧ ॥
ಯಾನದೊಳೆಯ್ದುವುದತಿ ಜೋಲಿಯೆಂದು ವಿ । ಮಾನದೊಳೆಯ್ತಂದೆನಹುದು ॥
ಆ ನುಡಿಗೇಕಾಂತ ಬೇಕೆಂದನಾಗಲೈ । ನೀನಿನ್ನು ಕುಳಿತುಸುರೆಂದಾ ॥ ೨೨ ॥

ಕುಳಿತನು ಕೂಡೆಲ್ಲರೇಳ್ವಾಗ ಸರ್ವರ । ಕಳುಹಿ ಮೇಘೇಶ ಮುಂತಾದ ।
ಕೆಲಬರ ನಿಲಿಸಿಕೊಂಡಾ ನೃಪ ಕಾರ್ಯವ । ತಿಳಿದಿದ್ದು ಕೇಳ್ದನೋಜೆಯೊಳು ॥ ೨೩ ॥
ಹೇಳು ನಿನ್ನೇಕಾಂತವೇನಿವರೆಲ್ಲರು । ಕೇಳತಕ್ಕವರೈಸೆಯೆಂದಾ ॥
ನಾಲಗೆದೆರೆದವ ನುಡಿವೊಂದು ನುಡಿಯ ಚ । ಡಾಳವನೇನ ಬಣ್ಣಿಪೆನು ॥ ೨೪ ॥
ದೇವ ನೀವಿಬ್ಬರಿತ್ತೆಯ್ದಿದಂದಿಂದ ನೀ । ವಾವೂರೊಳಾವ ನಾಡಿನೊಳು ॥
ಆವ ಲೀಲೆಯೊಳಿದ್ದರೆಂದೆದೆಹಾರುಗೊಂ । ಡಾವಾಗ ಕೇಳ್ವನೆಮ್ಮರಸಾ ॥ ೨೫ ॥
ಬಹುಪುತ್ರರಿಹರು ತನ್ನೊತ್ತಿನೊಳವರೊಳು । ತ್ಸಹಗೊಳುತಿದ್ದಿದ್ದು ನಿಮ್ಮ ॥
ವಿಹರಣದತ್ತಲಾರಯ್ವನಂತಿಂತೆನ್ನ । ಬಹುದೆ ಪುತ್ರಾನುರಾಗವನು ॥ ೨೬ ॥
ಏಳೆಂಟುಮಕ್ಕಳನುಳ್ಳರಿಗೊಬ್ಬರ । ಮೇಲಕ್ಕರುಳಿದರೊಳಿಲ್ಲ ॥
ಸಾಲುಮಕ್ಕಳೊಳೊಂದೆ ಪರಿಯಕ್ಕರೆಮ್ಮ ನೃ । ಪಾಲಗಿನ್ನೇನ ಪೇಳುವೆನು ॥ ೨೭ ॥

ಕಿರಿಯರಿಗೆ ನೆರೆದವರ್ನಾಡಿಗೆಯ್ದಿದರಿಷ್ಟು । ಮರುಕವೇಕೆಂಬಿವು ನಾವು ॥
ಮರೆವೆನೆಂದರೆ ಚಿತ್ತ ಮರೆಯದಿದಕೆ ತಕ್ಕ । ಮರವೆಯುಳ್ಳರೆ ಕೊಡಿರೆಂಬಾ ॥ ೨೮ ॥

ಒಳನಾಡಿನೊಳಗಿದ್ದರೈಸೆ ಸೈರಿಸು ದೂರ । ತೊಲಗಿತಿಲ್ಲೆಂಬೆವು ನಾವು ॥
ಪೊಳಲಿಂದ ಪೊರಗಿದ್ದರೆನ್ನೆದೆ ತಾಳದೆಂ । ತುಳಿದಿಪ್ಪೆನ್ನೈ ಹೇಳಿರೆಂಬಾ ॥ ೨೯ ॥

ಕುವರರಿಲ್ಲದನ ಸಂಪತ್ತು ವಿಪತ್ತು ಸ । ತ್ಕವಿತೆಯಿಲ್ಲದನೋದು ಬೂದಿ ॥
ಅವರನಗಲ್ದೆನ್ನ ಸಿರಿ ಕುಡುಕಿಲ್ಲದ । ಕಿವಿಗಳಂತೈ ಹೋಗಿರೆಂಬಾ ॥ ೩೦ ॥

ಭೂರಿ ಕುಮಾರರುಂಟೆಮಗೆ ಪದಕದಂತೆ । ಹಾರದಂದದಿ ಲುಳಿಯಂತೆ ॥
ಹಾರಪದಕವಿದ್ದು ಬರುಗಿವಿಯಾದ ಶೃಂ । ಗಾರ ರಮ್ಯವೆ ಹೇಳಿರೆಂದಾ ॥ ೩೧ ॥

ಎಂದರೆ ದೇವರು ಕಳುಹಲೇಕವರು ಬೇ । ಡೆಂದರಿಲ್ಲಿಹರೆಂಬೆವಾವು ॥
ಅಂದು ಬೀಳ್ಕೊಡುವಾಗ ನೋವಿಲ್ಲ ಮರುಕ ಮ । ತ್ತೊಂದಿತ್ತೈ ತಾಳ್ವೆನೆಂತೆಂಬಾ ॥ ೩೨ ॥

ಅಲ್ಲಿದ್ದರಿಲ್ಲಿದ್ದರೆನೆ ಕೇಳ್ವನರಸುಗ । ಳಲ್ಲಲ್ಲಿ ನಿವಗಶ್ವಗಜವಾ ॥
ನಲ್ಲವೆಂಗಳನಿತ್ತ ವಾರ್ತೆಯ ಕೇಳ್ದು ಭೂ । ವಲ್ಲಭನರ್ತಿಮಾಡುವನು ॥ ೩೩ ॥

ಹಗಲಿರುಳೊಂದೊಂದು ಸಂತೋಷವಾರ್ತೆಯು । ಸೊಗಸಾಗೆ ನೃಪಗೆಯ್ದುತಿರ್ದು ॥
ಮುಗುಳುಮಾಲೆಯೊಳೊಂದು ಮುಳ್ಳು ಬಂದಂತೆ ಕಾ । ಳಗವಾದ ನುಡಿ ಬಂದಿತೊಡನೆ ॥೩೪॥

ಎಂತೆಂದರಾಲಿಸು ವಾರಾಣಸಿಯೊಳು ಚೆ । ಲ್ವಾಂತ ಸ್ವಯಂವರಗೃಹಕೆ ॥
ಕಾಂತಾರ್ಥ ನೃಪರೆಯ್ದೆ ಚಕ್ರಿಯ ಸುತರೆಯ್ದಿ । ಸಂತಸವಾಯ್ತೆಂದರೊಡನೆ ॥ ೩೫ ॥

ನೀರೆ ಮೇಘೇಶಗೆ ಮಾಲೆಯಿಟ್ಟಾನೆಯ । ನೇರಿ ಪಟ್ಟಣದೊಳಪೊಗಲು ॥
ವೋರೆ ಕಂದಿದ ನೃಪರುದ್ದಂಡಮತಿಯು ಬ । ಲ್ಪೂರನೊಡ್ಡಿದರೆಂದರೊಡನೆ ॥ ೩೬ ॥

ಯುವರಾಜನಿದ್ದಂತೆ ಚೆಲ್ವಿನ ಪೆಣ್ಣು ಮಿ । ಕ್ಕವರಿಗೆ ಸಲ್ವಳೆಯೆಂದು ॥
ನೆವದೋರಲದಕೆ ನೀನೊಡಬಟ್ಟು ತಡೆಯಿಕ್ಕೆ । ಬವರವಾಯ್ತೆಂದರು ಮಸಗಿ ॥ ೩೭ ॥

ಇರದೆಚ್ಚು ಕೊರೆದಿತ್ತಲತ್ತ ಕೂರಾಳ್ಗಳು । ಕುರಿದರಿಕಡಿಖಂಡವಾಗೆ ॥
ಮೆರೆವಷ್ಟಚಂದ್ರರು ಸಗ್ಗವೆಂಗಳ ಮೊಲೆ । ಮರೆಗೆ ಸಾರಿದರೆಂದರರಸಾ ॥ ೩೮ ॥

ಮತ್ತೊಂದು ಮಾತಾಯ್ತು ನುಡಿಯಲಂಜುವೆನಂಜ । ದೆತ್ತಿ ಪೇಳೆನ್ನಾಣೆ ನಿನಗೆ ॥
ಸುತ್ತಿ ಫಣಿಪ ನಿನ್ನ ಕಟ್ಟಿ ಮೇಘೇಶ್ವರ । ಗಿತ್ತನೆಂದರು ಮರೆಯೇನು ॥ ೩೯ ॥

ಅರಸನು ನಾವು ಚಿಂತಿಸುತಿದ್ದೆವೊಡನೌಸಂ । ಗರ ತೋರಲೊಬ್ಬ ಕನ್ನೆಯನು ॥
ವರಯುವರಾಜಗಿತ್ತೊಬ್ಬ ಮೇಘೇಶಭೂ । ವರಗಿತ್ತರೆಂಬ ಮಾತಾಯ್ತು ॥ ೪೦ ॥

ಮಾಲೆಯಿಟ್ಟವಳನ್ಯಸತಿಯಲ್ತೆ ಮೇಘೇಶ । ಮೇಲೆನ್ನ ಪುತ್ರನೋಪಾದಿ ॥
ಈ ಲೂಟಿ ಯುವರಾಜಗಾಗಲರಿಯದೀಗ । ಲಾಲಿಸಬೇಕೆಂದ ಚಕ್ರಿ ॥ ೪೧ ॥

ನಾಗರ ಹೋಗಿದನಾರಯ್ದು ತಾಮಸ । ವಾಗದೆ ಬಹುದು ನೀನೆನಲು ॥
ಬೇಗದೊಳೆಯ್ತಂದೆನವಧರಿಸೆಂದೆದೆ । ದಾಗಿಸಿ ನಿಂದನಾ ಸಖನು ॥ ೪೨ ॥

ಬೆರಳ ನಾಸಿಕದ ಮೇಲಿಟ್ಟು ಮಂಡೆಯ ತೂಗಿ । ಗುರುಹಂಸನಾಥಾ ಹಾಯೆಂದಾ ॥
ದುರಿತವಶದೊಳೊಂದು ದುರ್ವಾರ್ತೆ ಲೋಕಕೆ । ಹರಿದುದೆಯೆಂದನಾ ಕುವರಾ ॥ ೪೩ ॥

ಅಷ್ಟಚಂದ್ರಮರಿಗುದ್ದಂಡಮತಿಗೆ ಪಾಶ । ವೇಷ್ಟನವಾಯ್ತು ಹೋಯ್ತೊಡನೆ ॥
ಅಷ್ಟಲ್ಲದುಳಿದಪವಾದವೆಲ್ಲವು ಹುಸಿ । ಶಿಷ್ಟಸಹಾಯ ಕೇಳೆಂದಾ ॥ ೪೪ ॥

ನಾವು ಸ್ವಯಂವರಕೆಯ್ದಲಿಲ್ಲನ್ಯರ । ಭಾವೆಗೆಳಸಲಿಲ್ಲ ನಡುವೆ ॥
ಭೂವರರಿಂದಿಷ್ಟು ಯುದ್ಧ ತೊಡಗಿತಾದಿ । ದೇವರು ನಿಲಿಸಿದನೊಡನೆ ॥ ೪೫ ॥

ನನಗೆ ಮೇಘೇಶಗೆ ಬೇರೆ ಪೆಣ್ಣಿತ್ತರೆಂ । ದನುವದಿಸಿದ ಮಾತು ಸತ್ಯಾ ॥
ನೆನೆದಷ್ಟಚಂದ್ರರ್ಗೆ ಬೇರೆ ಪೆಣ್ಗಳನಿತ್ತು । ವಿನಯವಾಯ್ತುದು ತಾನು ಸತ್ಯಾ ॥ ೪೬ ॥

ರಾಜಮಾರ್ಗವ ಮೀರಿ ಬಪ್ಪನೆ ನಾನಾದಿ । ರಾಜ ಕೇಳ್ದದಕೆ ಸೈರಿಪನೆ ॥
ರಾಜಿಪ ಪರದಾರಸೋದರರೆಂಬರ್ಥ । ವಾಜಿ ನಡೆದರಾರಿಗಹುದು ॥ ೪೭ ॥

ನಾಡ ಸಾಧಿಸುವಂದು ತನ್ನ ಸೋದರರೊಡ । ಗೂಡಿ ಮೇಘೇಶ್ವರನೆಮಗೆ ॥
ಮಾಡಿದ ಸೇವೆ ಸ್ವಲ್ಪವೆ ನಾನು ಮರೆದಾಗ । ನೋಡು ಚಕ್ರೇಶನಾತ್ಮಜನೆ ॥ ೪೮ ॥

ತೀರಿಸುವವರು ನಾವಯ್ಯನೊಡವೆಯ ಭಂ । ಡಾರವ ತುಂಬುವನವನು ॥
ಆರಯ್ಯಲೆಮ್ಮೆಲ್ಲರಿಂದವನಧಿಕಕು । ಮಾರನಲ್ಲದೆ ಚಕ್ರಿಗಾಳಿ ॥ ೪೯ ॥

ಧೂರ್ತದೈವಗಳನೋಡಿಸಿದಂದು ನೀನರ್ಕ । ಕೀರ್ತಿಯೋಪಾದಿಯೆಂದಯ್ಯಾ ॥
ಸಾರ್ತೆಗೆದಪ್ಪಿದನಲ್ಲವೆ ನಾನಪ । ಕೀರ್ತಿಯ ಮಾಳ್ಪೆನೆ ಮರೆದು ॥ ೫೦ ॥

ಅಪ್ಪಾಜಿ ಪುತ್ರನೋಪಾದಿಯೆಂದವನನಂ । ದಪ್ಪಿ ಮನ್ನಿಸಿದ ನಿರೂಪಾ ॥
ತಪ್ಪದೈ ನಾವಿಂದು ಸಡ್ಡಕರಾದೆವೆಂ । ದೊಪ್ಪವಿಟ್ಟಾಡಿದನೊಡನೆ ॥ ೫೧ ॥

ವಸುಧಾಗ್ರಗಣ್ಯನಂದಾಡಿದುತ್ತಮವಾಕ್ಯ । ಹುಸಿಯಾಗಬಾರದೆಂದೆಮಗೆ ॥
ಬೆಸುಗೆಮಾಡಿದನು ಕಾಶಿಯ ಕರ್ತನೆಂದು ಸಂ । ತಸದೋರಿ ನುಡಿದ ಮಾವನಿಗೆ ॥ ೫೨ ॥

ಅಂತೆಂಬ ನುಡಿಗೆ ಮೇಘೇಶ್ವರ ವಿಜಯಜ । ಯಂತರುಬ್ಬಿನೊಳಿದ್ದು ನಿಂದು ॥
ನೋಂತೆವೈ ಸ್ವಾಮಿ ನೀನೆಮಗಿಂದು ಸುಖದ ವ । ಸಂತವಿಕ್ಕಿದೆಯೆಂದರೊಸೆದು ॥ ೫೩ ॥

ನಾವೇನು ಸೇವೆಗೈದೆವು ನಿನ್ನ ಪಿತನ ಪ್ರ । ಭಾವದಿಂದಿಳೆ ಸಾಧ್ಯವಾಯ್ತು ॥
ಸೇವಕರನು ನಿನ್ನ ಸಡ್ಡಕರೆಂದೆಮ್ಮ । ಜೀವವ ನೀ ಸೂರೆಗೊಂಡೆ ॥ ೫೪ ॥

ಅಂದು ನಿನ್ನಯ್ಯ ಮಾಡಿದ ತೇಜಕೊಲಿದು ನೀ । ನಿಂದು ಮನ್ನಿಸಿದ ಮನ್ನಣೆಗೆ ॥
ಸಂದೇಹ ಬೇಡೆಮ್ಮ ತನುವ ನಿವಾಳಿ ಹೋ । ಗೆಂದಡ್ಡಬಿದ್ದೆದ್ದರವರು ॥ ೫೫ ॥

ತನ್ನ ಮಂತ್ರಿಯ ಕೈಗೆ ಕೊಟ್ಟು ನಿವಾಳಿಯ । ಬಿನ್ನಾಣಿಸಿದನಕಂಪಾಂಕಾ ॥
ಮುನ್ನಡ್ಡ ಬೀಳ್ವನು ಕುಳಿತಿರ್ದ ನೋಡೊಂದು । ಕನ್ನೆಯ ಕೊಟ್ಟ ಗೌರವವಾ ॥ ೫೬ ॥
ಚಿಂತೆಯಾಯ್ತು ಪ್ಪಾಜಿಗಿದ ಕೇಳ್ದು ನಾವು ವಿ । ಶ್ರಾಂತಿಯೊಳ್ತಡೆದಿರಬಹುದೆ ॥
ಮುಂತೆ ಪಯಣಕೆ ಯೋಚಿಸುವುದೆಂದಣ್ಣಗೋ । ರಂತರುಹಿದನಾದಿರಾಜಾ ॥ ೫೭ ॥
ಮಂದಿ ಕುದುರೆಯ ಭೂಮಿಯೊಳಷ್ಟಚಂದ್ರರು । ಹಿಂದೆ ಸಾಗಿಸಿ ತರುತಿರಲಿ ॥
ಬಂದ ಮಿತ್ರನ ಕೂಡೆ ಪುಷ್ಪಕವೇರಿ ನಾ । ವಿಂದೆ ಸಾಗುವವೆಂದನಣ್ಣಾ ॥ ೫೮ ॥
ಏನಿಷ್ಟು ತವಕ ನೀವೊಯ್ಯನೆ ಮುಂದಣೆ । ಲ್ಲಾ ನಾಡ ನೋಡುತೆಯ್ತಹುದು ॥
ನಾನಿಂದೆ ಹೋಗಿ ಸ್ವಾಮಿಗೆ ಸ್ಪಷ್ಟವಾಳ್ಪೆನೆಂ । ದಾ ನಾಗರಾಂಕನಾಡಿದನು ॥ ೫೯ ॥
ಚರನೊಬ್ಬ ವಾರ್ತೆಯ ತಂದರೇಳ್ವಂತೆ ನೀ । ವಿರದೇಳ್ವೆರಿಲ್ಲಿಗೆ ನಾನು ॥
ಬರಲೇಕೆ ನೀವು ಭೂಮಿಯೊಳೊಯ್ಯನೆಯ್ದಿ ನಾ । ನೊರೆದಿಂದೆ ನೃಪಗೊಳ್ಪುವಾಳ್ಪೆ ॥ ೬೦ ॥
ಕುವರರ ನೃಪರ ಮೇಘೇಶನನಾರಯ್ದು । ತವಕದೊಳ್ಬಹುದೆಂದನೆನ್ನಾ ॥
ನಿವಗೆ ತಳ್ಳುಂಕ ಬೇಡೆಂದು ಚಕ್ರೇಶ್ವರ । ವಿವರಿಸಿದನು ತಳ್ವುದೆಂದಾ ॥ ೬೧ ॥
ಒಪ್ಪಿದೆನಯ್ಯನ ಕಾಣುವನ್ನೆಗ ಪಾಲು । ತುಪ್ಪ ಬೇಡೆಂದರು ತಮಗೆ ॥
ಉಪ್ಪ ತೊರೆವನು ನಿಮ್ಮಯ್ಯನೀ ನುಡಿಗೇಳ್ದ । ರೊಪ್ಪೆನಾ ವಚನ ಬೇಡೆಂದಾ ॥ ೬೨ ॥
ಸುಖಿಸುತ ನೀವೆಯ್ದಿ ನಾವು ಚಕ್ರೇಶನು । ಸುಖಿಸುತಲಿಹೆವು ನಾಡೆಲ್ಲ ॥
ಸುಖಿಯಾಗಲೆಂಬುದೆನ್ನೊಡೆಯನ ಬಿರುದೆಂದು । ಸಖನೊತ್ತಿ ಪೇಳ್ದು ನಿಲ್ಲಿಸಿದಾ ॥ ೬೩ ॥
ಚಂದವಾಯ್ತಾ ಕಾರ್ಯ ನಾಗರೋತ್ತಮ ನಿನ । ಗಿಂದೇಕೆ ಪಯಣ ನೀನೆಮ್ಮ ॥
ಮಂದಿರದೊಳಗೆಂಟುದಿವಸ ವಿಶ್ರಮಿಸಬೇ । ಕೆಂದನಾ ಕಾಶಿಯ ನೃಪತಿ ॥ ೬೪ ॥
ಸ್ವಾಮಿಯ ಸಖ ನೀನು ಬಹುದೆ ದುರ್ಲಭ ನಮ್ಮ । ಪ್ರೇಮವ ಸಲಿಸಿ ಹೋಗೆನಲು ॥
ರಾಮಣೀಯಕವಹುದಂತಾಗಬೇಕೆಂದ । ನಾ ಮಾತಿಗೊಡನೆ ಮೇಘೇಶಾ ॥ ೬೫ ॥
ಇಹೆನಹುದೆಮ್ಮ ಚಿಕ್ಕೊಡೆಯನ ಮಾವನ । ಗೃಹವಲ್ತೆ ನೃಪತಿ ಕೇಳೆಮ್ಮ ॥
ಮಹಿಪ ಚಿಂತೆಯೊಳಿದ್ದ ವೇಳೆಯೊಳ್ತಡೆದಿರ । ಬಹುದೆ ಹೇಳೆಂದನಾ ಮಿತ್ರಾ ॥ ೬೬ ॥
ಜೋಲಿ ಬೇಡಾದರೆ ಸ್ನಾನಭೋಜನಗೈದು । ನಾಳೆ ಸೈರಿಸಿ ಹೋಹುದೆಂದಾ ॥
ಕೇಳದಕೇನು ನಾಡಿದು ತೆರಳೆಂದಿಷ್ಟು । ಲಾಲಿಸಿದನು ಯುವರಾಜಾ ॥ ೬೭ ॥
ಒಡೆಯಗೆ ಚಿಂತೆಯಾದಾಗೂಟವಿಾಹದ । ಸಡಗರವೆ ನನಗಿಲ್ಲ ॥
ಸುಡುಸುಡಾ ಸುಖವ ಸಾಕಾ ಮಾತ ಮರೆಯಿನ್ನು । ತಡಹಲಾಗದು ಸ್ವಾಮಿಯೆಂದಾ ॥ ೬೮ ॥
ನಮ್ಮ ಪಯಣ ನಿಂದು ನಾಗರಾಂಕನು ನಿಂದ । ರುಮ್ಮಳ ಹೆಚ್ಚದೆ ಪಿತಗೆ ॥
ಜುಮ್ಮನೆ ಹೋಗಲಿ ತಡೆಯಬೇಡೆಂದನು । ಸಮ್ಮುಖದೊಳಗಾದಿರಾಜಾ ॥ ೬೯ ॥

ಭಾಪು ನಮ್ಮೊಡೆಯನಯ್ಯನ ದಿವ್ಯನಾಮದ । ಭೂಪನಲ್ಲವೆ ಲೇಸನೊರೆದೈ ॥
ಈ ಪರಿಯೊಳಗೆಲ್ಲರೊಪ್ಪಿರೆಂದನದೇನು । ಕೂಪನೊ ಚಕ್ರಿಗಾ ಸಖನು ॥ ೭೦ ॥
ಲೇಸಹುದಿಂದೆ ಹೋಗದಕೀಗ ನಮ್ಮನಿ । ವಾಸದೊಳ್ನಗಾಗಲೂಟಾ ॥
ಹೋಸವನವರಲ್ಲಿ ಮಾಡಿ ಪೋಗೆಂದನು । ಲ್ಲಾಸದಿಂದಾ ಯುವರಾಜಾ ॥ ೭೧ ॥
ಬೆಡಗಾದುದೆಂದೆಲ್ಲರೊಪ್ಪಿದರೆಲ್ಲರ । ಬಿಡುಗೆಗೊಟ್ಟನು ಕೂಡೆ ಸಖನಾ ॥
ಪಡೆಯ ಮನ್ನಿಸುವುದೆಂದಷ್ಟಚಂದ್ರರಿಗೆ ಪೇ । ಳ್ದೊಡನೆದ್ದನಾಸ್ಥಾನದಿಂದ ॥ ೭೨ ॥
ತಮ್ಮನಣ್ಣನಿಗೆ ಕೈಮುಗಿದು ನಾಗರ ನೀನು । ನಮ್ಮ ಕಂಡೆಯ್ದೆಂದು ಪೋದಾ ॥
ಸಮ್ಮಾನಿಸಿದ ಸಖನೊಡಗೂಡಿ ಯುವರಾಜ । ಸುಮ್ಮಾನ ಮಿಗೆ ಹೊಕ್ಕ ಗೃಹವಾ ॥ ೭೩ ॥
ಭಾನುರಾಜನ ಕರೆಯಿಸಿಕೊಂಡು ಪಂತಿಯೊ । ಳಾ ನರ್ಮಸಖಗೂಡಿ ನೃಪತಿ ॥
ಮಾನಿತಾರೋಗಣೆಗೈದು ಕೈದೊಳೆದನಿ । ನ್ನೇನು ಜೋಲಿಯ ಮಾತು ಸಾಕು ॥ ೭೪ ॥
ಅಪ್ಪಾಜಿಯಾಪ್ತನೆಂದಾನೆ ಕುದುರೆ ರತ್ನ । ಸುಪ್ಪಾಣಿಚಿನ್ನ ಬೆಳ್ಳಿಯಲಿ ॥
ಎಪ್ಪತ್ತುಲಕ್ಷವಸ್ತುವಿನುಡುಗೊರೆಯ ಕೊ । ಟ್ಟಪ್ಪಿ ಮನ್ನಿಸಿದನಾ ಸುಮುಖಾ ॥ ೭೫ ॥
ಮನ್ನಣೆಯೊಳು ತಣಿದಾ ಸಖ ಕೈಮುಗಿ । ದಿನ್ನೊಂದ ಪಾಲಿಪುದೆಂದಾ ॥
ಬಿನ್ನಣಿಸೇನು ಕೊಟ್ಟಪೆನೆಂದನಾ ಮಾತ । ನಿನ್ನ ಮಾತುಳನೊಪ್ಪಲೆಂದಾ ॥ ೭೬ ॥
ನಾನಲ್ಲವೆಂಬೆನೆ ಒಪ್ಪಿದೆನೆಂದನಾ । ಭಾನುರಾಜನು ನಗುತದಕೆ ॥
ಈ ನೃಪ ನಿನ್ನೊಡನೆಯ್ದಿ ಚಕ್ರಿಯ ಕಂಡು । ಸಾನುರಾಗದಿ ಹೋಗಲೆಂದಾ ॥ ೭೭ ॥
ಆದರಂದ ಭಾನುರಾಜಗೆ ತೋರಿತಿಲ್ಲ ಭಾ । ವದಿ ಕಂಡನಾ ಯುವರಾಜಾ ॥
ಆದಕೇನು ಕರೆತಹೆನೆನಲಡಿಗೆರಗಿದ । ಸದನದಿಂದೆದ್ದನಾ ಕ್ಷಣವೆ ॥ ೭೮ ॥
ಪ್ರಮುದದಿಂದಾದಿರಾಜನ ಮನೆಗೆಯ್ತಂದು । ವಿಮಲರಾಜನ ಕಂಡನಲ್ಲಿ ॥
ಕ್ರಮದಿ ಮೂವತ್ತುಲಕ್ಷದ ವಸ್ತುವಿತ್ತನು । ತ್ತಮಸಖಗೊಲಿದಾದಿರಾಜಾ ॥ ೭೯ ॥
ಯುವರಾಜಗಾಡಿದಂತಾತಗೆ ವಿನಯುತಂ । ತ್ರವನಾಡಿ ಮಾತುಳಗೂಡಿ ।
ಅವನೀಶನೆಡೆಗೆಯ್ದುವೊಲು ಮಾಡಿ ಬಂದನೊ । ಪ್ಪವ ಕಾಶಿಯಾಣ್ಮನ ಬಳಿಗೆ ॥ ೮೦ ॥
ಉತ್ತಮಗೋಷ್ಠಿಯೊಳಿರುತಿರೆ ಹೋಸದ । ಹೊತ್ತಾಗಲೂಟವಾಯ್ತೊಡನೆ ॥
ಹತ್ತುಲಕ್ಷದ ವಿನಿಯೋಗವನಿತ್ತೊಲ್ಮೆ । ವೆತ್ತಪ್ಪಿಕೊಂಡು ಬೀಳ್ಕೊಟ್ಟಾ ॥ ೮೧ ॥
ಮಾವನ ಮನೆಯಿಂದ ಮೇಘರಾಜನು ತನ್ನ । ಚಾವಡಿಗಾತನನೊಯ್ದು ॥
ಶೀವಿದಿಪ್ಪತ್ತೈದುಲಕ್ಷವಸ್ತುವಿನ ಸಂ । ಭಾವನೆಗೈದು ಬೀಳ್ಕೊಟ್ಟಾ ॥ ೮೨ ॥
ನೋಟದ್ದೈವತ್ತಾರುದೇಶದ ನೃಪರು ಹೋ । ರಾಟಗೆಯ್ದಷ್ಟಚಂದ್ರಮರು ॥
ಕೋಟಿಯ ಮೇಲರುವತ್ತೈದುಲಕ್ಷವ । ಕೂಟಗೊಂಡಿತ್ತರಾ ಸಖಗೆ ॥ ೮೩ ॥

ಆರುಖಂಡವನಾಳ್ವನಾಪ್ತಗೆ ದೊಡ್ಡಿತೆ । ಮೂರುಕೋಟಿಯೆನೆ ಯೋಗಾರ್ಥಾ ॥
ಬೀರುವ ಬೆಳ್ದಿಂಗಳೊಳಗೆ ವಿಮಾನವ । ನೇರಿ ಮುಂದೆದ್ದನಾ ಧನ್ಯಾ ॥ ೮೪ ॥
ತಿಂಗಳ ಬೆಳಗಿನೊಳಖಿಲವಿಮಾನ ತ । ರಂಗೊಂಡು ತಡೆಯದೆ ನೂಂಕೆ ॥
ಇಂಗಡಲೊಳು ಪೋಪ ಹಡಗುಗಳೊಯೆಂಬ । ಪಾಂಗಾಗಲವನೆಯ್ದುತಿರ್ದಾ ॥ ೮೫ ॥
ಅಂಬರಪಥದೊಳೆಯ್ದುವನಿಗೆ ತಡವುಂಟೆ । ಅಂಬನೆಚ್ಚಂತೊತ್ತಿ ಬಂದಾ ॥
ಕೊಂಬು ತಿತ್ತಿರಿ ಕಾಳೆ ತುಡುಮು ಪಿನಾಕಿಯಾ । ಡಂಬರದೊಳು ಪೊಕ್ಕ ಪುರವಾ ॥ ೮೬ ॥

ಚಿಂತೆಯಿಂದರಸುಗಳೋಲಗವಿಲ್ಲದೇ । ಕಾಂತದೊಳಾಗ ಚಕ್ರೇಶಾ ॥
ಶಾಂತರಸದ ಗೋಷ್ಠಿಯೊಳು ಮಂತ್ರಿಮಿತ್ರರ । ಸಂತತಿಯೊಳಗಿರುತಿರ್ದಾ ॥ ೮೭ ॥
ಪುರಜನ ಕಲಕಲಗುಟ್ಟಲಾಕಾಶದಿ । ಮೊರೆವ ವಾದ್ಯದ ದನಿಗೇಳ್ದು ॥
ತಿರುಗಿದನ್ನೈ ನಾಗರಾಂಕನು ಹರ್ಷದ । ಬರವಿದ್ದೆಯೆಂದನಾ ಸುಮುಖಾ ॥ ೮೮ ॥
ಒತ್ತಿ ಬಂದಿಳಿದು ವಿಮಾನವ ನೃಪಗೃಹ । ದೊತ್ತಿನೊಳೆಲ್ಲರ ಕಳುಹಿ ।
ತತ್ತರಗೊಳುತ ಸಂಭ್ರಮದಿ ವಸ್ತ್ರವನುಡೆ । ಸುತ್ತುತ ಹೊಕ್ಕನೋಲಗವಾ ॥ ೮೯ ॥
ಹುಲ್ಲೆವಾರಾಗಿ ಸೋಪಾನವ ದಾಂಟುತ । ಗೆಲ್ಲದಿಂ ಬರ್ಪನ ಕಂಡು ॥
ಮೆಲ್ಲಗೆ ಬಾ ನೋಡಿ ಬಾರೆಂದು ಚಕ್ರೇಶ । ಸೊಲ್ಲಿಸಿದನು ನಸುನಗುತ ॥ ೯೦ ॥
ಸಮ್ಮುಖಯೆನುತಿದ್ದರುಬ್ಬಿ ಕಟ್ಟಿಗೆಕಾರ । ರಿಮ್ಮೈಯ್ಯ ಮಿತ್ರರರ್ತಿಸಲು ॥
ಘಮ್ಮನೆಯ್ತಂದು ನಿವಾಳಿಕಾಣಿಕೆಗೈದು । ಸುಮ್ಮಾನದಿಂದಡ್ಡಬಿದ್ದಾ ॥ ೯೧ ॥
ಸರ್ವರಾನಂದ ಸದಾನಂದ ಗೌರವ । ಪರ್ವತ ಪ್ರಥಮಚಕ್ರೇಶಾ ॥
ದುರ್ವಾರ್ತೆ ಸ್ವಾಮಿ ಮುನ್ನಾದ ಸುದ್ದಿಗಳು ಮ । ಹೋರ್ವೀಶಯೆನುತೆದ್ದು ನಿಂದಾ ॥ ೯೨ ॥
ಚುನ್ನಸ್ವಯಂವರಕಧಿಕ ಪೋಪನೆ ನಾಡ । ಮನ್ನೆಯನಾತ್ಮಜೆಗರಸಿ ॥
ನಿನ್ನ ಕುಮಾರ ಪೋಪನೆ ತಾವೆ ತಂದೊಬ್ಬ । ಕನ್ನೆಯನಿತ್ತರಂತಿರಲಿ ॥ ೯೩ ॥
ನಾಳಿನ ಸ್ವಾಮಿ ಮಾರ್ಗವ ತಪ್ಪಿ ನಡೆವನೆ । ಮಾಲೆಯಿಟ್ಟಬಲೆಗಾಟಪನೆ ॥
ಗಾಳಿವಾತೆಲ್ಲವ ಮರೆಯೆಂದು ತಾಂ ಮುನ್ನ । ಕೇಳಿದಂತೊರೆದನೆಲ್ಲವನು ॥ ೯೪ ॥
ಪಾಶದಿಂದೊಡೆಯನ ಕಟ್ಟಿದರುಳಿವೆ ಮೇ । ಘೇಶಗಾಯ್ತುಪ್ಪಚಂದ್ರಗೆ ॥
ಕ್ಲೇಶವಿನಿತು ತೋರಿ ಬಯಲಾದುದೆಂದು ಚ । ಕ್ರೇಶಗೆಲ್ಲವ ತೀರಲೊರೆದಾ ॥ ೯೫ ॥
ನೊಚ್ಚನಾಯ್ತೆದೆ ಸಾಕು ಕುಳಿತು ಮುಂದಾದುದ । ನುಚ್ಚರಿಸೆನಲವ ಕುಳಿತು ॥
ಹೆಚ್ಚಿ ತ್ರಿಕೋಟಿಯಿತ್ತುದ ಪೇಳ್ದನದು ಹಾದಿ । ವೆಚ್ಚವೈ ನಿನಗೆಂದ ನೃಪತಿ ॥ ೯೬ ॥
ಅದು ಹೋಗಲೊಡೆಯ ನೋಡೊಂದು ಮೋಹದ ದುಷ್ಟ । ಕದನಗೇಳ್ಪಾನು ಪೋಪುದಕೆ ॥
ನೊದಲೆ ವಿಮಲರಾಜಭಾನುರಾಜರು ಬಂದು । ಪುದಿದಿದ್ದರಳಿಯಂದಿರೊಡನೆ ॥ ೯೭ ॥

ತಂದೆಯಾರೈಕೆಯಿಂ ಮೊದಲೆ ಸೋದರದ ಮಾ । ವಂದಿರೊದಗಿದರೆಂಬಾಗ ॥
ನಂದನರಿಗೆ ತಾಯ ಸೋದರರೊಮ್ಮೆ ತಾ । ಯಿಂದ ವೆಗ್ಗಳರಲ್ತೆಯೆಂದಾ ॥ ೯೮ ॥

ಎದೆಗರಗಿತು ಚಕ್ರಧರಗದ ಕೇಳ್ದು ಮೆ । ಚ್ಚಿದನು ಮೈದುನರಾಪ್ತತನಕೆ ॥
ಇದಕೆ ತಕ್ಕಕ್ಕರುಮಾಡಬೇಕೆಂದು ಭಾ । ವದೊಳಿಟ್ಟುಕೊಂಡಿಂತು ನುಡಿದಾ ॥ ೯೯ ॥

ಅನುಕೂಲ ಕುಟಿಲ ದಕ್ಷಿಣ ಶಠ ಪೀಠಮ । ರ್ದನ ಮಂತ್ರಿ ಕೇಳಿರೀಗೆನ್ನ ॥
ತನುಜರ್ಗೆ ಮಾವಂದಿರೊದಗಿದರದು ದೊಡ್ಡ । ವಿನಯವಲ್ಲವೆ ಹೇಳಿರೆಂದಾ ॥ ೧೦೦ ॥

ಮನೆಗೆಯ್ದಿ ಕಾಶಿಯ ವಿಭು ಕರೆದರೆ ಹೋಗ । ರನುವರವೆನಲವನೂರ್ಗೆ ॥
ಘನತೆಯ ಬಿಸುಟಳಿಯಂದಿರು ಕೂರ್ತೆಯ್ದಿ । ದನುಭವ ಹೆಚ್ಚೆಂದರವರು ॥ ೧೦೧ ॥

ನವಗೆಂತು ಸೋದರಮಾವಂದಿರೊಳು ಪ್ರೀತಿ । ಯುವರಾಜಗಾದಿರಾಜನಿಗೆ ॥
ತವಗಂತು ಮಾವಂದಿರೊಳು ಪ್ರೀತಿಯಿಹುದು ನಾ । ನವರ ಮನ್ನಿಸಲಿ ಬೇಕೆಂದಾ ॥ ೧೦೨ ॥

ರಾಜರೆಂದವರ ಕರೆವೆನೆ ನರ್ಕಕೀರ್ತ್ಯಾದಿ । ರಾಜರ್ಗೆ ಮುದವಾಗಲೆಂದಾ ॥
ಆ ಜನತತಿ ಪುರೆಯಿಟ್ಟುದು ನಾಗರ । ಯೋಜಿಸಿದರ್ಥವು ತಾನೆ ॥ ೧೦೩ ॥

ಬೇಗ ಬಂದೈ ಬಳಲಿದೆಯೆಂದು ಸಖ ಮೊದ । ಲಾಗಿ ಸರ್ವರಿಗುಡಲಿತ್ತು ॥
ಆಗ ಬೀಳ್ಕೊಟ್ಟರಮನೆವೊಕ್ಕನಿಲ್ಲಿಗೆ । **ನಾಗರಸಲ್ಲಾಪಸಂಧಿ** ॥ ೧೦೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೬ ॥

ತೋರಿದ ಚಿಂತೆಯ ನಿಮಿಷಮಾತ್ರದಿ ಕಡೆ । ಜಾರಿಸುವತಿಶಯರೂಪಾ ॥
ಜಾರದೆ ನನ್ನಂತರಂಗದೊಳಿರು ಬಲ್ಮೆ । ಕಾರಾ ಚಿದಂಬರಪುರುಷಾ ॥ ೧೦೭ ॥

ನಾಗರಸಲ್ಲಾಪಸಂಧಿ ಸಂಪೂರ್ಣಂ

## ಜನಕಸಂದರ್ಶನಸಂಧಿ

ಒತೆನ್ನಿಗರರಸ ಚೆಲ್ವರ ದೇವ ಸೊಬಗರ । ರನ್ನ ಲಾವಣ್ಯಾಂಗರೊಡೆಯ ॥
ಬಿನ್ನಣಿಸೆನಗೆ ಸನ್ಮತಿಯನು ಸೌಖ್ಯಸಂ । ಪನ್ನಾ ನಿರಂಜನಸಿದ್ಧಾ ॥ ೧ ॥

ನಾಗರಾಂಕನ ಕಳುಹಿದ ವೋಲೆ ಕಡುಜೋಲಿ । ಯಾಗದೆ ಸಾಕೇತಪುರಕೆ ॥
ಪೋಗಲೆಳಸಿ ಕುವರರು ನೆಗಳಿದ ರಾಜ । ಯೋಗವನೇನ ಬಣ್ಣಿಪೆನು ॥ ೨ ॥

ಕರೆದು ಮೇಘೇಶಗೆ ವಿಜಯಜಯಂತರ್ಗೆ । ಪರಿಣಯನದೊಳಾದ ನೋವು ॥
ಹರಿವಂತೆ ವಿನಯವ ನುಡಿದನಾ ಯುವರಾಜ । ದೊರೆತನದಂಗವಿದಲ್ತೆ ॥ ೩ ॥

ಬಂದಿತು ಪಾಪತಂತ್ರದೊಳೊಂದುನೋವದು । ನಿಂದಿತು ಪುಣ್ಯತಂತ್ರದೊಳು ॥
ಮುಂದದ ನೀವು ನಾವೆದೆಯೊಳಿರಿಸಲಾಗ । ದೆಂದನಾ ನೃಪನವರೊಡನೆ ॥ ೪ ॥

ತಪ್ಪಹುದಷ್ಟಚಂದ್ರರು ಮಂತ್ರಿ ನೆನೆದುದು । ಅಪ್ಪಾಜಿ ಕೇಳ್ದರೆ ಕೇಡು ॥
ಒಪ್ಪವಿಟ್ಟಾದಿದೇವರು ತಿದ್ದಿದಂತೊಮ್ಮೆ । ತಪ್ಪಿಹೋಗಲಿ ತಾಳ್ವೆವೆಂದಾ ॥ ೫ ॥

ನೊಂದೊಗೆದವರು ನಾವುರೆ ನೀವು ನೋಯದೆ । ಬಂದ ಮಕ್ಕಳು ಚಕ್ರಧರಗೆ ॥
ಒಂದೊಡಹುಟ್ಟಿನವರೊಳಲ್ಪಸಂಕ್ಲೇಶ । ಬಂದರು ಬಿಡಬೇಕು ಬೇಗ ॥ ೬ ॥

ನೀವು ನಾವಷ್ಟಚಂದ್ರರು ರಾಜಸುತರಲ್ತೆ । ಗಾವಿಲರಂತೆ ಕ್ಷತ್ರಿಯರು ॥
ನೋವ ತಾಳ್ವುದು ಲೇಸೆ ಏಕವರ್ಣದೊಳೆಂದು । ಭಾವ ತಂಪಾಗೆ ನುಡಿದನು ॥ ೭ ॥

ಆದಿದೇವರೆ ಮುನ್ನ ತಂಪುಗೈದನು ದೇವ । ರಾದರಿಸಿದೆ ನಮ್ಮನಿಂದು ॥
ಹೋದುದು ನೋವೆನುತಷ್ಟಚಂದ್ರರುಗೂಡಿ । ಪಾದಕೆರಗಿ ನಿಂದರವರು ॥ ೮ ॥

ಚೊಕ್ಕವಮಾತಿನೊಳು ಹೊಟ್ಟೆಯ ತುಂಬಿ ಕಳುಹುವ । ಕಕ್ಕುಲಿತೆಯ ರಾಜಸುತನೆ ॥
ಲೆಕ್ಕಿಸಿ ಮೇಘರಾಜನಿಗೆ ಕೂಡ್ಯೆವತ್ತು । ಲಕ್ಕದ ಮನ್ನಣೆಯಿತ್ತಾ ॥ ೯ ॥

ವಿಜಯರಾಜನಿಗೆ ಮೂವತ್ತುಲಕ್ಷಾರ್ಥವ । ತ್ಯಜಿಸಿ ಜಯಂತರಾಜನಿಗೆ ॥
ವಿಜಿತನಿಪ್ಪತ್ತುಲಕ್ಷವನುಡುಗೊರೆಯಿತ್ತು । ಭುಜತುಂಬಲಪ್ಪಿ ಬೀಳ್ಕೊಟ್ಟಾ ॥ ೧೦ ॥

ಹಿರಿಯುಗಿಪ್ಪತ್ತೈದುಲಕ್ಷಾರ್ಥ ಹದಿನೈದು । ಸಿರಿಲಕ್ಕ ವಿಜಯರಾಜನಿಗೆ ॥
ಪರನಿಗೆ ಪತ್ತುಲಕ್ಷವನಾದಿರಾಜನಿ । ತ್ತುರುಮುದದಿಂದ ಬೀಳ್ಕೊಟ್ಟಾ ॥ ೧೧ ॥

ಓಡಿತು ನೋವು ಕೂಡಿತು ಬಲುಸಿರಿ ನಲಿ । ದಾಡುತೆರಗಿ ಪೋದರವರು ॥
ನಾಡಾಡಿಗಳೆ ಚಕ್ರಧರನ ಕುವರರೊಲ್ದು । ನೋಡಿದಲ್ಲಿಹುದೆ ದಾರಿದ್ರ್ಯ ॥ ೧೨ ॥

ತರವರಿದಖಿಳದೇಶಾಧ್ಯರ ಮನ್ನಿಸಿ । ಸರಸದಿ ಬೀಳ್ಕೊಟ್ಟನೊಡನೆ ॥
ಅರಮನೆಗೊಯ್ದುಕಂಪಾಂಕ ಸನ್ಮಾನಿಸೆ ತ । ನ್ನರಸಿಕೂರ್ತೆಯ್ದಿ ಭೋಜಿಸಿದಾ ॥ ೧೩ ॥
ಹೇಮಾಂಗರಾಜ ಮುಂತೆನೆ ನೂರ್ವರುಂಟು ಲ । ಕ್ಷ್ಮೀಮತಿಯೊಡಹುಟ್ಟಿದವರು ॥
ಆ ಮಕ್ಕಳೊಡಗೂಡಿ ಕಾಶಿಯ ನೃಪನಿತ್ತ । ಪ್ರೇಮದುಚಿತವ ಕೈಕೊಂಡಾ ॥ ೧೪ ॥
ಸಾಕುಸಾಕೆಂಬಂತೆ ತಾನವರ್ಗಿತ್ತನ । ನೇಕವಸ್ತುವಿನುಡುಗೊರೆಯಾ ॥
ತಾಕಿ ಬಳ್ಬೇರಿ ಸೂಳೈಸೆ ಮುಂದೆದ್ದನಾ । ಭೂಕಾಂತ ಧರೆ ಪುರೆಯಿಡಲು ॥ ೧೫ ॥

ಸದರವೆ ಚಕ್ರಿಯ ಸಿರಿ ಮಝು ನಾಳಿನ । ಪದವಿಗೆ ಕಿರಿದಿನೊಳ್ಸಲುವ ॥
ಹದಿನೆಂಟುಲಕ್ಕದಕ್ಷೌಹಿಣಿಬಲದ ಸಂ । ಪದಗೂಡಿ ನಡೆದನಾ ಕುವರಾ ॥ ೧೬ ॥
ಮುಂದಷ್ಟಚಂದ್ರರು ಪಡೆಯ ಕೊಂಡೆಯ್ದೆ ಪೆಂ । ಪಿಂದ ಮಂತ್ರಿಗಳೊಡನೆಯ್ದೆ ॥
ಒಂದಾಗಿ ತಮ್ಮನೆಯ್ತರಲು ಸೋದರದ ಮಾ । ವಂದಿರುಗೂಡಿ ನಡೆದನು ॥ ೧೭ ॥
ಅಲ್ಲಲ್ಲಿ ತಡೆದು ವಿಶ್ರಮಿಸುತ ಭೂಭುಜ । ರೆಲ್ಲರೊಳ್ಪೂಜೆಯ ಕೊಳುತ ॥
ಮೆಲ್ಲಮೆಲ್ಲನೆ ಬರುತಿರ್ದನು ತಂದೆಯ । ಮೆಲ್ಲಡಿಗಳ ಕಾಣ್ಬೆನೆಂದು ॥ ೧೮ ॥
ತೆಂಕಣಿಂದುತ್ತರಮುಖವಾಗಿ ಹಲವುನಾ । ಡಂ ಕಳೆದಿಲ್ಲಿಗಯೋಧ್ಯೆ ॥
ಅಂಕಿಸಲಿನ್ನೆರಳ್ನೂರುಗಾವುದವೆನೆ । ಸೋಂಕಿಗೆಯ್ತಂದನಾ ಕುವರಾ ॥ ೧೯ ॥
ಅಲ್ಲಿಗೆ ಬಂದೊಬ್ಬನಂದು ನಾಗರನೊಡ । ನುಲ್ಲಾಸ ಮಿಗೆ ಚಕ್ರಿ ನುಡಿದಾ ॥
ಸೊಲ್ಲನಾ ಕುವರರಿಗೇಕಾಂತದೊಳು ಪೇಳ್ದ । ರೆಲ್ಲರಾನಂದವೆಯ್ದಿದರು ॥ ೨೦ ॥
ಜಾಣರಿಗೇನ ಕೊಟ್ಟರು ಕೇಡೆ ನೋಡು ಪ್ರ । ವೀಣನಾಗರನೆಮ್ಮ ಪಿತಗೆ ॥
ಕಾಣಲೊರೆಯೆ ರಾಜವೆಸರು ಮಾವಂದಿರ್ಗೆ । ಕೇಣಿಯಾಯ್ತೆಂದು ನಲಿದರು ॥ ೨೧ ॥
ಮಾವಂದಿರದ ಕೇಳ್ದು ಮನದಲ್ಲಿ ನಲಿದರಾ । ಭಾವವ ಹೊರಗೆ ಕಾಣಿಸದೆ ॥
ಭೂವರಾಗ್ರಣಿಯೆಂತು ಕರೆದನಂತದೆ ನವ । ಗಾವಾಗ ಮುದವೆಂದರೊಡನೆ ॥ ೨೨ ॥

ಪುರದ ಸಮೀಪವ ಸಾರ್ದರಾ ವಾರ್ತೆಯ । ಭರತೇಶ ಕೇಳ್ದರ್ತಿವಟ್ಟು ॥
ತುರಿಹದಿ ವೃಷಭರಾಜನ ಕೂಡೆ ಸಖಮಂತ್ರಿ । ವೆರಸಿದಿರಾಗಿ ಕಳುಹಿದಾ ॥ ೨೩ ॥
ಒರ್ವಮಗನಿಗಿಷ್ಟು ಸೂಚಿಸಿದನು ಕೂಡೆ । ಸರ್ವತನುಜರದ ಕೇಳ್ದು ॥
ಉರ್ವಿನಿಂದಿದಿರಾಗಿ ಹರಿದರು ದಾನಕೆ । ಪಾರ್ವರು ಪರಿವ ರೀತಿಯೊಳು ॥ ೨೪ ॥
ಆವ ಪ್ರೀತಿಯೊ ಹಿರಿಯಣ್ಣಂದಿರೆಯ್ತಂದ । ರಾವವ ಕೇಳ್ದು ಮೋಹರಿಸಿ ॥
ಮೂವತ್ತುಸಾಸಿರ್ವರನುಜರೆಯ್ದಿದರು ಲೀ । ಲಾವೇಶದಿಂದಿದಿರಾಗಿ ॥ ೨೫ ॥
ಮರುತಮಾವಾನೆ ಕುದುರೆ ತೇರು ದಂಡಿಗೆ । ಸಿರಿವೆತ್ತ ಪಲ್ಲಕ್ಕಿಯೇರಿ ॥
ತರತರದೊಳು ಪೋಗುತಿರ್ದರು ಛತ್ರಚಾ । ಮರವಾದ್ಯಧ್ವಜವಿಡಾಯದೊಳು ॥ ೨೬ ॥

ಪರಿತಂದು ವೃಷಭರಾಜನ ಮುಂದುಮಾಡಿಕೊಂ । ಡರೆಗಾವುದವನಿದಿರ್ವಂದು ॥
ನೆರೆದ ಕುಮಾರರು ವಾಹನವಿಳಿದು ಸಂ । ವರಿಸಿಕೊಂಡತ್ತ ಸಾಗಿದರು ॥ ೨೭ ॥

ಅನುಜರ ಹಿಂದಿಕ್ಕಿ ಬಂದು ವೃಷಭರಾಜ । ನನುರಾಗ ಮಿಗೆ ಕಾಣ್ಕೆಯಿಟ್ಟು ॥
ವಿನತಿಮಾಡಿದನಗ್ರಜಾತರ್ಗೆ ಸರ್ವರಾ । ತನ ಪರಿಯೊಳೆ ಕಂಡರೊಡನೆ ॥ ೨೮ ॥

ಏನು ವೃಷಭರಾಜು ಕ್ಷೇಮವೆ ನಿನಗೆ ಸೌ । ಖ್ಯಾನುಭವವೆ ಹಂಸರಾಜಾ ॥
ಬಾ ನಿರಂಜನರಾಜು ಸಿದ್ಧರಾಜಾ ಸುಖ । ಸ್ಥಾನವೆ ನಿನಗೆಂದನಣ್ಣಾ ॥ ೨೯ ॥

ಬಲಭದ್ರರಾಜು ಭಾಸ್ಕರರಾಜು ಶಿವರಾಜು । ಚಲದಂಕರಾಜು ಶ್ರೀರಾಜು ॥
ಲಲಿತಾಂಗರಾಜು ಲಾವಣ್ಯರಾಜು ಸುಖೋ । ಜ್ಜ್ವಲವೆ ಅಣ್ಣಾ ಎಂದನಣ್ಣಾ ॥ ೩೦ ॥

ಮತ್ತು ಸರ್ವರಿಗೆ ಕ್ಷೇಮವೆ ಅಣ್ಣಾಯೆನುತ ಮೂ । ವತ್ತುಸಾಸಿರ್ವರನುಜರಾ ॥
ಒತ್ತಿಗೆ ತೆಗೆದರ್ಕಕೀರ್ತಿರಾಜನು ಕೊರ । ಳ್ಗಿತ್ತನೊಂದೊಂದುಹಾರವನು ॥ ೩೧ ॥

ಎಂದೆಂದು ಕ್ಷೇಮವಹುದು ದೇವರಿಬ್ಬರೆ । ಯ್ತಂದ ಮೇಲೆಮ್ಮ ಸಂತೋಷಾ ॥
ಇಂದು ವೆಗ್ಗಳಿಸಿತೆಂದೊಡನೆರಗಿದರವ । ರೊಂದು ವಿನಯವನೇನೆಂಬೆ ॥ ೩೨ ॥

ಪೊರೆಯೊಳಗಿರ್ದ ಸೋದರರದ ಮಾವಂದಿರ್ಗೆ । ಕರಗಳ ಮುಗಿದರೋಜೆಯೊಳು ॥
ಮುರಿದಷ್ಟಚಂದ್ರರು ಸಚಿವರು ತವಗೊಲ್ದು । ಶಿರಬಾಗಲವಧರಿಸಿದರು ॥ ೩೩ ॥

ಅರಸುಮಕ್ಕಳು ಮಂತ್ರಿಸಖರು ಕಾಣಿಕೆಯಿಕ್ಕಿ । ದೊರೆಗಳಿಬ್ಬರಿಗೆರಗಿದರು ॥
ಪರಿವಾರಪ್ರಜೆಯೆಲ್ಲ ಕೈಮುಗಿದುಲಿದುದು । ಶರನಿಧಿ ಮಸಗಿದಂದದೊಳು ॥ ೩೪ ॥

ಬಂದರ್ಗೆ ವಿನಯವ ನುಡಿದು ಮುನ್ನೇರಿ ಬಂ । ದಂದಳವಿಳಿದಾನೆಯೇರಿ ॥
ಮುಂದೆಯ್ದುತಿರ್ದನು ಯುವರಾಜ ಸೋದರ । ರೊಂದಾಗಿ ಗಜವೇರಿ ಬರಲು ॥ ೩೫ ॥

ಜಯಘೋಷನೆಂಬಾನೆ ತನಗೆ ದುಂದುಭಿಘೋಷ । ಜಯವಡೆದಾದಿರಾಜನಿಗೆ ॥
ನಿಯತಭದ್ರೇಭಗಳೇರಿ ಸೋದರರು ಗಾ । ಡಿಯೊಳೆಯ್ದೆ ನೋಡುತೆಯ್ದಿದನು ॥ ೩೬ ॥

ಕೇತನಾವಳಿಯೆತ್ತೆ ವಾದ್ಯ ಘೂರ್ಣಿಸೆ ನಡೆ । ಸೇತುಗಳಂತಾನೆ ನಡೆಯೆ ॥
ಭೂತಳತುಂಬಿ ಪಾಯ್ದಳ ಬರೆ ಬಂದು ವಿ । ನೀತಪುರದೊಳಾಗ ಹೊಕ್ಕಾ ॥ ೩೭ ॥

ಅರಮನೆಗಾಗಿ ನಂಬುಗೆವಂತರತ್ತ ತ । ಮ್ಮರಸಿಯರ್ಕಳನೊಯ್ಯಲಿತ್ತ ॥
ಅರುಹನಾಲಯಕೆಯ್ದಿ ತಂದೆಯ ಬಳಿಗಾಗಿ । ಬರುತಿರ್ದನಾ ಯುವರಾಜಾ ॥ ೩೮ ॥

ಮಾಡ ಗೋಪುರ ಮದಿಲ್ಮಾಳಿಗೆ ಬಾಗಿಲು । ವಾಡ ದೇಗುಲಗಳನೇರಿ ॥
ನೋಡಿದರ್ಪುರಸತಿಯರು ಮುಗಿಲೊಳು ನಿಂದು । ನೋಡುವ ಖಚರಿಯರಂತೆ ॥ ೩೯ ॥

ಒಬ್ಬನ ನೋಡಿದ ಕಣ್ಣು ಮತ್ತೊಬ್ಬಗೆ । ಹಬ್ಬವು ಹಬ್ಬಿದ ಮೇಲೆ ॥
ಹೆಬ್ಬೇಸುಬಿಡುವವಲ್ಲಿಯೆ ತೆಗೆದರೆ ಬಾರ । ದುಬ್ಬಸಬಟ್ಟರೇನೆಂಬೆ ॥ ೪೦ ॥

ಕಂದರ್ಪ ಹಲವುರೂಪಾಂತು ಲೋಕಕೆ ದಾಳಿ । ಬಂದನೊಯೆನಲಿದ್ದರವರ ॥
ತಂದೆಯ ಚೆಲ್ವ ತಾಯ್ಗಳ ಚೆಲ್ವ ಕೇಳಲೇ । ಕೆಂಪೆದೆಯೊಳು ಮೆಚ್ಚುತಿಹರು ॥ ೪೧ ॥
ಏನ ಪಡೆದನೆಮ್ಮ ಸ್ವಾಮಿ ಲಾವಣ್ಯಸಂ । ತಾನವನಮಮ ವಿಚಿತ್ರ
ಮಾನವಲೋಕದೊಳಿಂತಪ್ಪರುಂಟೆ ಯೆಂ । ದಾ ನಾರಿಯರು ಮೆಚ್ಚುತಿಹರು ॥ ೪೨ ॥
ಧರೆಯೊಳುಳ್ಳಧಿಕವಸ್ತುವನಾಯ್ದು ತಂದು ನ । ಮ್ಮರಸು ಸೂರೆಯ ತಂದನಿಂದು ॥
ಸುರಕುಮಾರರ ಸೂರೆತಂದನೊಯೆಂದು ಸೌಂ । ದರಿಯರಿಚ್ಛೈಸಿ ನೋಡಿದರು ॥ ೪೩ ॥
ಕರಡೊಂದು ಪುಗದೆ ಕಟ್ಟಾಣಿಮುತ್ತನದಾವ । ಶರಧಿ ಪೆತ್ತುದು ನಮ್ಮ ನೃಪತಿ ॥
ಹುರುಳಳಿಯದ ಬಹುಪುತ್ರರ ಪಡೆದ ಸೌಂ । ದರವಾರ್ಧಿಯೆಂದುಬ್ಬುತಿಹರು ॥ ೪೪ ॥
ಗಂಡಾಗಲೊಮ್ಮೆ ಹೆಣ್ಣಾಗಲಿ ಚಕ್ರಿಯ । ಪೆಂಡಿರೊಳೊಬ್ಬಳೊಬ್ಬಳಿಗೆ ॥
ಪಿಂಡಿಲ್ಲವೊಂದೊಂದೆ ಶಿಶುವಲ್ತೆ ಚೆಲ್ವಿನ । ಪಿಂಡ ಪುಟ್ಟಿದುವೆಂದರೊಸೆದು ॥ ೪೫ ॥
ತಮ್ಮನೆಲ್ಲರು ನೋಡುತಿರ್ದರು ತಮ್ಮ ಕ । ಣ್ಣೊಮ್ಮೆ ನೋಡದೆ ಕೆಲಬಲವಾ ॥
ಚಿಮ್ಮಿದಂತೆಯ್ತಂದು ರಾಜಗೃಹದ ಮುಂದೆ । ಭಿಮ್ಮನಾನೆಯ ನಿಲಿಸಿದರು ॥ ೪೬ ॥
ಆನತರಾದ ತೇಜಿಷ್ಠರ ಕಳುಹುತ । ಸೇನೆಗೆ ಕೈವೀಸಿ ಬಿಟ್ಟು ॥
ಆನೆಯಿಂದಿಳಿಗವತರಿಸಿದನನುಜವಿ । ತಾನವೆರಸಿ ಯುವರಾಜಾ ॥ ೪೭ ॥

ಉಡೆಸುತ್ತಿ ಪಿರಿಯಣ್ಣ ಮುಂದೆಯ್ದಲವನ ಬೆಂ । ಗಡೆಯೊಳೆಯ್ದಿದರು ಸೋದರರು ॥
ನಡೆತರುತಿರ್ದರಯ್ಯನ ಕಾಣ್ಬರೊಳಗಣ । ಬಿಡುಮುತ್ತಿನಚ್ಚಚಾವಡಿಗೆ ॥ ೪೮ ॥
ಲಗ್ಗೆಯೊಳೆಯ್ತಹ ಪುತ್ರರ ಕಂಡೆದೆ । ಹಿಗ್ಗುತಿರ್ದನು ಹೆತ್ತ ತಂದೆ ॥
ಭೊಗ್ಗನಯ್ಯನ ಕಾಣಲೊಡನೆ ರೋಮಾಂಚದ । ಸುಗ್ಗಿವೆತ್ತಣುಗರೆಯ್ದಿದರು ॥ ೪೯ ॥
ದಿವರಾಜಸನ್ನಿಭಯುವರಾಜನೆಯ್ತಂದ । ನವಧಾನ ಸ್ವಾಮಿ ಪರಾಕು ॥
ಸುವಿವೇಕನಿಧಿಯಾದಿರಾಜನೆಯ್ದಿದನೆಂದು । ರವದೋರಿದರು ವೇತ್ರಧರರು ॥ ೫೦ ॥
ಕುಂಟಣಿನುಡಿಗನ್ಯಸತಿಗನ್ಯಧನಕೆದೆ । ವೆಂಟಣಿಸದ ಸತ್ಯವೆಂಬ ॥
ಕಂಠಮಾಲೆಯ ತಾಳ್ದ ಶುಚಿಗಳೆಂದುರೆ ವಜ್ರ । ಕಂಠಸುಕಂಠರೆತ್ತಿದರು ॥ ೫೧ ॥
ಕಾಣು ಕಾಣೊಡೆಯ ನಿನ್ನಯ್ಯನ ನವಗಿದ । ಕಾಣುವ ಭಾಗ್ಯವಾಯ್ತೆನಲು ॥
ಕ್ಷೋಣೀಶಗಿಟ್ಟು ನಿವಾಳಿಯ ಯುವರಾಜ । ಕಾಣಿಕೆಗೊಟ್ಟಡ್ಡಬಿದ್ದಾ ॥ ೫೨ ॥
ಆತನ ಕೂಡಾದಿರಾಜನೆರಗಿದನಾ । ರೀತಿಯೊಳ್ಕಾಣಿಕೆಯಿಕ್ಕಿ ॥
ಭ್ರಾತರ ಕೂಡಿದ್ದ ಕುವರರೆರಗಿದರಾ । ತಾತಗೇನೆಂಬೆನರ್ತಿಯೊಳು ॥ ೫೩ ॥
ಇರ್ವರನೇಳಿರೆಂದಾಸನಗೊಡಿಸಿದ । ನುರ್ವೀಶನವರು ಕುಳಿತರು ॥
ಸರ್ವರು ತಾವೇತಕೆರಗಿದರಿಂದು ತಾನ । ಪೂರ್ವವೆಂದೆದೆಹಿಗ್ಗಿ ನಕ್ಕಾ ॥ ೫೪ ॥

ಏಳು ವೃಷಭರಾಜು ಹಂಸರಾಜು ಸರ್ವ । ರೇಳಿರೈ ಬಳಲಿದಿರೆಂದಾ ॥
ಲೀಲೆಯಿಂದೆದ್ದರು ನೀವೆರಗಿದುದೇನು । ಪೇಳಿರೈಯೆಂದನಾ ತಂದೆ ॥ ೫೫ ॥
ನಮ್ಮರಸುಗಳು ದೇವರ್ಗೆರಗಲು ಕಂಡು । ಹೆಮ್ಮೆಯೊಳ್ನಾವಿರಬಹುದೆ ॥
ಘಮ್ಮನೆರಗಿದೆವೆಂದರು ಮಝು ಸೋದರ । ರೇಂ ಮಹಾವಿನಯಭಾಸುರರೊ ॥ ೫೬ ॥
ಆನಂದಬಟ್ಟಯ್ಯ ಕುಳ್ಳಿರಿರೆನೆ ಜಂಬು । ಖಾನದೊಳ್ಕುಳಿತರಾ ಸುತರು ॥
ಮಾನಿತವೆನೆ ಕಾಣ್ಕೆಯಿಕ್ಕಿ ವಿಮಲರಾಜ । ಭಾನುರಾಜರು ಕಂಡರೊಡನೆ ॥ ೫೭ ॥

ಕಾಣಿಕೆಗೊಡುತ ಕೈಮುಗಿವುದ ನೋಡುತ । ಕ್ಷೋಣೀಶ ತೆಗೆದಪ್ಪಿಕೊಂಡು ॥
ಹೂಣಿ ಚಕ್ಕಳ ಬೇಡವೆಂದವರ್ಗಿಡಿಸಿದ । ಶ್ರೇಣಿಯೊಳ್ಜಂಬುಖಾನವನು ॥ ೫೮ ॥
ವಿಮಲರಾಜನು ಭಾನುರಾಜನು ಬಂದುದು । ತ್ತಮವಾದುದೆಂದನಾ ಚಕ್ರಿ ॥
ಅಮಮ ವ್ಮೈಯುಬ್ಬಿದರುಬ್ಬರೆ ಷಟ್ಖಂಡ । ರಮಣನೆ ರಾಜನೆಂಬಾಗ ॥ ೫೯ ॥
ಬಾ ಭಾನುನಾಮ ವಿಮಲನಾಮಯೆಂದು ಮು । ನ್ನಾ ಭರತೇಶ ಕರೆವನು ॥
ಶೋಭಿಸಿ ರಾಜರೆಂದೆಂಬಾಗ ಮನದಲ್ಲಿ । ವೈಭವವಾಗದೇನಿಹುದೆ ॥ ೬೦ ॥
ನಮ್ಮಯ ಬರವಿನುತ್ತಮವೇನು ದೇವರ । ಸಮ್ಮುಖವೆಮಗುತ್ತಮಾರ್ಥ ॥
ಕಮ್ಮಲರೆಡೆಗೆಯ್ದಿ ಗಾಳಿ ಕಂಪೆನಿಸಿದ । ಸೊಮ್ಮಲ್ತೆಯೆಂದರಾ ನೃಪರು ॥ ೬೧ ॥
ನುಡಿಯೊಳ್ಳಿತಹುದು ನಿಮ್ಮಯ ನಡೆ ಕಷ್ಟವೆಂ । ದೊಡನಿಷ್ಟು ಕಟಕಿಯ ನುಡಿದಾ ॥
ಬಡವರ ನಡೆ ಬಲ್ಲಿದರ್ಗೊಪ್ಪದೆಂದು ಸೂ । ಳ್ನುಡಿದರವರು ಭಾವನೊಡನೆ ॥ ೬೨ ॥
ನೀವೆಂತು ಬಡವರ್ರೈ ಬಲ್ಲಿದರೆಂದನಾ । ಭೂವರ ನಗುತ ಮೈದುನರಾ ॥
ದೇವರಿಂದಧಿಕರೆಂದರೆ ತಪ್ಪದಧಿಕರೆಂ । ದಾ ವಿನೋದಾರ್ಥರಾಡಿದರು ॥ ೬೩ ॥
ಎಲ್ಲಾ ರಂಜನೆ ಸಾಕು ಸಾಕು ನೀವೆಮ್ಮಿಂದ । ಬಲ್ಲಿದರ್ರೈಯೆಂದ ನಗುತ ॥
ಸೊಲ್ಲು ತಪ್ಪದು ದೇವರಿಂದ ಬಲ್ಲಿದರೈ ನಾ । ವಲ್ಲದರಾರೆಂದರವರು ॥ ೬೪ ॥
ಜಾರುತಿದ್ದಿರಿ ಜಾಣ್ಮೆಯಿಂದ ನೀವೆಮ್ಮನು । ಮಿೀರಿದುದ್ದಂಡರೈಯೆಂದಾ ॥
ತೋರೆವೆಮ್ಮೊಳುದ್ದಂಡತನವಾವುದೆಂದಾಗ । ಕೀರಿ ಕೇಳಿದರು ಮೈದುನರು ॥ ೬೫ ॥
ನುಡಿಯಬೇಕೆ ಬೇಕು ಬೇಡವ್ಮೈ ಕೇಳ್ದೊಡಂ । ಬಡಿ ಸುಮ್ಮನಿರಿಯೆಂದ ಚಕ್ರಿ ॥
ಪೊಡವಿಗಗ್ಗಳರೊಂದ ಸೂಚಿಪೆವೆಂದೊತ್ತಿ । ತಡೆಯಬಹುದೆಯೆಂದರವರು ॥ ೬೬ ॥
ನಮ್ಮ ಪುತ್ರರ ನಮ್ಮ ಕೇಳದೆ ಕೊಂಡೊಯ್ದು । ನಿಮ್ಮ ಪುತ್ರಿಯರ ನೀವವರ್ಗೆ ॥
ಸಮ್ಮಂದಮಾಳ್ಪಾಗ ಬಡವರೆ ನವಗೂ ನೀ । ವೊಮ್ಮೆ ವೆಗ್ಗಳರಲ್ಲೈಯೆಂದಾ ॥ ೬೭ ॥
ಪಡೆದರ ಕೇಳದೆ ಪೆಣ್ಗಳನಿಳೆಯೊಳಾ । ರ್ಕೊಡುವರೆ ಅದರಿಂದ ನಿಮ್ಮ ॥
ನಡೆ ಕಷ್ಟ ನಮ್ಮನು ಮಿೀರಿದುದ್ದಂಡರೈ । ಬಡವರೆಂದೆನಲಾಗದೆಂದಾ ॥ ೬೮ ॥

ಸೊಕ್ಕಲಾ ನಿವಗೆ ಷಟ್ಖಂಡದೊಳಗೆ ನನ್ನ । ವಿಕ್ಕೊಂದ ಮಾಡುವರುಂಟೆ ॥
ಲೆಕ್ಕಿಸದೆನ್ನನು ನೀವೊಂದ ನೆಗಳ್ದಿರೈ । ದಕ್ಕಿತೈಯೆಂದನು ನಗುತ ॥ ೬೯ ॥

ಆದುದರಸ ನಿನ್ನ ಕೇಳದೆ ಕುವರರ್ಗೆ । ವೇದಿಸುವಾಗ ಪುತ್ರಿಯರಾ ॥
ಸೋದರಮಾವಂದಿರೊಯ್ದೀವರೆಂದು ವಿ । ನೋದವ ನುಡಿದ ನಾಗರನು ॥ ೭೦ ॥

ತಾಯ ಸೋದರರಳಿಯಂದಿರ ಕೊಂಡೊಯ್ವ । ನ್ಯಾಯದೊಳಿವರೊಯ್ದ ಬಗೆಗೆ ॥
ರಾಯ ನೀನೇ ತಾಳ್ದಿಯೆಂದೆದೆದಟ್ಟ ಸ । ಹಾಯನಾಡಿದನಿಂಪುಮಾತಾ ॥ ೭೧ ॥

ಇವರೊವ್ಮೆ ಕರೆದು ಪೆಂಗಳನೀವೆವೆಂದರಾ । ಕುವರರಯ್ಯನ ಕೇಳದೊಡನೆ ॥
ಅವಧರಿಪಾಗ ನೋಡಿವರು ತಂಗಿಯರಾತ್ಮ । ಭವರೆ ಹೋ ಹುಸಿಯಾಗದೆಂದಾ ॥ ೭೨ ॥

ಪಕ್ಷವೆ ನಿನಗೆ ನೀವವರೊಂದು ಕುಲವಲಾ । ಲಕ್ಷಣವಾಯ್ತಾಯ್ತು ಸಾಕು ॥
ದಕ್ಷಿಣಕುಟಿಲವಿದೂಷಕಸಖರು ಪ । ರೀಕ್ಷಿಸಿ ಪೇಳಿರೈಯೆಂದಾ ॥ ೭೩ ॥

ನನ್ನ ಕೇಳದೆ ಕೊಟ್ಟರಿವರದು ತಪ್ಪೊ ಅ । ಲ್ಲೆನ್ನದು ತಪ್ಪೊಯೆಂದನಲು ॥
ಚಿನ್ನ ಕಪ್ಪಾದಂದು ನಿನ್ನಲ್ಲಿ ತಪ್ಪು ಕೇ । ಳಿನ್ನೆಂದನಾ ವಿದೂಷಕನು ॥ ೭೪ ॥

ಅವರದು ತಪ್ಪಹುದದಕಪರಾಧವ । ಹವಣಿಸಿ ನಾನೆ ತಿದ್ದುವೆನು ॥
ಅವನೀಶ ನೀನೊಪ್ಪು ನೃಪರಿಬ್ಬರೊಪ್ಪಿ ಮಿ । ಕ್ಕವರೆಲ್ಲರಾಲಿಸಿರೆಂದಾ ॥ ೭೫ ॥

ಪಿತನ ಕೇಳದೆ ಮುನ್ನ ಪೆಣ್ಣಿತ್ತ ತಪ್ಪಿಗಾ । ಕ್ಷಿತಿಪರೊಳಿನ್ನು ಮುಂದಾದ ॥
ಸುತೆಯರೆಲ್ಲರು ನಿನ್ನ ಸುತರಿಗೆ ಸಲ್ವರೀ । ಸ್ಥಿತಿಗೊಪ್ಪು ನೀನೊವ್ಮೆಯೆಂದಾ ॥ ೭೬ ॥

ಇನ್ನೊಂದನಾಲಿಸು ನೃಪರ ತಂಗಿಯರೊಳು । ಕನ್ನೆಯರಾಗೀಗ ನೆರೆವ ॥
ಚೆನ್ನೆಯರೆಲ್ಲರು ನಿನಗೆ ಸಲ್ವರು ನನ್ನ । ಬಿನ್ನಹವವಧರಿಸೆಂದಾ ॥ ೭೭ ॥

ನಿವಗೆ ಕಾರ್ಯವ ತಿದ್ದಿ ಕೊಟ್ಟಾನು ಬರಿದೆ ಹೋ । ಗುವೆನೆ ಭೂಸುರರೊಪ್ಪರದಕೆ ॥
ಇವರೂರ ವಿಪ್ರರೊಳಿನ್ನಾದ ಚೆಲ್ವಿನ ಯುವತಿ । ಯರ್ನನಗೆನೆ ನಕ್ಕಾ ॥ ೭೮ ॥

ಅನುಕೂಲನಾಯಕನಹುದಹುದೆನೆ ಮಂತ್ರಿ । ಮಿನುಗಿ ನಕ್ಕನು ರಾಯನವರ ॥
ಅನುವ ಕಂಡೆಲೆಲೆ ಮೂವರುವಿಪ್ರರೊಂದಾದ । ರನುಪಮವಾದುದ್ಯೆಯೆಂದಾ ॥ ೭೯ ॥

ಕುಟಿಲನಾಕ್ಷಣ ವಿಟನಾಗರರದಕಿಷ್ಟ । ಕಟಕಿಯಾಡಿದರು ಕ್ಷತ್ರಿಯರು ॥
ನಟಿಸೆ ಲೇಸೆಂದರು ಶಠಪೀಠಮರ್ದನ । ರಟಮಟವಳಿದ ವೈಶಜರು ॥ ೮೦ ॥

ಭೂಷಣವಾದುದ್ಯೆ ನೀನು ತಿದ್ದಿದುದು ವಿ । ದೂಷಕಯೆಂದರ್ತಿಮಾಡಿ ॥
ಜೋಷವಾಕ್ಯದೊಳಿದ್ದ ಮಕ್ಕಳ ನೋಡಿ ಸಂ । ಭಾಷಣೆಗೈದನಾ ತಂದೆ ॥ ೮೧ ॥

ಬಳಲಿದಿರಣ್ಣ ತಮ್ಮಂದಿರು ರಾಜ್ಯವ । ತೊಳಲಿದಿರೈಯೆಂದನದಕೆ ॥
ಘಳಿಲನೆದ್ದವರು ನಿಂದರು ಯುವರಾಜ ಕೈ । ಗಳ ಮುಗಿದೊಡನಿಂತು ನುಡಿದಾ ॥ ೮೨ ॥

ಸಹಜಲೀಲಾರ್ಥ ನಾಡಿನೊಳು ನಾವಿರುತಿರೆ । ಬಹುವಾರ್ತೆ ಬಂದು ದೇವರಿಗೆ ॥
ಕಹಿದೋರಿನುವು ನಮ್ಮ ಕಾರ್ಯ ಚೇಷ್ಟಿತವೆಂದು । ಮುಹುರನುಲಾಪದೋರಿದನು ॥ ೮೩ ॥
ಜಗದೊಳನ್ಯಾಯಕೆ ಮನವಿಟ್ಟು ದೇವರ । ಮೊಗಕಾನು ಚಿಂತೆದೋರ್ಪಾಗ ॥
ಮಗನಾದ ಲೀಲೆ ತಂದೆಗೆ ಬಂದ ಶೂಲೆಯೆಂ । ಬಗಡುವಾತಿಗೆ ಬಂದೆನತ್ರಿ ॥ ೮೪ ॥
ಬಯಸಬೇಕೆ ನಾನು ಸುಖಗಳ ನಿನ್ನ ವಾ । ರ್ತೆಯ ಪೇಳ್ದರವು ತಮ್ಮ ತಾವೆ ॥
ಬಯಸಿ ಬಾರವೆ ದೇವರುದರದೊಳ್ಬಂದು ದಾ । ರಿಯ ತಪ್ಪಿ ನಡೆವೆನೆಯೆಂದಾ ॥ ೮೫ ॥
ಮಗನೆ ಕೇಳ್ಬಹುವಾರ್ತೆ ಬಂದರೇನಾ ಕ್ಷಣ । ತೆಗೆದುಹೋದುವು ಕೇಳು ರವಿಗೆ ॥
ಮುಗಿಲು ಮುಚ್ಚಿದರೆಷ್ಟು ಹೊತ್ತಿಹುದೆನಗೆ ಚಿಂ । ತೆಗಳುಂಟೆ ಹೋದುವೈಯೆಂದಾ ॥ ೮೬ ॥
ನೀನು ವಿಹಾರುವನಲ್ಲ ಮೋಘೇಶ ತಾನೆನ್ನ । ಸೂನುವಲ್ಲದೆ ಪರನಲ್ಲ ॥
ಈ ನೋವು ಬಾರದೈ ಮರೆಯೆಂದನೊಡನಿಬ್ಬ । ರಾನಂದಬಟ್ಟಿರಗಿದರು ॥ ೮೭ ॥
ಕೆಂಬಜ್ಜೆಯೊಳು ಪಣೆಯಿಟ್ಟರನಪ್ಪಿ ಚೀ । ನಾಂಬರಾಭರಣವ ಕೊಡುತ ॥
ತುಂಬಿದ ಸಭೆಯೊಳೆಲ್ಲರನು ಮನ್ನಿಸಿದನೇ । ನೆಂಬೆನಾ ನೃಪನುದಾರವನು ॥ ೮೮ ॥
ತಲೆದೂಗಿದನು ಬುದ್ಧಿಸಾಗರನಷ್ಟಕೆ । ಘಳಿಯಾರದೊಳು ಶಂಖನಿನದಾ ॥
ಮೊಳಗಿತಾ ಸನ್ನೆಗೇಳ್ದೆಲ್ಲರಾ ಕ್ಷಣದಲ್ಲಿ । ಕಳುಹಿಸಿಕೊಂಡರೊಪ್ಪದೊಳು ॥ ೮೯ ॥
ಸಕಲರ ಕಳುಹಿ ಮೈದುನರು ಮಕ್ಕಳುಗೂಡಿ । ಚಕಚಕಿಪಾಸ್ಥಾನದಿಂದ ॥
ಸುಕವಿಜನಾಂಭೋಜಸೂರ್ಯನೆದ್ದನು ಪರಾ । ಕಕಳಂಕಚಂದ್ರ ಜೀಯೆನಲು ॥ ೯೦ ॥
ಪೂಜಿತವಾಕ್ಯದಿಂದಲ್ಲಲ್ಲಿ ಬಾ ಭಾನು । ರಾಜ ವಿಮಲರಾಜಯೆನುತ ॥
ಆ ಜನಪತಿಗಳನುಬ್ಬಿಸುತಾ ರಾಜ । ರಾಜ ಹೊಕ್ಕನು ರಾಜಗೃಹವಾ ॥ ೯೧ ॥

ಕುಸುಮಾಜಿಕುಂತಲಾವತಿಯರ ಮನದ ಸಂ । ತಸವನೇನೆಂಬೆ ಸೋದರರಾ ॥
ವಸುಧಾಧಿಪತಿ ತಾನೆ ರಾಜರೆಂಬಾಗಿಷ್ಟು । ತ್ರಿಸರ ಬಿಮ್ಮೆನಿಸಲುಬ್ಬಿದರು ॥ ೯೨ ॥
ಅಣ್ಣಗಾದೊಸಗೆಗೆ ಹೆಣ್ಣುಗಳ್ನಲಿವರಾ । ಹೆಣ್ಣುಗಳಿಗೆ ಬಂದ ಸಿರಿಗೆ ॥
ಅಣ್ಣಂದಿರುಬ್ಬುವರಲ್ತೆ ಆಯೆರಡರ್ತಿ । ಬಣ್ಣಕೆ ಬಂದಿದ್ದುವಾಗ ॥ ೯೩ ॥
ತಂಗಿಯರಣ್ಣಂದಿರನ್ಯೋನ್ಯವಿನಯವ । ಸಂಗಡಿಸಿದರಾಗ ಸುತರು ॥
ಮಂಗಲಾಂಬಿಕೆಯರನ್ಯೋನ್ಯವಿನಯಮಾಡೆ । ಗಂಗಾಪ್ರವಾಹವಾಯ್ತೊಸಗೆ ॥ ೯೪ ॥
ಮೂವತ್ತುಸಾಸಿರ್ವರಣುಗರು ಮೈದುನ । ರಾವಾಸತುಂಬಿ ಕುಳ್ಳಿರಲು ॥
ಆ ವಿಭುವೊಂದೆ ಪಂತಿಯೊಳಮೃತಾನ್ನವ । ಸೇವಿಸೆ ತೃಪ್ತಿವಡೆದರು ॥ ೯೫ ॥
ಸೊಸೆಯರ ಕಾಣಿಸಿಕೊಂಡುಡುಗೊರೆಯಿತ್ತು । ಒಸೆದಣುಗರನು ಮೈದುನರಾ ॥
ಸನುನಗೆಯಿಂದ ಬೇರ್ಮನೆಗಳ್ಗೆ ಬೀಳ್ಕೊಟ್ಟು । ಸುಸುಖಿಯಿದ್ದನು ವಿಲಾಸದೊಳು ॥ ೯೬ ॥

ಜನಕನ ತಾಯುರಮನೆಗೆ ಪುತ್ರರು ತಮ್ಮ । ವನಿತೆಯುರ್ವೆರಸೆಯ್ದಿ ಕಂಡು ॥
ಘನತರಲೀಲೆಯೊಳಿರುತಿರ್ದರಿಲ್ಲಿಗೆ । **ಜನಕಸಂದರ್ಶನಸಂಧಿ** ॥ ೯೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೮ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದದ್ವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೯ ॥

ಅಸಹಾಯವಿಕ್ರಮ ವಿಕ್ರಾಂತರೊಡೆಯ ತಾ । ಮಸಹರ ಸಂತತಾನಂದಾ ॥
ನಸುಮಾಸದೆನ್ನಂತರಂಗದೊಳಿರು ಪ್ರಭಾ । ವಸನಾ ಚಿದಂಬರಪುರುಷಾ ॥ ೧೦೦ ॥

ಜನಕಸಂದರ್ಶನಸಂಧಿ ಸಂಪೂರ್ಣಂ

## ಜನನೀವಿಯೋಗಸಂಧಿ

ನಾರಾಯೆಯು ಮೆಟ್ಟಿ ನಾಟ್ಯವನಾಡುತಾತ್ಮಸಾ । ರಾಯುವ ಪ್ರಕಟಿಸುತಿಳಿಗೆ ॥
ಆಯಾಸವಿಲ್ಲದೆ ನಡೆಸು ಕಾವ್ಯವ ಸುವಿ । ಡಾಯಾ ನಿರಂಜನಸಿದ್ಧಾ ॥ ೧ ॥

ಯುವರಾಜ ಬಂದನೇಲಾ ಮೇಘರಾಜ ತ । ನ್ನವನಿಗೆಯ್ದುತ ಹಾದಿಯಲ್ಲಿ ॥
ವಿವಿಧಸೇನೆಯ ಬಿಟ್ಟು ಬಂದು ಚಕ್ರಿಯ ಕಂಡು । ತವಕದಿ ಹೋದನಾ ಕ್ಷಣವೆ ॥ ೨ ॥

ಅನುಜೆಯರಕ್ಕರು ಭಾವನ ಸನ್ಮಾನ । ತನುಜೆಯರೊಂದು ಸಂತೋಷಾ ॥
ಅನುಗೊಳಿಪಳಿಯಂದಿರುಚಿತದೊಳಿಪ್ಪತ್ತು । ದಿನವಿದ್ದರಲ್ಲಿ ನೈದುನರು ॥ ೩ ॥

ಭಾವಗೆ ತಾವು ಮನ್ನಣೆಯಿತ್ತು ಚಕ್ರಿ ವು । ಹಾವಸ್ತುವೀಯೆ ಕೈಕೊಂಡು ॥
ಕೋವಿದವಿಮಲರಾಜನು ಭಾನುರಾಜನು । ತಾವೆಯ್ದಿದರು ತಮ್ಮ ಪುರಕೆ ॥ ೪ ॥

ಭೂನಾಥನೊಲಿಯೆ ಚಕ್ಕಳ ಹೋಗಿ ಸಲೆ ಜಂಬು । ಖಾನವಾಯ್ತುರೆ ರಾಜವೆಸರು ॥
ಮಾನಿತವಾಯ್ತಶ್ವಗಜರತ್ನ ಮೊದಲಾದ । ಪೀನಲಾಭದಿ ಹೋದರವರು ॥ ೫ ॥

ಒಂದು ತಪ್ಪೊಂದು ಸಂದಣಿ ತಪ್ಪದರಸಗಾ । ಬಂದ ನೈದುನರತ್ತ ಪೋಗೆ ॥
ಒಂದೆರಳ್ದಿನದ ಮೇಲಾ ಪುರದೊತ್ತಿಗೆ । ಬಂದಿತೇನೆಂಬೆನೊಂದೊಸಗೆ ॥ ೬ ॥

ಘಟನೆಯೊಳ್ತೆಲುಗ ಕನ್ನಡ ಹುರುಮುಂಜಿ ಸೊ । ರಟ ಗುಜ್ಜರಾದಿ ನಾಡಿನೊಳು ॥
ರಟಿಸುತನಂತವೀರ್ಯ ಸ್ವಾಮಿಯುರುಗಂಧ । ಕುಟ ಬಂದುದಧಿಕಲೀಲೆಯೊಳು ॥ ೭ ॥

ಸುರಭೇರಿ ಮೊಳಗೆ ಸರ್ವರು ಜಯಜಯೆಯೆನೆ । ಧರೆಯಲ್ಲಿ ಪ್ರಭೆ ತುಂಬಿ ತುಳುಕೆ ॥
ತರಣಿಮಂಡಲ ನಿಲುವೊಲು ಗಂಧಕುಟಿ ನಿಂದು । ದರರೆ ಬಾನದೊಳೂರ ಪೊರಗೆ ॥ ೮ ॥

ಒಸಗೆವೇಳ್ದರಿಗಂದುಚಿತವಿತ್ತು ಪಯಣಕ । ರ್ತಿಸುತರಮನೆಗೆಯ್ದಿ ನೃಪತಿ ॥
ಉಸುರಲೆಲ್ಲರು ನಲಿದರು ತಾಯಿ ಸಂತೋಷ । ರಸದೊಳೋಲಾಡಿ ತೇಲಿದಳು ॥ ೯ ॥

ನಾ ಕಾಣ್ಬೆ ತಾ ಕಾಣ್ಬೆನೆಂದರು ನರಸುರಾ । ನೀಕವಿದ್ದೆಡೆಗೆ ರಾಣಿಯರಾ ॥
ಏಕೆ ಕೊಂಡೊಯ್ವನಾ ಚಕ್ರಿಯೆಲ್ಲರ ಮೃದು । ವಾಕಿಂದ ತಿಳುಹಿ ನಿಲ್ಲಿಸಿದಾ ॥ ೧೦ ॥

ಶಿರದೊಳಗೊಂದು ಕಪ್ಪಿನ ಕುರುಳಿಲ್ಲನೆ । ನರೆತ ಪಾರ್ಥಿಕೆಯಲ್ತೆ ನಾನು ॥
ಅರುಹನ ಕಂಡರೇನಣ್ಣಯೆಂದೆನೆ ತಾಯ । ಹರುಷಕಾ ನೃಪನೊಡಂಬಟ್ಟಾ ॥ ೧೧ ॥

ಆನಂದಭೇರಿಯ ಹೊಯ್ಸಿ ತಾಯೊಡನೆಯ್ದಿ । ಸೂನುಗಳ್ವೆರಸಿ ಲೀಲೆಯೊಳು ॥
ಮಾನವೇಶ್ವರ ಬಂದು ಗಂಧಕುಟಿಯ ಪೊಕ್ಕ । ನೇನೆಂಬೆನೆಲ್ಲರರ್ತಿಸಲು ॥ ೧೨ ॥

ಪುರಜನ ಪರಿಜನವೆಲ್ಲ ಪೂಜಾವಸ್ತು । ಪರಿಕರವಿಡಿದೊಡನೆಯ್ದಿ ॥
ಪುರೆ ಸಾರು ನಿಲ್ಲು ಕುಳ್ಳಿರು ತೊಲಗೆಂದು ನಿ । ರ್ಜರವೇತ್ರಧರರು ತಿದ್ದಿದರು ॥ ೧೩ ॥

ಭರತರಾಜೇಂದ್ರ ಬಾ ಯುವರಾಜ ಬಾ ಚಕ್ರ । ಧರಪುತ್ರರೆಲ್ಲರೆಯ್ತನ್ನಿ ॥
ಪರಮನ ಕಾಣಿರೈ ನಿಮ್ಮೊಂದು ಸಿರಿಯ ಭಾ । ಪುರೆಯೆಂದರಾ ವೇತ್ರಧರರು ॥ ೧೪ ॥
ಅನಿತರೊಳಾ ಚಕ್ರಧರನ ಮಾತೆಯು ಕಾಣು । ತನಿಮಿಷನೇತ್ರಧಾರಿಗಳು ॥
ಜಿನ ಜಿನ ಜನನಿಯೆ ಸಾರ್ದಳಿಂದೆಮ್ಮ ಲೋ । ಚನದ ಪುಣ್ಯವೆಯೆಂದರೊಡನೆ ॥ ೧೫ ॥
ಈ ಪುಣ್ಯತಾಯೆ ಅನಂತವೀರ್ಯಸ್ವಾಮಿ । ರೂಪುದೋರಿದ ಜನ್ಮಭೂಮಿ ॥
ತಾಪಸರೆಲ್ಲರಂಬಿಕೆಯೆಂದು ನೋಡಿದ । ರಾ ಪಾವನಾಂಗಿಯ ಸುರರು ॥ ೧೬ ॥
ಮೂರುಲೋಕವನಾತ ಬೆರಸ ಸಂಬಂಧಬ । ಟ್ಟೀರುವರಿವರಾತನೆಡೆಗೆ ॥
ತೋರುವ ತನುಕೂರ್ತು ತಾಯ್ತಂದೆಯೆಂಬರು । ಮೀರುವರಾರು ಕರ್ಮವನು ॥ ೧೭ ॥
ಮಾತೆಯ ಮುಂದಿಟ್ಟು ಸುತರುವೆರಸಿ ಚಕ್ರಿ । ವೀತರಾಗಗೆ ಕಾಣ್ಕೆಯಿಕ್ಕಿ ॥
ಘಾತಿಕರ್ಮೋದ್ಧಾತ ಜಯಯೆಂದು ಸಾಷ್ಟಾಂಗ । ರೀತಿಯೊಳ್ಪೊಡವಟ್ಟು ನಿಂದಾ ॥ ೧೮ ॥
ವನಜದ ಮೇಲೆ ಸಿದ್ಧಾಸನವಡೆದಿಂದು । ದಿನಪರ ನಗುತಿದ್ದ ಜಿನಗೆ ॥
ಜನನಿ ವಂದಿಸಿ ನಡೆನೋಡಿ ಸಂತಸದಿ ಬಿ । ರ್ರನೆ ಬೀಗಿದಳು ಬೀಗದಿಹಳೆ ॥ ೧೯ ॥
ಜಿನಪೂಜೆಗೆಂದು ಮುನ್ನವೆ ಶುಚಿವೆತ್ತರ । ಮನೆಯಿಂದ ಬಂದಿರ್ದರಲ್ತೆ ॥
ಅನುಪಮಪೂಜೆಗೈದರು ವಾದ್ಯಕೋಟಿ ಭೋ । ರೆನೆ ದಶದಿಕ್ಕು ಭಿಮ್ಮೆನಲು ॥ ೨೦ ॥
ರಾಯನು ರಾಯನ ಸುತರು ವಸ್ತುಗಳ ಪೂ । ಜಾಯವರಿದು ನೀಡಿ ಕೊಡಲು ॥
ತಾಯಿ ಪೂಜಿಸಿದಳಾ ಸ್ವಾಮಿಯನವರ ಗು । ಣಾಯತಾಚರಣೆಯಾರ್ಗುಂಟು ॥ ೨೧ ॥
ಓರಂತೆ ಜನನಿ ಪೂಜಿಸುವಳದಕೆ ಪರಿ । ಚಾರಕನಾದನಾ ಚಕ್ರಿ ॥
ಆರು ಬಣ್ಣಿಸಬಲ್ಲರಷ್ಟವಿಧಾರ್ಚನೆ । ಮೇರುವಾಯ್ತರುಹನ ಮುಂದೆ ॥ ೨೨ ॥
ವಾರಿ ಗಂಧಾಕ್ಷತೆ ಪುಷ್ಪ ನೈವೇದ್ಯದಿಂ । ದಾರತಿಯಿಂ ಧೂಪ ಫಲದಿ ॥
ಆ ರಾಜಮಾತೆ ಪೂಜಿಸಿದಳು ದಿವಿಜನ । ರೋರಗತತಿ ಪುರೆಯಿಡಲು ॥ ೨೩ ॥
ಕಡೆಗರ್ಘ್ಯ ಶಾಂತಿಧಾರೆಯ ಮಾಡಿ ಮಿಸುನಿಪೂ । ಬಿಡುರನ್ನಗಳ ವೃಷ್ಟಿಮಾಡೆ ॥
ತುಡುಕಿ ಮೇಲಮರರು ಪೂಮಳೆಗರೆದರು । ಗ್ಗಡವಾಯ್ತು ಜಯಜಯಘೋಷಾ ॥ ೨೪ ॥
ಪೂಜೆ ಪೂರಿತವಾಗೆ ವಾದ್ಯಾಳಿ ನಿಂದುದಾ । ರಾಜನಂಬಿಕೆಯ ಮುಂದಿಟ್ಟು ॥
ಓಜೆಯಿಂದರುಹನ ಬಲಗೊಳಿಸಿದನು ತ । ನೂಜರ ತಾನೊಡನೆಯ್ದಿ ॥ ೨೫ ॥
ದೇವನ ಬಲಗೊಂಡು ಮುನಿಗಳಿಗೆರಗಿ ಮ । ಹಾವಿಭು ನಿಂದನಿಂಬರಿದು ॥
ದೇವಗುರುಗಳ ವಂದಿಸಿ ತಾಯಿ ಪೊಕ್ಕಳು । ತೀವಿದಜ್ಜಿಯರ ಗೋಷ್ಠಿಯನು ॥ ೨೬ ॥
ಅಜ್ಜಿಕೆಗಳಿಗಾಕೆ ನೆಮಿಸಿದಳವರು ನೀ । ನಜ್ಜಿಕೆಯಲ್ತೆ ಬಾರೆನುತ ॥
ಸಜ್ಜನಾರ್ಚಿತೆಯ ಮೈದಡವಿ ಮನ್ನಿಸಲೊಂದು । ಕಜ್ಜ ತೋರಿತು ದೇವಿಗೊಳಗೆ ॥ ೨೭ ॥

ಇವರಂತೆ ನಾನಪವರ್ಗವ ಗಳಿಸದೆ । ಭವನದೊಳಿಹುದಾವ ರೀತಿ ॥
ನೆವದಿಂದ ಕಂಡೆನೀ ಸಭೆಯುನಿನ್ನಾತ್ಮ ಕಾ । ರ್ಯವ ಮಾಳ್ಪೆನೆಂದೆಣಿಸಿದಳು ॥ ೨೮ ॥

ಮುನಿಗೋಷ್ಠಿಗೊಡನೆಯ್ದಿ ಪುತ್ರನೊಡನೆ ತನ್ನ । ಮನದೊಳಿದ್ದುದ ಪೇಳ್ದಳಾಕೆ ॥
ಜಿನಸಿದ್ಧ ದೇವರಿಂತುಟು ನಿರೂಪಿಸಲಾಗ । ದೆನುತ ಕಾಲ್ಗೆರಗಿದನವನು ॥ ೨೯ ॥
ಅರಮನೆಯೊಳಗಣ ಬಸದಿಯೊಳಗೆ ದೇವ । ರಿರುತಾತ್ಮಪದವ ಸಿದ್ಧಿಪುದು ॥
ಭರತನ ಬಿಟ್ಟು ತೊಲಗಲಾಗದೆಂದೊತ್ತಿ । ಚರಣವಿಡಿದು ಬೇಡಿಕೊಂಡಾ ॥ ೩೦ ॥
ಕೇಳೆನ್ನ ಮಾತನೆಂದಾಕೆ ಮುಂಡೆಯ ಪಿಡಿ । ದೇಳಿಸಿ ತಕ್ಕೈಸಿಕೊಂಡು ॥
ಬೀಳುವ ಮೈ ತಪದೊಳು ಹೋಗಲೆಂದು ಕ । ಪೋಲವನಲುಗಿ ನುಡಿದಳು ॥ ೩೧ ॥
ಕಂಡೆನು ಕಣ್ದಂಬಿ ನಿನ್ನ ಸಂಪದವನ । ಖಂಡಿತೋತ್ಸಾಹದೊಳಿರ್ದೆ ॥
ಮುಂಡೆ ಬೆಳ್ಪಾದ ಮೇಲಿನ್ನು ತಪಸುಮಾಳ್ಪೆ । ಗಂಡುಮಗನೆ ಕಳುಹೆನ್ನಾ ॥ ೩೨ ॥
ಸ್ತ್ರೀಜನ್ಮ ಕಷ್ಟವಲ್ಲವೆ ನಿನ್ನ ಪಡೆದು ನಾ । ನಾಜನ್ಮದೊಳಗಾನು ಬರಲೆ ॥
ಆ ಜವಂಜವವ ಕೆಡಿಪೆನಣ್ಣ ಕಳುಹೆಂದ । ಳಾ ಜಗನ್ಮಾತೆ ಪುತ್ರನೊಳು ॥ ೩೩ ॥
ಸಂಗಡಕಜ್ಜಿಯರುಂಟರಮನೆಯ ಶೋ । ಭಾಂಗದ ಜಿನಗೃಹದಲ್ಲಿ ॥
ತುಂಗತಪಸುಮಾಡಬಾರದೆ ಹಲವುದೇ । ಶಂಗಳ ತೊಳಲಲೇಕೆಂದಾ ॥ ೩೪ ॥
ತಡೆದಿಂದುವರೆಗೆ ನೀನೆಂದಂತೆ ಗೃಹದಲ್ಲಿ । ನಡೆಸಿದೆನಲ್ಲವೆ ತಪಸಾ ॥
ಕಡೆಯ ಕಾಲಕೆ ಜಿನಸಭೆಯಲ್ಲಿ ದೇಹವ । ಬಿಡಬೇಕು ಕಳುಹೆಂದಳಾಕೆ ॥ ೩೫ ॥
ದೇಹ ಕೆಡುವುದಾತ್ಮ ಕೆಡನು ಸ್ತ್ರೀಜನ್ಮವ । ರೂಹುಗೆಡಿಸಿ ಮುಂದೆ ನೀನು ॥
ಹೋಹ ಮುಕ್ತಿಗೆ ನಾನು ಬರಬೇಕು ಕಳುಹೆಂದು । ಸಾಹಸದೋರಿ ನುಡಿದಳು ॥ ೩೬ ॥
ಮುಪ್ಪಿನೊಳಿನ್ನೆಷ್ಟು ದಿನ ನಿನ್ನ ಮನೆಯೊಳ । ಗಿಪ್ಪಳಂಬಿಕೆ ದೀಕ್ಷೆಗೊಳಲಿ ॥
ಒಪ್ಪಲಿ ಭವ್ಯಯೆಂದರು ಮುನಿಗಳು ರಾಯ । ನೊಪ್ಪಚ್ಚಿ ಮೌನದೊಳಿರ್ದಾ ॥ ೩೭ ॥
ನ್ಯಾಯದೊಳಾತ್ಮಕಾರ್ಯವ ಮಾಳ್ಪೆನೆನಲಂತ । ರಾಯವ ಮಾಳ್ಪರೆ ನೀನು ॥
ತಾಯಾರು ನೀನಾರು ಸುಮ್ಮನಿರೆಂದು ಸ । ಹಾಯರಾದರು ತಪೋಧನರು ॥ ೩೮ ॥

ನೆನೆದಾಗ ಬಹುದೆ ವಿರಕ್ತಿ ನೀನೊಪ್ಪೆಂದ । ಜನನಿಯು ಸುಮ್ಮನೆ ನೋಳ್ಪ ॥
ಜನಪನ ಬಗೆಯರಿದಾ ಮುನಿಗಳು ಕೂಡೆ । ಜಿನನೊತ್ತಿಗೊಯ್ದರಾಕೆಯನು ॥ ೩೯ ॥
ಅರಸೆ ನಿನ್ನನುಮತವೆಯೆನೆ ನುಡಿಯುವೆ । ಭರತೇಶ ಮೊಗಸನ್ನೆಗೊಟ್ಟಾ ॥
ಅರುಹಗೊರೆದು ದೀಕ್ಷೆಗೊಡಿಸಿದರಾಕೆಗೆ । ಗುರುಗಳಿಂದಾಗದುದೇನು ॥ ೪೦ ॥
ದೇವದುಂದುಭಿ ಮೊಳಗಲು ದೇವಗಾನವ । ದೇವಗಾಯಕಿಯರು ಪಾಡೆ ॥
ದೇವಾಂಗವಸ್ತ್ರದ ತೆರೆವಿಡಿಯಲು ಜಿನ । ದೇವ ದೀಕ್ಷೆಯನಿತ್ತನೊಡನೆ ॥ ೪೧ ॥

ತನುಮೊದಲಾದುವೆಲ್ಲವು ಪರವಸ್ತು ಹಂ । ಸನೆ ನಿನ್ನ ವಸ್ತು ನಂಬೆಂದು ॥
ನೆನಹೆಲ್ಲವಳಿದೊಂದೆ ವಸ್ತುವ ನೋಡೆಂದು । ಜಿನನುಪದೇಶಮಾಡಿದನು ॥ ೪೨ ॥
ಶ್ರೀತಪದಸ್ಥ ಪಿಂಡಸ್ಥ ರೂಪಸ್ಥ ರೂ । ಪಾತೀತವೆಂಬ ನಾಲ್ಕರೊಳು ॥
ಓತು ಸಾಧನೆಮಾಡಿ ಪಿಂಡಸ್ಥದೊಳೆ ಚಿತ್ತ । ಸೋತು ನಿಲ್ವುದು ಮುಕ್ತಿಯೆಂದಾ ॥ ೪೩ ॥
ಚಿದಮಲಾತ್ಮನೆ ನನ್ನ ವಸ್ತು ಕರ್ಮಗಳು ಮೈ । ಮೊದಲಾದುವನ್ಯವೆಂಬಾಗ ॥
ಪದಿನಾಲ್ಕು ಪತ್ತು ಪರಿಗ್ರಹವುಂಟೆ ವಾ । ಕ್ಯದ ಮಾಲೆ ಸಾಕು ನಂಬಾರ್ಯೆ ॥ ೪೪ ॥
ಇರಲೇಕಭುಕ್ತ ಶಕ್ತಿಯನರಿದುಪವಾಸ । ವಿರಲೊಮ್ಮೆ ಮಾಣಲಿ ಮಾನ್ಯೆ ॥
ತರಹರಿಸೆಂದನನಂತವೀರ್ಯ ಸ್ವಾಮಿ । ಹರುಷಬಟ್ಟಿಚ್ಛಾಮಿಯೆನಲು ॥ ೪೫ ॥
ಸ್ತ್ರೀರೂಪ ಕೆಡುವುದು ಸ್ವರ್ಗದಿ ಸುರನಾಗಿ । ಸಾರುವೆ ಮುಕ್ತಿಯನೆಂದು ॥
ಭೂರಿ ಸೂತ್ರಾರ್ಥವನಡಕದೊಳರುಹಿ ದೀ । ಕ್ಷಾರತ್ನವಿತ್ತನಾ ಸ್ವಾಮಿ ॥ ೪೬ ॥
ಮಲಮೂತ್ರವಿಲ್ಲದ ಮೈಗೆ ಕಮಂಡಲ । ಜಲವೇಕೆ ಜೀವರಕ್ಷಾರ್ಥಾ ॥
ಸಲಿಪಿ ಪೀಲಿಯನಾತ್ಮಸಾರಪುಸ್ತಕವ ಸಂ । ಗಲಿಸಿದರರುಹನಾಜ್ಞೆಯೊಳು ॥ ೪೭ ॥

ತೆರೆ ತೊಲಗಿತು ಸೆರಗಿನ ಮುಂಡೆಮುಸುಕಿಂದ । ಕರದ ಪುಸ್ತಕ ಪಿಂಛದಿಂದ ॥
ವರಶಾಂತರಸದಧಿದೇವತೆಯೊಯೆನೆ । ಪರಮದೀಕ್ಷಾಂಗಿಯೊಪ್ಪಿದಳು ॥ ೪೮ ॥
ಬಿಸವಂದವೇನೆಂಬೆನಾಕೆಯ ಮೈಗೊಂದು । ಪೊಸಕಾಂತಿ ಪುಟ್ಟಿತಾ ಕ್ಷಣವೆ ॥
ಪೊಸದೀಕ್ಷೆಯಲ್ಲ ಮುನ್ನಾದಂತೆ ದೀಕ್ಷೆಗೊಂ । ಡೆಸಕದೊಳಿದ್ದಳಾ ಮಾನ್ಯೆ ॥ ೪೯ ॥
ಆರಿಗು ಜಿನಸಭೆಯೊಳು ಶೋಕ ಹುಟ್ಟದ । ಕಾರಣ ತಾಳ್ದನಾ ನೃಪತಿ ॥
ನೀರುಗಣ್ಣೊಳು ಮೂರ್ಛೆವೋಗನೆ ತಾಯನ್ಯ । ಧಾರಿಣಿಯೊಳು ದೀಕ್ಷೆಗೊಳಲು ॥ ೫೦ ॥
ಸುರಮರ್ತ್ಯಭುಜಗರಾ ನವ್ಯದೀಕ್ಷಾಂಗಿಗಾ । ದರದಿಂದ ವಿನತಿಮಾಡಿದರು ॥
ಸರಿಯಾಯ್ತು ಇಂದಿಗೆ ತಾಯಾಸೆಯೆನುತ ಪು । ತ್ರರುಗೂಡಿ ಮಣಿದನಾ ನೃಪತಿ ॥ ೫೧ ॥
ಪರನೆಂದು ಕಂಡಳಲ್ಲದೆ ತನ್ನ ಮಗನೆಂದು । ಬೆರಸಿ ನೋಡಿದಳೆ ಮತ್ತವನಾ ॥
ಪರಸುತ ಸ್ವಸ್ತಿಕದಿಂದೆದ್ದು ಸ್ವಾಮಿಯ । ಚರಣಾಬ್ಜಕಿಟ್ಟಳು ನೊಸಲಾ ॥ ೫೨ ॥
ಸಿದ್ಧತ್ವಮಿಹಿಯೆಂದು ಸ್ವಾಮಿ ಬೀಳ್ಕೊಡೆ ಸುರ । ರುದ್ದದಿ ಪೂಮಳೆಗರೆಯೆ ॥
ಶುದ್ಧರು ಜಯಜಯಯೆನೆ ನಡೆದಳು ಕಾರ್ಯ । ಸಿದ್ಧಿ ತಾನಜ್ಜಿಯರೆಡೆಗೆ ॥ ೫೩ ॥

ಇತ್ತ ಬಾ ತಾಯೆ ಯಶಸ್ವತೀಕಂತಿಯಿಂ । ದುತ್ತಮವಾಯ್ತವ್ವಯೆಂದು ॥
ಅತ್ತ ಕರೆದುಕೊಂಡರಜ್ಜಿಕೆಗಳು ಶಾಂತಿ । ವೆತ್ತಿಂಬುಗೊಂಡಳಾ ಮಾನ್ಯೆ ॥ ೫೪ ॥
ಎತ್ತ ಹೋದುದೊ ತನ್ನ ಮಗನ ಮೇಲಣ ಮೋಹ । ಸುತ್ತಣ ಸೊಸೆಯರ ಸ್ನೇಹಾ ॥
ಉತ್ತುಂಗ ಸಂಪದದರ್ಶಿ ಮಹಾತ್ಮರ । ವೃತ್ತಿ ವಿಸ್ಮಯವಲ್ತೆ ಜಗಕೆ ॥ ೫೫ ॥

ನೋಕ್ಷಗಾಮಿಗಳನೆ ಪೆತ್ತಳವರೊಳೊರ್ವ । ದೀಕ್ಷಾಗುರುವಾದ ತನಗೆ ॥
ಈ ಕ್ಷಿತಿಯೊಳಗೀಕೆಗೆಣೆಯುಂಟೆಯೆಂದು ವಿ । ವಕ್ಷಿಸುತಿರ್ದರಲ್ಲಲ್ಲಿ ॥ ೫೬ ॥

ಪಡೆದಳು ಷಟ್ಖಂಡಪತಿಯನಾತನ ಸಿರಿ । ಘಡ ತೃಣವೆಂದಾಸೆಯುಳಿದು ॥
ಪಡೆದಳು ದೀಕ್ಷೆಯನೀಕೆ ಕೈವಲ್ಯವ । ಪಡೆವುದೇನರಿದೆಂದರೆಲ್ಲ ॥ ೫೭ ॥

ಬಿಸುಟ ಕುರುಳ್ತೊಡಿಗೆಯ ಸಗ್ಗವೆಂಗಳೊ । ಯ್ದಸೆದಬ್ಧಿಯೊಳು ಬಿಟ್ಟರತ್ತ ॥
ವಸುಧೇಂದ್ರ ಜಿನಗೆ ವಂದಿಸಿ ಮುನಿಗಳಿಗೆ ವಂ । ದಿಸಿ ಪುರಕೆಯ್ದಿದನತ್ತ ॥ ೫೮ ॥

ಆ ಕ್ಷಣದೊಳು ಗಂಧಕುಟಿ ತೆರಳಿದುದಂತ । ರಿಕ್ಷಕೆ ಮತ್ತೊಂದುದೆಸೆಗೆ ॥
ಈಕ್ಷಿಸಿ ಕುವರರ ಬೀಳ್ಕೊಟ್ಟು ಗೃಹವ ಮ । ತ್ತಾ ಕ್ಷಿತಿಪಾಲನೆಯ್ದಿದನು ॥ ೫೯ ॥

ಅತ್ತೆ ದೀಕ್ಷೆಯನಾಂತಳೆನೆ ಕೇಳ್ದು ಸೊಸೆಯರು । ಚಿತ್ತದಿ ಹವ್ಮೈಸಿ ಕೆಡೆದು ॥
ಎತ್ತಣ ತಳ್ಳಿ ಬಂದಿತೊ ಗಂಧಕುಟಿಯೆನು । ತತ್ತರು ಮನೆಮನೆಗಳಲಿ ॥ ೬೦ ॥

ಹಾ ನಮ್ಮ ಕರ್ಮವೆ ಕಷ್ಟಕಾಲವೆ ಮಾತು । ಹಾನಿಯನೊಯ್ದಯ ವಿಧಿಯೆ ॥
ಈ ನಮ್ಮ ಮನೆ ಭಿಮ್ಮಗಾಯ್ತೆ ಹಾಹಾಯೆಂದು । ಮಾನಿನಿಯರು ಹಲುಬಿದರು ॥ ೬೧ ॥

ತಮ್ಮಂದಿರಣುಗೆಯರೆಂಬೆಯಲ್ಲದೆ ನಮ್ಮ । ನೊಮ್ಮೆ ಬೇರ್ಪಡಿಸಿ ಕರೆವೆಯ ॥
ಉಮ್ಮಳದೊಳಗೆಮ್ಮ ನೂಕಿ ಸಾಗುವರೆ ಅ । ತ್ತೆಯಮ್ಮಾಜಿಯೆಂದತ್ತರವರು ॥ ೬೨ ॥

ಪರ್ವೋಪವಾಸವಿದ್ದರೆ ನಾವು ನವಗಾಗಿ । ಸಾರ್ವಭೌಮನಿಗೆ ಕೋಪಿಸುವೆ ॥
ಆರ್ವಿಚಾರಿಪರಿನ್ನು ನಮ್ಮನತ್ತೆಯಮ್ಮ ನೀ । ನಿರ್ದಯಳಾಗಿ ಸಾಗುವರೆ ॥ ೬೩ ॥

ಪೆತ್ತವರನು ಮರೆವಂತೆಮ್ಮ ಸೌಖ್ಯಸಂ । ಪತ್ತು ಕೈಮಿಗೆ ನಡೆಯಿಸಿದೆ ॥
ಹೆತ್ತು ಬೀಸಾಡುವಂತೀಡಾಡಿ ಪೋಗಲ್ಕೆ । ಚಿತ್ತವೆಂತೆಳಸಿತತ್ತೆಯಮ್ಮಾ ॥ ೬೪ ॥

ಜನಪನೊಡನೆ ನೀನು ನುಡಿವುದ ನಿನ್ನೊಳಾ । ಜನನಾಥ ನುಡಿವುದ ಕೇಳ್ದು ॥
ನನೆಕೊನೆವೋಗುತಿರ್ದೆವು ನಮ್ಮ ನೋಯಿಪು । ದನುಗುಣವೆ ಜಗನ್ಮಾತೆ ॥ ೬೫ ॥

ಅಳುತೆಲ್ಲರೆಯ್ತಂದು ನೃಪನ ಕಾಲ್ಗಳ ಮೇಲೆ । ಫಳಿಲನೆ ಬಿದ್ದು ಕೂಡೆದ್ದು ॥
ಎಲೆ ದೇವ ಮುನ್ನೆಂದು ಪೊರೆದಿಂದು ತೊತ್ತಳ । ದುಳಿದೆಯ್ಯೆ ಹೋಗೆಂದರಳಲಿ ॥ ೬೬ ॥

ತಡೆವರೇನಾಯ್ತು ನೀನೊಪ್ಪೆನೆಂದರೆ ದೀಕ್ಷೆ । ಗೊಡುವರಾರೊಪ್ಪಿಸಿ ಬಹರೆ ॥
ಕಡುಕಷ್ಟಗುಣವ ಕಲಿತೆಯಲಾ ಹಾಯೆಂದು । ಮಡಿದಿಯರ್ನೊಂದು ನುಡಿದರು ॥ ೬೭ ॥

ನುಡಿಯದೆ ನೋಡುತಿರ್ದನು ರಾಯ ಪೆಣ್ಗಳ । ಗಡಬಡೆಗಳನಿಷ್ಟು ನಿಲಿಸಿ ॥
ಸುಡುವ ತನ್ನಳಲನಾರಿಸುತ ಪಟ್ಟದ ರಾಣಿ । ನಡೆತಂದು ಸಾರ್ದಳೋಪನನು ॥ ೬೮ ॥

ಏನಾಯ್ತು ದೇವ ನೀನಿದ್ದು ಬೇಡೆನೆ ಮಾತು । ಹಾನಿ ಪೋಪಳೆಯೆಂದಳಾಕೆ ॥
ನಾನಡಿವಿಡಿದೊತ್ತಿ ತಡೆದೆನೊಪ್ಪಳು ಕೂಡೆ । ಜೈನಾರ್ಯರೊತ್ತಿದರೆನ್ನಾ ॥ ೬೯ ॥

ತಪಕಂತರಾಯುವ ಮಾಳ್ಪೆಯಯೆಂದರು । ತಪಸಿಗಳದಕಂಜಿ ನಿಂದೆ ॥
ಅಪರವಯಸಿನಲ್ಲಿ ತಪಿಸಬೇಕೆಂದಿತ್ತ । ಕೃಪೆಮಾಡದಮ್ಮನೆಯ್ದಿದಳು ॥ ೭೦ ॥
ಹೋಗಲಿ ಮುಪ್ಪಿನ ಕಾಲವಲ್ಲವೆ ತಮ್ಮ । ಯೋಗವನವರು ಸಾಧಿಸಲಿ ॥
ಆಗಾಗ ನಮ್ಮಾತ್ಮಗತಿಗೆ ನಾವೆಣಿಪೆವಾ । ಬೇಗೆ ಬೇಡೆಲ್ಲರಿಗೆಂದಾ ॥ ೭೧ ॥
ಒಡವೆಯ ನೀಗಿದಂತರಸಿಯರೆಲ್ಲರು । ಮುಡಿಬಾಗಿ ಚಿಂತಿಸುತಿರಲು ॥
ಎಡೆನರೆಹಾಯ್ವ ಪಾಟಿಯ ರಾಣಿಯೊರ್ವಳು । ಬಿಡುಗೆವಟ್ಟೆಂತು ನುಡಿದಳು ॥ ೭೨ ॥
ಅತ್ತ್ಯಾಜಿಯಂತಾನು ದೀಕ್ಷೆಯ ತಳೆದಾತ್ಮ । ಕೃತ್ಯವನೆಸಗುವೆನೆಂದು ॥
ಸತ್ಯವ ನುಡಿದಳನಂತಸೇನಾದೇವಿ । ನಿತ್ಯಾತ್ಮರಸಿಕನ ಮುಂದೆ ॥ ೭೩ ॥
ಬಿಸಿಲರಸಿನದಂತೆ ಜವ್ವನ ಹೋಯ್ತು ಕಾ । ಣಿಸಿದುವು ನರೆತೆರೆಯಿನ್ನು ॥
ಹಸನಲ್ಲ ಭೋಗ ಯೋಗಕೆ ಕಳುಹೆಂದಾಕೆ । ನೊಸಲನಿಟ್ಟಳು ರಾಯನಡಿಗೆ ॥ ೭೪ ॥
ಲಾಲಿಸಿ ನೃಪತಿ ಲೇಸಾದುದಾ ಭೋಗಕೆ । ಕಾಲವಲ್ಲಿನ್ನು ಸಂಯಮಕೆ ॥
ಕಾಲವಹುದು ದೂರ ಹೋಗಬೇಡೆಮ್ಮ ಜಿ । ನಾಲಯದೊಳು ತಪಿಸೆಂದಾ ॥ ೭೫ ॥
ಮಾತುಲಾನಿಯ ಕೂಡೆ ತಪಸು ಮಾಡುವೆನೆಂಬ । ಪ್ರೀತಿಯುಂಟೆನಗೆಂದಳದಕೆ ॥
ಆ ತಳ್ವಿಗೊಪ್ಪೆ ನಜ್ಜಿಕೆಗಳುಂಟವರ ಸಂ । ಗಾತದೊಳ್ತಪಿಸೆಂದೆನಿಲ್ಲಿ ॥ ೭೬ ॥
ಆದಕೊಡಂಬಡಳಾಕೆ ನೃಪತಿ ಕಣ್ಣೊತ್ತಿ ತ । ನ್ನಾದಿರ ಪೆಂಡಿರಿಗೆ ಸೂಚಿಸಿದಾ ॥
ತುದಿಗೆಲ್ಲರೊಂದಾಗಿ ತಪಸುಮಾಡುವನೆಂದು । ಹದಗೈದು ನಿಲಿಸಿದರವರು ॥ ೭೭ ॥
ಆಕೆಯಂದದ ಪ್ರಾಯದವರು ಕೆಲಬರು ಮ । ತ್ತಾಕೆಯ ನುಡಿಗೆ ಸಿಗ್ಗಾಗಿ ॥
ಸಾಕು ನಮಗೆ ಭೋಗ ಬಸದಿಯೊಳಿಹೆವೆನ । ಲಾ ಕಾರ್ಯ ಲೇಸು ಲೇಸೆಂದಾ ॥ ೭೮ ॥
ಯತಿಗಳ ಕೈಯೊಳೆಲ್ಲರಿಗೇಕಭುಕ್ತವ । ನುತಬ್ರಹ್ಮಚರ್ಯವ ಕೊಡಿಸಿ ॥
ಹಿತದಜ್ಜಿಗಳ ಕೂಡೆ ತುರುಬಿನಜ್ಜಿಗಳೆಂಬ । ಸ್ಥಿತಿಯೊಳಾ ನೃಪನಿಂಬುಗೈದಾ ॥ ೭೯ ॥
ಮಕ್ಕಳುಳ್ಳವರು ತಂತಮ್ಮ ಪುತ್ರರ ಬೀಡ । ಹೊಕ್ಕೇಕಭುಕ್ತಗೈದಿಹರು ॥
ಚಿಕ್ಕನನಂತಸೇನಾದೇವಿ ಸವತಿಯ । ರಿಕ್ಕಲುಂಡಿಹಳಜ್ಜಿಯರೊಳು ॥ ೮೦ ॥
ಬರಡೆಯಲ್ಲಾಕೆ ಮರೀಚಿರಾಜನನೊಬ್ಬ । ಹಿರಿಯ ಪುತ್ರನ ಪೆತ್ತಳಹುದು ॥
ಪುರುನಾಥ ದೀಕ್ಷೆಗೊಂಡಂದಾತ ಮುನಿಯಾಗಿ । ಮರುಳಣ್ಣನಾದನಂತಿರಲಿ ॥ ೮೧ ॥
ಪೊರೆದ ಚಿಂತೆಯನೊತ್ತಿ ಮೂರುದಿನದ ಮೇಲೆ । ಕರುಮಾಡದೊಳು ರಾಯನಿರಲು ॥
ಅರಳಂಬೊ ತಾರೆಯೊ ಪಕ್ಷಿಯೊಯೆನೆ ದೂರ । ಬರುತಿದ್ದುದೊಂದು ಬಾನದೊಳು ॥ ೮೨ ॥
ಮುಟ್ಟ ಸಾರ್ವಾಗ ಪಾರಿವಪಕ್ಕಿಯದು ಗಾಳಿ । ವಟ್ಟೆಯಿಂದಿಳಿದೊತ್ತಿಗೆಯ್ದಿ ॥
ಕಟ್ಟಿದ್ದುದದರ ಕಂಠದೊಳೆಂದುಕಾಗದ । ಬಿಟ್ಟು ನೋಡಿದನವನೀಶಾ ॥ ೮೩ ॥

ಶ್ರೀಸುನಂದಾಂಬಿಕೆ ಮಗಗರಸಣ್ಣಗೆ । ಸೇಸೆಯಿಟ್ಟರಿಪುವ ಕಾರ್ಯ ॥
ಭಾಸುರಭುಜಬಲೀಶನ ಗಂಧಕುಟಿ ಸಾರ್ದು । ದೀ ಸಮಯದೊಳೆಮ್ಮ ಪುರಕೆ ॥ ೮೪ ॥

ಆಡಬಾರದು ದೊಡ್ಡಕಾರ್ಯವುಂಟತಿಜೋಲಿ । ಮಾಡದಿಂದೆ ನೀನು ಬಹುದು ॥
ನಾಡಿದು ನಾಳೆಯೆಂದರೆ ನನ್ನ ಕಾಣ್ಬುದು । ಕೂಡದು ನಿನಗಿತಿ ಸ್ವಾಹಾ ॥ ೮೫ ॥

ಎಂಬೋದಿ ಲಿಪಿಗೆ ಕೈಮುಗಿದು ದೀಕ್ಷೆಯ ತಾಳ್ವೆ । ನೆಂದೆಂಬ ಪರಿಯಿದೆಂದರಿದು ॥
ಬಂದ ಪಕ್ಕಿಗೆ ತಂಪುವಾಡಿ ವಿಮಾನದ । ಸಂದಣಿಯೊಳಗೆದ್ದನೊಡನೆ ॥ ೮೬ ॥

ಸ್ಮರಪುರಕೆಯ್ದಿ ನಂದನರಿದಿರ್ಗೊಳೆ ಮಾತೆ । ಯರಮನೆವೊಕ್ಕಮ್ಮಗೆರಗಿ ॥
ಪರಕೆಯನಾಂತು ಸ್ವಸ್ಥದಿ ಕುಳಿತವನೀಶ । ಹರುಷವೇರಿಸಿದನಂಬಿಕೆಗೆ ॥ ೮೭ ॥

ಅಮ್ಮಾಜಿ ನಿಮ್ಮರ್ಥವೇನು ನಿಮ್ಮಕ್ಕನಂ । ತೆಮ್ಮ ಬೀಸಾಡುವ ಬಗೆಯೆ ॥
ಮಮ್ಮಾ ನಾನೇನು ಕಷ್ಟನೊ ನಿವಗೆಂದ ಚಿ । ಕ್ಕಮ್ಮನೊಡನೆ ಚಕ್ರಧರನು ॥ ೮೮ ॥

ಮುಪ್ಪಲ್ತೆ ಮಗನೆ ನಾನಿನ್ನು ತಪಸುಮಾಳ್ಪೆ । ನೊಪ್ಪಹುದಹುದೆಂದಳಾಕೆ ॥
ಇಪ್ಪಳಲ್ಲೆಂದು ಬಲ್ಲನು ಪುಷ್ಪಶರಪುತ್ರ । ರೊಪ್ಪಿದರೆಯ್ದಿ ಸಾಕೆಂದಾ ॥ ೮೯ ॥

ಅವರಿಗಾಗಿಷ್ಟು ದಿವಸವಿದ್ದೆ ಸಾಲದೆ । ನೆವದೋರದಿರು ಸಾಕು ನಿನ್ನ ॥
ಕುವರರ್ಗೆ ನೀನುಂಟು ಕಳುಹೆನ್ನನೆಂದು ಗ । ಲ್ಲವ ಪಿಡಿದಲುಗಿದಳ್ಮಗನ ॥ ೯೦ ॥

ಪುರದೊತ್ತಿಗದೆ ಗಂಧಕುಟಿ ಸಾರ್ದುದಾನತಿ । ಜರತಿಯಲ್ಲವೆ ಅಂತುಟಾಗಿ ॥
ಭರತಣ್ಣ ನಿನ್ನ ಕೇಳದೆ ಪೋಗಲಂಜಿರ್ದೆ । ನಿರೆನಿನ್ನು ದೀಕ್ಷೆಗೆ ಕಳುಹು ॥ ೯೧ ॥

ಅಕ್ಕಗೆ ದೀಕ್ಷೆಯ ಕೊಡಿಸಿದೆ ನನಗೇಕೆ । ಸಿಕ್ಕದೋರುವೆ ಮುಕ್ತಿಗಾನು ॥
ಅಕ್ಕನೊಡನೆ ಬಂದು ನಿನ್ನ ಸಂದಿಸಬೇಕು । ಚಿಕ್ಕನೊಪ್ಪೊಪ್ಪೆಂದಳೊತ್ತಿ ॥ ೯೨ ॥

ದೇವರೊಪ್ಪಿದುದಾಗಲೆಂದನದಕೆ ಹರು । ಷಾವೇಶವೆದ್ದಪ್ಪಿಕೊಂಡು ॥
ಈ ವೇಳೆಯೊಳೆ ಗಂಧಕುಟಿಗೆ ಹೋಗುವವೆಂದ । ಳಾವಾಸದಿಂದೆದ್ದರೊಡನೆ ॥ ೯೩ ॥

ಭೂಮಿ ಭೋರೆನೆ ಗಂಧಕುಟಿಗೆಯ್ದಿ ಭುಜಬಲಿ । ಸ್ವಾಮಿಗಂಬಿಕೆಗೂಡಿ ನಮಿಸಿ ॥
ಆ ಮಾತೆಗಂದು ಪ್ರೇರಿಸಿದಂತೆ ಜಿನಪೂಜೆ । ಗೀ ಮಾತೆಗಿಂದು ಪ್ರೇರಿಸಿದಾ ॥ ೯೪ ॥

ಅಲ್ಲಿ ಜಿನಗೆ ಮುನಿಗಳಿಗೆಂತು ಸಂದುವಂ । ತಿಲ್ಲಿ ಸಂದುವು ವಿಭವಗಳು ॥
ಅಲ್ಲಿದ್ದ ಸ್ವಾಮಿಯಂತಿಲ್ಲಿದ್ದ ಸ್ವಾಮಿಯು । ಸೊಲ್ಲಿಸಿ ದೀಕ್ಷೆಯನಿತ್ತಾ ॥ ೯೫ ॥

ತೆರಪಿಗೆ ತೆಗೆದು ವರ್ಣಿಸೆ ಜೋಲಿಯುಹುದಾಗಿ । ಕಿರಿದಿನೊಳಾಡಿ ಬಿಡುವೆನು ॥
ಎರಕವರ್ಚನೆ ಗೀತವಾದ್ಯ ದೀಕ್ಷಾಕ್ರಮ । ಕೊರತೆಹೊದ್ದದೆ ಪೂರ್ಣವಾಯ್ತು ॥ ೯೬ ॥

ಅಕ್ಕನಂದದಿ ತಂಗಿ ಶಾಂತಭಾವದಿ ಕಾಂತಿ । ಮಿಕ್ಕಿರ್ದಳಾ ಸಮಯದೊಳು ॥
ಮಕ್ಕಳೆ ಗುರುವಾಗಿ ತಾಯ್ಗಳ ಮೋಕ್ಷಮಾ । ರ್ಗಕ್ಕೆತ್ತಿದರು ಚಿತ್ರವಲ್ತೆ ॥ ೯೭ ॥

ನಾಕಿಗಳ್ಮಗನು ವಂದಿಸೆ ಪರಸುತ ಸುನಂ । ದಾಕಂತಿ ಸಾರ್ದಳಜ್ಜಿಗಳಾ ॥
ಭೂಕಾಂತ ಜಿನಗೆ ತಾಪಸರಿಗೆರಗಿ ಸ್ವಲ್ಪ । ವ್ಯಾಕುಲಾಂಗದಿ ಮುಗುಳಿದನು ॥ ೯೮ ॥

ಪೋದುದಾ ಕ್ಷಣ ಗಂಧಕುಟಿಯತ್ತ ಮತ್ತೊಂದು । ಮೇದಿನಿಗೊಡನಿತ್ತ ಸುತರಾ ॥
ಆದರಿಸುತ ಬಂದು ಭರತಚಕ್ರೇಶ್ವರ । ಪೌದನಪುರದೊಳಪೊಕ್ಕಾ ॥ ೯೯ ॥
ಹಿಂದುಳಿದರ್ಕಕೀರ್ತ್ಯಾದಿರಾಜರು ಬಂದು । ಸಂದಿಸಿದರು ತಮ್ಮ ಪಿತನಾ ॥
ಕಂದರ್ಪನಣುಗರುಮೂವರು ಚಿಂತೆಯೊ । ಳೊಂದಿರೆ ನುಡಿಸಿದನರಸಾ ॥ ೧೦೦ ॥
ನಿಮ್ಮೆಮ್ಮ ಮೇಲಣಕ್ಕರಿಗಿಷ್ಟು ಕಾಲ ಚಿ । ಕ್ಕಮ್ಮನಿರ್ದುದು ಸಾಲದಾಯ್ತೆ ॥
ತಮ್ಮಾತ್ಮಗತಿಯನಿನ್ನೆಸಗಲ್ಕೆ ನೋಯದಿ । ರೇಂ ಮಹಾಬಲರಾಜಯೆಂದಾ ॥ ೧೦೧ ॥
ಜರೆಪಟ್ಟು ಮೂರ್ಛೆದಟ್ಟಿರದೆಮ್ಮ ತಾಯ್ಗಳು । ಸುರರು ಜೀಯೆನೆಯಿದಿರ್ಗೊಂಡ ॥
ಸಿರಿಗೆ ನಾವರ್ತಿಸಬೇಕಲ್ಲದಿದಕೆ ನೋ । ವರೆ ಕಂದ ಹೇಳೆಂದನಯ್ಯಾ ॥ ೧೦೨ ॥
ಏಕೆ ನೋವೆಮಗೆ ದೇವರ ಕೃಪೆಯೊಂದಿರೆ । ಸಾಕು ಮಿಕ್ಕವರ ಹಂಗೇನು ॥
ಹಾಕಿಹೋದರು ನಮ್ಮನಂದೆ ಪೆತ್ತವರೆಂದ । ನಾ ಕುವರನು ತಂದೆಯೊಡನೆ ॥ ೧೦೩ ॥
ಬಾಲಕರೆಂದಯ್ಯ ತಡೆದನೆ ಮಾತೊಂದ । ಹೇಳಿ ಹೋದರೆ ತಾಯ್ಗಳೆಮಗೆ ॥
ಧೂಳೊಳೀಡಾಡಿ ಹೋದರು ಚಕ್ರಧರನೊಬ್ಬ । ಪಾಲಿಸಿದನು ಬಲ್ಲೆನೆಂದಾ ॥ ೧೦೪ ॥
ಅಜ್ಜಿಯು ತಾನಂದೆ ಪೋಪೆನೆಂದಳು ದೇವ । ರುಜ್ಜುಗಿಸಿದ ಭಕ್ತಿ ಕೂರ್ತು ॥
ಅಜ್ಜರ ನಡೆಕೂರ್ತು ನಾವು ಕೂರ್ತಿದ್ದು ಸು । ಕಜ್ಜಕೆಯ್ದಿದ್ದಳದೊಂದಾಯ್ತು ॥ ೧೦೫ ॥
ಎಲ್ಲರ್ಗೆ ತಂದೆತಾಯೆಂದಿಬ್ಬರುಂಟೆಮ । ಗಿಲ್ಲವಿಬ್ಬರ ತಳ್ಳಿಬಳ್ಳಿ ॥
ಬಲ್ಲೆವು ತಾಯಾಗಿ ತಂದೆಯಾಗಿಯು ದೇವ । ರಲ್ಲವೆ ನಮಗೊಬ್ಬರೆಂದಾ ॥ ೧೦೬ ॥
ಎಳೆಯಂದು ಹಾರದೆ ಹೋದರ ನಾವಿನ್ನು । ಬಳೆದಂದು ಹಾರಿದರಹುದೆ ॥
ಮೊಳೆಮೊದಲಾಗಿ ಸಾಕಿದನೊಬ್ಬನಿರೆ ಸಾಕು । ಬಲುಭಾಗ್ಯವಂತರಾವೆಂದಾ ॥ ೧೦೭ ॥
ಅಪ್ಪಾಜಿಯರು ಸಲಹುವರೆಂಬುದರಿದು ಚಿ । ಕ್ಕಪ್ಪಾಜಿಯರು ತಾಯ್ಗಳಂದು ॥
ತೆಪ್ಪಗೆಯ್ದಿದ್ದರಣ್ಣ ನೋಯದಿರೆಂದೊಡ । ನೊಪ್ಪವಿಟ್ಟನು ಯುವರಾಜಾ ॥ ೧೦೮ ॥
ಪುರುನಾಥವಂಶದೊಳಾರಾದರೊಬ್ಬರಿ । ದ್ದರೆ ಸಾಕು ತಮ್ಮ ವಂಶವನು ॥
ಪೊರೆವರಂತದು ಕುಲಬಿರುದದರಿಂದ ಪೋ । ದರು ನಿಮ್ಮ ನೋಡದೆಮ್ಮವರು ॥ ೧೦೯ ॥
ಅವರೇನ ಪೊರೆಯಬೇಕವರ ನಾಮವ ಪೇಳ್ದ । ರವನಿಯೆಲ್ಲೆಮ್ಮ ಕೈವಶವು ॥
ಯುವರಾಜ ನೀನರಿಯದುದೆಯೆಂದೊರೆದನು । ಯುವರಾಜ ಚಿತ್ತ ತಂಪಾಗೆ ॥ ೧೧೦ ॥

ಎರವಳಿದಾಡುವ ಮಗನ ಮಾತಿಗೆ ಮೆಚ್ಚಿ । ಭರತೇಶನಾಲಿಸುತಿರಲು ॥
ಕರವ ಮುಗಿದು ರತ್ನಬಲರಾಜನೊಯ್ಯನೆ । ಹಿರಿಯಯ್ಯನಿದಿರೊಳಿಂತೆಂದಾ ॥ ೧೧೧ ॥

ಅಣ್ಣಾಜಿ ನುಡಿದುದು ಪಡೆದವರಂದೆಮ್ಮ । ಬಿಣ್ಣ ಹೋದಳಲಿಗಾಡಿದುದೆ ॥
ಸಣ್ಣನಲ್ಲದು ದೊಡ್ಡ ಯುಕ್ತಿ ಚಿತ್ತೈಸದ । ಬಣ್ಣಿಪೆನೆಂದನಾ ಕುವರಾ ॥ ೧೧೨ ॥
ಅವರು ಮೋಹವ ಗೆದ್ದರಾವು ಮೋಹದೊಳಿದ್ದೆ । ವವರ ಬೆರಸಲೊಪ್ಪದೆಂದು ॥
ಅವರ ಸಂಬಂಧವಿಲ್ಲೆಂದು ಸತ್ಯವನೆ ಬಿ । ನ್ನವಿಸಿದನೆಂದನಾ ಚದುರಾ ॥ ೧೧೩ ॥
ಯೋಗಿಗಳಾದರಾ ಜನಕಜನನಿಯೆನ್ನ । ಲಾಗದೆಂದವರ ಬೇರ್ಪಡಿಸಿ ॥
ಭೋಗದೊಳಿದ್ದ ದೇವರೆ ತಂದೆತಾಯೆಂದ । ನೀ ಗುಣವಾರಿಗುಂಟೆಂದಾ ॥ ೧೧೪ ॥
ಪುರೆ ರತ್ನಬಲರಾಜು ಲೇಸನೆಂದೈ ಲೇಸ । ನೊರೆದೈ ಮಹಾಬಲಿಯೆಂದು ॥
ಭರತೇಶನಿಬ್ಬರ ತಕ್ಕೈಸಿಕೊಂಡನಾ । ಪುತ್ರರು ನೋಡಿ ಸಂತೋಷಬಡಲು ॥ ೧೧೫ ॥

ಸೊಬಗಾದುದಲ್ತೆ ನಿನ್ನಣ್ಣಂದಿರೆಂದುದು । ಸುಬಲರಾಜು ಸೊಲ್ಲಿಸೆಂದಾ ॥
ವಿಬುಧೇಂದ್ರ ನಿನ್ನ ಪುತ್ರರ ಮಾತು ಸೊಬಗಿದು । ಸೊಬಗೆನ್ನ ಕೇಳ್ವುದೇನೆಂದಾ ॥ ೧೧೬ ॥
ಒಳ್ಳಿದರುದರದಿ ಬಂದರ ನಡೆನುಡಿ । ಯೊಳ್ಳಿತೆಂಬನಿತ ನಾ ಬಲ್ಲೆ ॥
ಅಲ್ಲಿಂದ ಮೇಲೆ ದೇವರೆ ಬಲ್ಲಿರೆನೆ ಚಕ್ರಿ । ಲಲ್ಲೆಯಿಂದಪ್ಪಿದನವನಾ ॥ ೧೧೭ ॥
ಆದಿದೇವರು ಯುವರಾಜು ಕಂಡಿರೆ ಸ್ನೇಹ । ಭೇದವಿಲ್ಲವರೊಳಗೆಂದಾ ॥
ಸೋದರರೊಳು ಭೇದ ಸೊಂಬರಿಗಹುದು ಪ್ರ । ಮೋದಿಗಹುದೆಯೆಂದರವರು ॥ ೧೧೮ ॥
ಸುವಿವೇಕಗಂಡೆನ್ನ ಚಿತ್ತ ತಂಪಾಯ್ತು ಪೆ । ತ್ತವರ ಹಿಂಗಿದ ನೋವು ಹೋಯ್ತು ॥
ಇವರ ಸಂತವಿಪೆನೆಂದಾನಾಡಲೆನ್ನ ಸಂ । ತವಿಸಿದರಚ್ಚರಿಯೆಂದಾ ॥ ೧೧೯ ॥
ಒಂದೊಂದು ದಿನದೊಳೊಬ್ಬೊಬ್ಬರ ಮನೆಯೊಳಾ । ತಂದೆಯಾರೋಗಣೆಗೈದು ॥
ಚಂದದಿ ಮೂರುದಿನಸವಿರ್ದ ಪ್ರಜೆ ಮಂತ್ರಿ । ಮಂದಿ ಸೇನಾಧ್ಯಕ್ಷರರ್ಚಿಸಲು ॥ ೧೨೦ ॥
ಸೊಸೆಯರ್ಗೆ ಮನ್ನಣೆಯಿತ್ತನು ಸುತರಿಗೆ । ಪೊಸರಾಜ್ಯ ಹಯಗಜವಿತ್ತು ॥
ಬಿಸಿಲುಗಾಳಿಗಳೊತ್ತೆ ಬಿಡಿಸುವೆನಣ್ಣ ಚಿಂ । ತಿಸದಿರಿಯೆಂದು ಬೀಳ್ಕೊಂಡಾ ॥ ೧೨೧ ॥
ಪ್ರಣಯಚಂದ್ರಮಗೆ ಸೇನಾಧ್ಯಕ್ಷಗೆ ಪಿರಿದು ಮ । ನ್ನಣೆಯಿತ್ತು ಮಗನ ಪಾಯ್ದಳವಾ ॥
ತಣಿಪಿ ತನ್ನೂರತ್ತ ಪಯಣವಾದನು ನೋಡಿ । ತಣಿದುದೆಲ್ಲರಿಗಾಗ ಮನಸು ॥ ೧೨೨ ॥
ಬಿಡಲಾರದೆಯ್ತಹ ಜನವ ನಿಲಿಸಿ ಪುತ್ರ । ರೊಡನೆಯ್ದೆ ಗಣಬದ್ಧರುಲಿಯೆ ॥
ಗುಡುಗುಡಿಸುವ ವಾದ್ಯವೆಸೆಯೆ ಪುಷ್ಪಕದಿ ಬಾಂ । ಗಡೆಗೆದ್ದನಾ ಸಾರ್ವಭೌಮಾ ॥ ೧೨೩ ॥
ಅನಿಲಮಾರ್ಗದಿ ಚಳಚಳನೆಯ್ದಿ ಪುರವ ಭೋಂ । ಕನೆ ಸಾರ್ದು ಗೃಹದೊಳಹೊಕ್ಕಾ ॥
ಜನನಾಥ ಲೀಲೆಯೊಳಿರುತಿರ್ದನಿಲ್ಲಿಗೆ । **ಜನನೀವಿಯೋಗದ ಸಂಧಿ** ॥ ೧೨೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೨೫ ॥

ಸಂತೋಷವಾಗಲಿ ಚಿಂತೆಯಾಗಲಿ ತೋರ । ಲಂತವು ನಿತ್ಯವಲ್ಲೆಂದು ॥
ಚಿಂತಿಸುತೆನ್ನೆದೆಯೊಳಗಿರು ಚಿಂತಾತಿ । ಕ್ರಾಂತಾ ಚಿದಂಬರಪುರುಷಾ ॥ ೧೨೬ ॥

ಜನನೀವಿಯೋಗಸಂಧಿ ಸಂಪೂರ್ಣಂ



## ಬ್ರಾಹ್ಮಣನಾಮಸಂಧಿ

ನಿತ್ಯ ನಿರ್ಸೊಳು ನಿಂದು ನಿನ್ನನೆ ಧ್ಯಾನಿಸಿ । ಸತ್ಯಾಸತ್ಯವ ಕಾಣ್ಬ ॥
ಅತ್ಯಂತಸುಖಿಯೆ ಸನ್ಮತಿದೋರು ಭವ್ಯಸಾಂ । ಗತ್ಯಾ ನಿರಂಜನಸಿದ್ಧಾ ॥ ೧ ॥

ಜನನಿಯರ್ತಪಸುದಾಳಿದ ಮೇಲೆ ಮತ್ತೊಂದು । ದಿನದೊಳಾ ಭರತರಾಜೇಂದ್ರಾ ॥
ಅನುಭವದಧ್ಯಾತ್ಮರಸವನೋಲಗದೊಳಿಂ । ಪೆನೆ ಪೇಳ್ದನೇನ ಬಣ್ಣಿಪೆನು ॥ ೨ ॥
ದ್ವಿಜರು ಕ್ಷತ್ರಿಯರು ವೈಶ್ಯರು ಶೂದ್ರರೊಂದು ವಾ । ರಿಜವ ಸುತ್ತಿದ ಮದಾಳಿಗಳ ॥
ವ್ರಜವೆನಲಿರೆ ಕಂಪುಗರೆವಬ್ಜದಂತೆ ಭೂ । ಭುಜನಾತ್ಮಹಿತವ ಸೂಸಿದನು ॥ ೩ ॥
ಅತ್ತಿತ್ತ ಕಿರಿದು ಪ್ರಸಂಗವ ನುಡಿವಾಗ । ಸುತ್ತಲಿರ್ದವರೊಂದು ಪುಣ್ಯಾ ॥
ಒತ್ತಿ ರಾಜೇಂದ್ರನ ನುಡಿಸಿತೊಯೆನಲಾಗ । ಲೆತ್ತಿದನಾತ್ಮತತ್ತ್ವವನು ॥ ೪ ॥
ಸೋಹೆ ಸೋಹೆಯೊಳಾಡಿ ಹೋಗುತಿರ್ದನು ಕೇಳು । ತಾ ಹದನನು ಮಂತ್ರಿ ತಿಳಿದು ॥
ಶ್ರೀಹಂಸಕಲೆಯನೆಲ್ಲರಿಗರಿವಂತುಟು । ದಾಹರಿಸೆಲೆ ಸ್ವಾಮಿಯೆಂದಾ ॥ ೫ ॥
ದಿವ್ಯವಾಕ್ಪತಿಯು ಕುಮಾರ ನೀನೆಮಗಾತ್ಮ । ದ್ರವ್ಯವ ವ್ಯಕ್ತಮಾಡೆಂದು ॥
ನವ್ಯಭಕ್ತಿಯೊಳವ ಬೆಸಗೊಳಲಾಸನ್ನ । ಭವ್ಯರ ದೇವನಿಂತೆಂದಾ ॥ ೬ ॥

ಬುದ್ಧಿಸಾಗರ ಕೇಳು ಸರ್ವಕಲೆಗಳಿಂದ । ಸಿದ್ಧಿಯೇನಮಲಾತ್ಮಕಲೆಯಾ ॥
ಶುದ್ಧಚಿತ್ತದೊಳಿಡೆವಿಡದೆ ಸಾಧಿಸೆ ಸರ್ವ । ಸಿದ್ಧಿಯ ಪಡೆವರ್ಭೈಯೆಂದಾ ॥ ೭ ॥
ಹಂಸನ ಧ್ಯಾನಿಸುವವರಿಲ್ಲಿ ಸ್ವರ್ಗದಿ । ಸಂಸಾರಸುಖದೊಳೋಲಾಡಿ ॥
ಧ್ವಂಸಕರ್ಮವ ಸುಟ್ಟು ಮುಕ್ತಿಯ ಪಡೆವರಾ । ಹಂಸನೆಲ್ಲಿಹನಿನ್ನು ಕೇಳು ॥ ೮ ॥
ದೂರವಲ್ಲಾ ಹಂಸನೆಲ್ಲರ ಮೈಯ ಬೀ । ಡಾರದೊಳಿರುತಿಹನವನಾ ॥
ಸಾರಿ ಮುಕ್ತಿಯನೆಯ್ದಲರಿಯದೆ ಜಗವೆಲ್ಲ । ಬಾರದ ಭವಬರುತಿಹುದು ॥ ೯ ॥
ಧರಿಸಿದ ದೇಹತುಂಬಿಹನು ಸುಜ್ಞಾನ ಸ । ದ್ದರುಶನ ಸುಖ ಶಕ್ತಿ ತನಗೆ ॥
ಎರವಿಲ್ಲದೊಡಲಾಗಿಯೆರವಿನ ಮೈಯ ಹೊ । ಕ್ಕಿರುತಿಹನೇನೆನ್ನಬಹುದು ॥ ೧೦ ॥
ವಿಪ್ರನಲ್ಲಾತ್ಮ ಕ್ಷತ್ರಿಯನಲ್ಲ ವೈಶ್ಯನ । ಲ್ಲಪ್ರಾಮುಖ್ಯದ ಶೂದ್ರನಲ್ಲ ॥
ವಿಪ್ರ ಮುಂತಾದ ಸಂಕಲ್ಪವಾ ತನುಕೂರ್ತು । ದೀ ಪ್ರಹಂಸಗೆ ಹೇಳುತಿಹರು ॥ ೧೧ ॥
ಯೋಗಿಯಲ್ಲಾತ್ಮ ಗೃಹಸ್ಥನಲ್ಲುರೆ ಯೋಗಿ । ಜೋಗಿಯಾ ಸವಣ ಸನ್ಯಾಸಿ ॥
ತೂಗೆ ಕಳಾಮುಖಿ ಪಾಶುಪತಿಗಳ ಸೊ । ವ್ಮಾಗಲಿಲ್ಲವು ಕರ್ಮಚರಿತಾ ॥ ೧೨ ॥
ಸ್ತ್ರೀಯಲ್ಲ ಸ್ತ್ರೀಯಾಸೆಮಾಳ್ಪ ಗಂಡಲ್ಲ ಷಂ । ಡಾಯತಸಾಂಖ್ಯ ಮೀಮಾಂಸಾ ॥
ನೈಯಾಯಿಕಾರ್ಹತ ಮುಂತಾದನಲ್ಲಿವು । ಮಾಯೆಯಿಂದಾದ ಮಾಟಗಳು ॥ ೧೩ ॥

ಶುದ್ಧನು ಬುದ್ಧನು ನಿತ್ಯನು ಸತ್ಯನು । ಶುದ್ಧಭಾವಕೆ ತೋರ್ಪ ಸುಲಭಾ ॥
ಸಿದ್ಧನು ಜಿನನು ಶಂಕರನು ನಿರಂಜನ । ಸಿದ್ಧನಲ್ಲದೆ ಪೆರನಲ್ಲಾ ॥ ೧೪ ॥

ಜ್ಯೋತಿಃಸ್ವರೂಪನು ಜ್ಞಾನಸ್ವರೂಪನು । ವೀತರಾಗನು ನಿರಾಮಯನು ॥
ಜಾತಿಜರಾಮೃತ್ಯುರಹಿತನು ಕರ್ಮಸಂ । ಘಾತದೊಳಿರ್ದು ನಿರ್ಮಲನು ॥ ೧೫ ॥

ಮಾತಿಗೆ ಮನಕೆ ಗೋಚರನಲ್ಲ ತನುಸೋಂಕ । ದೀ ತನುವಿನೊಳಿರುತಿಹನು ॥
ಘಾತಸ್ವಸಂವೇದನಾನುಭವಕೆ ಗಮ್ಯ । ನಾತನ ಮಹಿಮೆ ವಿಚಿತ್ರಾ ॥ ೧೬ ॥

ಚದುರರು ತಮ್ಮಿಂದ ತಮ್ಮನರಿವುದು ಕಾ । ಣ್ಬುದು ಸ್ವಸಂವೇದನ ಕೇಳು ॥
ಅದು ಮೋಕ್ಷ ಮುಟ್ಟಲಾಯ್ತೆಂಬಾಗ ತಾನೆ ತ । ನ್ನೆದೆಯೊಳು ಹೊಳೆವುದೈಯೆಂದಾ ॥ ೧೭ ॥

ತಾನನುಭವಿಸಬಹುದು ನುಡಿದನ್ಯರ್ಗೆ । ಮಾನಸದಟ್ಟಿಸಲರಿದು ॥
ಏನೆನ್ನಬಹುದದು ಕೇಳ್ವರ್ಗೆ ಸಟೆಯಾಗಿ । ಧ್ಯಾನಿಸುವಗೆ ದಿಟವಹುದು ॥ ೧೮ ॥

ಕಾಡುವಿಂದ್ರಿಯಗಳ ಕಟ್ಟಿ ತೆಳ್ಳುಸುರಲ್ಪ । ವಾಡೆ ಚಿತ್ತವನೊತ್ತಿ ತರುಬಿ ॥
ನೋಡುವ ಕಣ್ಗಳ ಮುಗಿದು ಸುಜ್ಞಾನದಿ । ನೋಡಲೊಳಗೆ ತೋರ್ಪನಾತ್ಮಾ ॥ ೧೯ ॥

ತನುವೆಂಬ ಕೊಡದಲ್ಲಿ ತೆಕ್ಕನೆ ತುಂಬಿದ । ತನಿವಾಲೊ ಅಲ್ಲ ಮೈಯೆಂಬ ॥
ಮನೆ ತುಂಬಿ ಥಳಿಪ ತಂಪಿನ ದೀಪವೊ । ಎನಲಾತ್ಮ ತೋರ್ಪನೈ ಮಂತ್ರಿ ॥ ೨೦ ॥

ಪಾಲುದೀಪಗಳು ಪಂಚೇಂದ್ರಿಯಗಮ್ಯ ನಿ । ರಾಲನಿಂದ್ರಿಯಗಮ್ಯನಲ್ಲ ॥
ಪೋಲುವೆಯಲ್ಲದು ಬಯಲ ರೂಪಿನ ದೀಪ । ಪಾಲಿನಂತಿಹನು ವಿಚಿತ್ರಾ ॥ ೨೧ ॥

ನುಡಿಗೊಳಗಾಗದ ವಸ್ತುವನಿಂತೆಂದು । ನುಡಿದು ತೋರುವೆನೆಂದರಹುದೆ ॥
ಪೊಡವಿಗಪ್ರತಿಯಾದ ಚಿದ್ರೂಪನೊಂದಕೆ । ಪಡಿಯಿಟ್ಟು ತೋರುವುದೆಂತು ॥ ೨೨ ॥

ಸ್ವಾನುಭವಕೆ ಗಮ್ಯವಸ್ತುವ ತನ್ನಿಂದ । ತಾನರಿವುದು ಕಾಣ್ಬುದೋಜೆ ॥
ಏನಿದಿರಿಟ್ಟೆಂತುಟೆಂತುಟೆಂದೆಂಬುಪ । ಮಾನಾರ್ಥವೆಲ್ಲುಪಚಾರಾ ॥ ೨೩ ॥

ಕ್ರಮದಿಂದ ತೋರ್ಪನೊಂದೆ ದಿನದೊಳು ತೋರ । ದ್ಯುಮಣಿಚಂದ್ರರ ಪ್ರಭೆಗಳಿಗೆ ॥
ಸಮಮಿಗಿಲೆನೆ ತೋರುತಿದ್ದಿದ್ದು ಪ್ರಭೆ ಮಾಸಿ । ತಮವಹುದೊಡನೆ ಹೊಳೆವುದು ॥ ೨೪ ॥

ಎಲ್ಲಾ ಮೈತುಂಬಿ ತೋರುವನೊಮ್ಮೆಯೊದೆಮೊಗ । ದಲ್ಲಿ ಗರ್ಭದೊಳೊಮ್ಮೆ ಬೆಳಗು ॥
ಝುಲ್ಲಿರುವುದು ಕೂಡೆ ಮಸುಳ್ವುದು ಹೊಳೆವುದು । ಮೆಲ್ಲಮೆಲ್ಲನೆ ಸಾಧ್ಯವಹುದು ॥ ೨೫ ॥

ಈ ಕಾಯದೊಳಗೊಮ್ಮೆ ಪರಮಾತ್ಮಕಳೆ ಪೂರು । ಷಾಕಾರವಾಗಿ ತೋರುವುದು ॥
ಆಕಾರವಳಿದೊಮ್ಮೆ ಪ್ರಭೆಯೆ ಮೈತುಂಬಿ ನಿ । ರಾಕುಲದೋರ್ಪುದೈ ಮಂತ್ರಿ ॥ ೨೬ ॥

ತೋರುವ ಪ್ರಭೆ ತಾನೆ ಸುಜ್ಞಾನದರ್ಶನ । ಮೂರುರತ್ನದ ಮಾತು ತಾನೆ ॥
ಗಾರಾಗಿ ಕರ್ಮ ಜರಿವುದಾಗ ನಿಜಸುಖ । ವೇರುತಿಹುದು ಧ್ಯಾನರತಗೆ ॥ ೨೭ ॥

ಕಂಗಳ ಕಿರುಬೊಂಬೆಯೊಳು ಕಾಣ್ಬುದೇನು ಸ । ರ್ವಾಂಗದಲ್ಲಿಯು ಕಾಣ್ಬನಾಗ ॥
ಸಂಗವಾದೆದೆಯುಲ್ಪಮನದೊಳರಿವುದೇನು । ಹಿಂಗದೆಲ್ಲೆಡೆಯೊಳರಿವನು ॥ ೨೮ ॥

ನಾಸಿಕ ಜಿಹ್ವೆ ಮುಂತಾದ ಸ್ವಲ್ಪೇಂದ್ರಿಯ । ವಾಸನಾರ್ಥದ ಸುಖವೇನು ॥
ಸೂಸುವಾನಂದವು ತನುತುಂಬೆ ಸುಖಿಸುವ । ನಾ ಸಿರಿಯಾರ್ಗುಂಟು ಸಚಿವಾ ॥ ೨೯ ॥

ನುಡಿಯಿಲ್ಲ ನಡೆಯಿಲ್ಲ ಶ್ವಾಸನಿಶ್ವಾಸವಿ । ಲ್ಲೊಡಲಿಲ್ಲ ಕಲ್ಮಷವಿಲ್ಲ ॥
ಮಿಡುಕಾಟವಿಲ್ಲದೆ ತೋರ್ಪನಾತ್ಮನು ಕಾಂತಿ । ಮಡುಗಟ್ಟೆ ಪುರುಷರೂಪಾಗಿ ॥ ೩೦ ॥

ಒಡಲಿಷ್ಟು ಶ್ವಾಸದಿ ಮಿಸುಕಿದರಾತ್ಮ ಸಂ । ಗಡದೊಳಿಷ್ಟಲುಗುವನಹುದು ॥
ಹಡಗು ನೀರಿಂದಲುಗಿದರೊಳಗಿದ್ದವ । ರೊಡನೊಡನಲುಗುವಂದದೊಳು ॥ ೩೧ ॥

ಅಭ್ಯಾಸಕಾಲದಿ ಮಿಸುಕುವನಹುದುಚಿ । ತಾಭ್ಯಾಸವಾದಾಗ ವಾಯು ॥
ಸಭ್ಯರಂದದಿ ನಿಲ್ವುದಾತ್ಮ ತಾನೊಂದು ಸಾ । ರಭ್ಯದಟ್ಟದೆ ತೆಪ್ಪಗಿಹನು ॥ ೩೨ ॥

ಬೆಳಗಿನ ಪುತ್ತಳಿ ಪ್ರಭೆಯ ದೇಹಾರ ಚಿ । ತ್ಕಳೆಯ ಪ್ರತಿಮೆ ಕಾಂತಿಪುರುಷಾ ॥
ಹೊಳಹಿನ ಬೊಂಬೆ ಪ್ರಕಾಶದ ಚಿತ್ರದಂ । ತೊಳಗಾತ್ಮ ತೋರ್ಪನೇನೆಂಬೆ ॥ ೩೩ ॥

ಜೊನ್ನವೆ ಪುರುಷನಾದುದೊ ಕೈಗೆ ಸಿಕ್ಕದ । ಕನ್ನಡಿ ಪುರುಷನಾಗಿದೆ ಕೊ ॥
ಮುನ್ನೆಲ್ಲಿ ಕಂಡಂದವಲ್ಲ ಸೋಜಿಗವೆನೆ । ತನ್ನಾತ್ಮ ತೋರ್ಪನೈ ತನಗೆ ॥ ೩೪ ॥

ಮಿಳಿಯ ಮಿಂಚಿನ ಬೊಂಬೆಯೆಲ್ಲಿಯದಿದು ಹಸ್ತ । ಕಳವಡದೊಂದು ನಿರ್ಮಲದ ॥
ಪಳುಕಿನ ಬೊಂಬೆಯೆಲ್ಲಿಯದೆನೆ ಧ್ಯಾನಿಗೆ । ತಳತಳಿಸುತ ತೋರ್ಪನಾತ್ಮಾ ॥ ೩೫ ॥

ತಿಳಿದಿದ್ದ ಮಡುವಿನೊಳ್ಬೆಳಗಿದ ಮುಕುರದೊ । ಳ್ಪೊಳೆವಂತೆ ಬಾಹ್ಯವಸ್ತುಗಳು ॥
ಹಲವ ಹಂಬಲಿಸದಾತ್ಮನೊಳು ನಿಂದಾಗ ತ । ನ್ನೊಳು ತೋರ್ಪುದಖಿಳಪ್ರಪಂಚಾ ॥ ೩೬ ॥

ಜಗವ ತುಂಬುವ ಪ್ರಭೆಯಿದೆ ಇದ ವೈಯೆಂಬ । ಹಗವಿನೊಳ್ತುಂಬಿದರಾರು ॥
ಗಗನವನೊಳಕೊಂಬ ತಿಳಿವಿದೆ ಇದಕಿಲ್ಲಿ । ತಗಹೇತಕಾಯ್ತೆಂಬನಾಗ ॥ ೩೭ ॥

ದಿಗಿದಿಗಿನಿಳಿವೊತಿಹುದು ಕರ್ಮ ಚಿತ್ಕಳೆ । ಧಗಧಗನೊಳಗೇಳುತಿಹುದು ॥
ಅಗಣಿತಸುಖ ಜುಮ್ಮಜುಮ್ಮನೇರುವುದು ಧ್ಯಾ । ನಿಗೆ ಗಮ್ಯ ಪರರ್ಗೆ ಕಾಣಿಸದು ॥ ೩೮ ॥

ಘರ್ಮದ ಬಿಸಿಲೆತ್ತಿದಷ್ಟಕೆ ಕವಿದಿದ್ದ । ಪೆರ್ಮಂಜು ಕರಗಿ ಹೋಹಂತೆ ॥
ಕಾರ್ಮಣತೈಜಸತನು ಸೋರುತಿಪ್ಪವಾ । ನಿರ್ಮಲಾತ್ಮನ ಪ್ರಕಾಶದೊಳು ॥ ೩೯ ॥

ನೋಡಿಸಿಕೊಂಬನು ತಾನೆ ನೋಳ್ಪನು ತಾನೆ । ನೋಡುವ ದೃಷ್ಟಿಯು ತಾನೆ ॥
ಆಡಲಚ್ಚರಿ ಮುಂದೆ ಧ್ಯಾನದ ಫಲದಿಂದ । ಕೂಡುವ ಮುಕ್ತಿಯು ತಾನೆ ॥ ೪೦ ॥

ತನುಮೂರರೊಳಗಿದ್ದರಾತ್ಮ ಸಂಸಾರಿಯಾ । ತನುಮೂರು ಧ್ಯಾನದಿ ಕೆಡಲು ॥
ತನಗೆ ತಾನೆ ಲೋಕದಗ್ರಕೆ ನೆಗೆದು ನಿ । ಲ್ವನು ಮುಕ್ತಿಯೆಂಬರಂತದನು ॥ ೪೧ ॥

ತನ್ನ ತಾನೀಕ್ಷಿಸೆ ತನು ಸೋರ್ವುವಲ್ಲದೆ । ಅನ್ನಿಗರ್ಕೆಡಿಸಲಶಕ್ಯಾ ॥
ಭಿನ್ನಕರ್ಮವ ಸುಟ್ಟು ತಾನೆ ಮುಕ್ತಿಗೆ ಪೋಪ । ರಿನ್ನಾರು ತಡೆವರೆತ್ತವರು ॥ ೪೨ ॥

ಗುರುದೇವರವ್ಮುತಮುಕ್ತಿಯ ತೋರಬಹುದೈಸೆ । ದುರಿತವ ತಾನೊತ್ತಬೇಕು ॥
ಗರುಡಿಯು ಗುರು ರಣರಂಗಕೆ ಬಪ್ಪನೆ । ಅರಿಯು ತಾನೆ ಗೆಲ್ವನರಿಯಾ ॥ ೪೩ ॥

ನನ್ನ ಹಾರದೆ ಯುದ್ಧಗೈದನೆಂದಳಲ್ವನೆ । ಮುನ್ನ ಸಾಧನೆಗೈಸಿದಾರ್ಯ ॥
ತನ್ನ ತಾ ನೋಡಿ ಮುಕ್ತಿಗೆ ಸಂದರದು ತಾನೆ । ಉನ್ನತೋನ್ನತಜಿನಭಕ್ತಿ ॥ ೪೪ ॥

ಬೇರಿದ್ದನೆಂದು ದೇವನ ನೋಡಲದು ಚಿತ್ತ । ಬೇರಾದ ಭಕ್ತಿ ಸ್ವರ್ಗೋಕ್ತಿ ॥
ಮೂರುದೇಹದೊಳಿಪ್ಪನೆಂದು ನಿಟ್ಟಿಸೆ ಮುಕ್ತಿ । ಗೇರುವ ಭಕ್ತಿ ಸುಯುಕ್ತಿ ॥ ೪೫ ॥

ಚೇತನವಲ್ಲದ ಶಿಲೆ ಕಂಚು ಜಿನನೆಂದು । ಪ್ರೀತಿಮಾಡಲು ಪುಣ್ಯಭಕ್ತಿ ॥
ಚೈತನ್ಯರೂಪಾತ್ಮ ದೇವನೆಂದೀಕ್ಷಿಸೆ । ನೂತನಭಕ್ತಿ ಸುಮುಕ್ತಿ ॥ ೪೬ ॥

ಅರಿಯದಂದರುಹಂತ ಹೊರಗಿರುತಿಹನು ಮ । ತ್ತರಿದ ಮೇಲೊಳಗಿರುತಿಹನು ॥
ಕರೆಮರೆಯೇಕೆ ತನ್ನಾತ್ಮನೆ ದೇವನೆಂ । ದೆರಗಿ ನೋಳ್ಪವನೆ ಸುದೃಷ್ಟಿ ॥ ೪೭ ॥

ಜಿನಸಿದ್ಧರೆಲ್ಲರು ಮುನ್ನ ತಮ್ಮಾತ್ಮಭಾ । ವನೆಯಿಂದ ಕರ್ಮವ ಕೆಡಿಸಿ ॥
ಮನುಜರೆಲ್ಲಂತುಟಿ ಬಹುದೆಂದು ನವಗೆ ಶಾ । ಸನದೋರಿ ಹೋದರೈ ಮಂತ್ರಿ ॥ ೪೮ ॥

ಭವ್ಯರೊಪ್ಪುವರಿದನಲ್ಲಸಲ್ಲೆಂದು ನಿ । ರ್ಭವ್ಯರು ಹೊಕ್ಕು ಹೋರುವರು ॥
ಸುವ್ಯಕ್ತಮತಿಗಲ್ಲದಾತ್ಮಾನುಭವವೆಂಬು । ದವ್ಯಕ್ತಮತಿಗಳಿಗಹುದೆ ॥ ೪೯ ॥

ಸಾನಾರ್ಥ ಬೇಕೆಂಬರಾತ್ಮನೊಂದೇಕೆಂಬ । ರಾನೊಪ್ಪೆ ತಾನೊಪ್ಪೆನೆಂದು ॥
ಜೇನೊಣ ಕಡಿದಂತೆ ಮಂಡೆಯ ಕೊಡಹುವ । ರೇನೆನ್ನಬಹುದಭವ್ಯರನು ॥ ೫೦ ॥

ಧ್ಯಾನಕೊಡಂಬಡರೊಡಬಟ್ಟರದ ಪರಾ । ಧೀನವ ಮಾಡಿ ತೋರುವರು ॥
ಶ್ರೀನಿರಂಜನಸಿದ್ಧನೊಳೆ ನಿಲಬೇಕೆಂದ । ರೇನಾದರೊಂದನೊಡ್ಡುವರು ॥ ೫೧ ॥

ತಪಬೇಕು ಬಹುಶಾಸ್ತ್ರ ಬೇಕಾತ್ಮಯೋಗಕೆಂ । ದಪಲಾಪಿಸುವರು ಧ್ಯಾನಿಗಳು ॥
ತಪಸುಮಾಡುತ ಸರ್ವಶಾಸ್ತ್ರವನೋದಿ ತಾ । ವಪಗತಧ್ಯಾನರಾಗಿಹರು ॥ ೫೨ ॥

ನೋಡಲರಿಯರು ತಾವಾತ್ಮನ ನೋಳ್ಪರ । ನೋಡಿ ಸಂತಸಮಾಳ್ಪರಲ್ಲ ॥
ಪೀಡಿಸುವುದನೊಂದ ಬಲ್ಲರವರ ಪಾಟಿ । ಮಾಡಲಾಗದು ಧ್ಯಾನರತರು ॥ ೫೩ ॥

ಗೃಹಿಗುಂಟು ತಾಪಸಗುಂಟು ಹಂಸಧ್ಯಾನ । ಬಹುಶಾಸ್ತ್ರಿ ಬಡಶಾಸ್ತ್ರಿಗುಂಟು ॥
ಗೃಹಿಣಿಗುಂಟಾಸನ್ನಭವ್ಯರಾದರೆ ಸಾಕು । ಬಹುವಾಕ್ಯವೇನು ನಂಬೆಂದಾ ॥ ೫೪ ॥

ಪರಮಶುಕ್ಲಧ್ಯಾನ ಯೋಗಿಗಲ್ಲದೆ ಗೃಹ । ಸ್ಥರಿಗಿಲ್ಲವೆನಲೊಪ್ಪಬಹುದು ॥
ನಿರುತಧರ್ಮಧ್ಯಾನ ಸರ್ವರಿಗುಂಟದು । ವಿರಹಿತವೆನಲೊಪ್ಪಬಹುದೆ ॥ ೫೫ ॥

ಆಕ್ಷೆ ವಿಪಾಕ ಮುಂತಾಗಿ ನಾಲ್ಪೆರನೆಂಬ । ವಿಜ್ಞಾನ ವ್ಯವಹಾರಧರ್ಮಾ ॥
ಸುಜ್ಞಾನಿ ತಾನೆಂದು ತನ್ನ ನೋಡುವುದು ಸ । ರ್ವಜ್ಞೋಕ್ತಿ ನಿಶ್ಚಯಧರ್ಮಾ ॥ ೫೬ ॥

ಒಳವರಿದಾತ್ಮನ ನೋಳ್ಪುದು ಕರ್ಮವ । ತುಳಿವುದು ಬಲ್ಲವರೆಲ್ಲ ॥
ತೊಳಲದೆ ಭವಮಾಲೆಯೊಳು ಮುಕ್ತಿಗೇರಿ ನಿ । ರ್ಮಲದಲ್ಲಿ ಬಾಳ್ವುದೈಯೆಂದಾ ॥ ೫೭ ॥

ಭೋಗದೊಳಿರುತಿರ್ದು ಧರ್ಮಯೋಗವ ಮಾಡಿ । ಭೋಗಾಂತದೊಳು ಯೋಗಿಯಾಗಿ ॥
ಬೇಗ ಶುಕ್ಲಧ್ಯಾನದಿಂದಷ್ಟಕರ್ಮವ । ನೀಗಿ ಮುಕ್ತಿಗೆ ಸಲ್ವುದೆಂದಾ ॥ ೫೮ ॥

ಶ್ರೇಣಿಗೇರುವುದತಿಕಾಲವಿಲ್ಲದು ಕಿರಿ । ದೂಣೆಯುವೆನಲೆರಳ್ಸಳಿಗೆ ॥
ಜಾಣರಂದಿಗೆ ದೀಕ್ಷೆವಡೆವರು ಕೆಲರು ನಿ । ರ್ವಾಣವಾಂತಿಹರಂದುತೊಡಗಿ ॥ ೫೯ ॥

ಕಡಲಲ್ಲಿ ಮೀಜುಬೇಕೆಂದೊಬ್ಬನಿಲ್ಲಿ ಪ । ಚ್ಚಡ ಪಾಗ ಬಿಸುಟೆಯ್ದಲೊಬ್ಬಾ ॥
ತಡಿಗೆಯ್ದಿ ವಸ್ತ್ರವ ಬಿಸುಟು ಮುಳುಗಲಿಬ್ಬ । ರೊಡಲೊಂದೆ ಪರಿ ನನೆದಿರವೆ ॥ ೬೦ ॥

ಆದರಂತೆ ಕೆಲಬರಿಂದೆ ದೀಕ್ಷೆವಡೆವರು । ಸದನದೊಳಿದ್ದೆ ಧ್ಯಾನವನು ॥
ಹದಗೈದು ಕೆಲರು ಮೆಲ್ಲನೆ ದೀಕ್ಷೆವಡೆವರು । ತುದಿಗೊಂದೆ ಪಾಟಿ ಶ್ರೇಣಿಯೊಳು ॥ ೬೧ ॥

ಅತಿಕಠಿಣದ ಕರ್ಮಿಗಳು ಬಾಹ್ಯಸಂಗವ । ಚ್ಯುತಿಗೈದು ನೋಳ್ಪರಾತ್ಮನನು ॥
ಹಿತಮೃದುಕರ್ಮರು ಬಾಹ್ಯವಿದ್ದರು ಭೇದ । ಮತಿಯಿಂದ ನೋಳ್ಪರಾತ್ಮನನು ॥ ೬೨ ॥

ಪ್ರಾಯಾಸಬಟ್ಟೊಬ್ಬ ನಿಧಿಗಾಣ್ಬನೊಬ್ಬ ನಿ । ರಾಯಾಸದೊಳು ನಿಧಿಗಾಣ್ಬಾ ॥
ನೋಯದೆ ಕೆಲರು ನೊಂದುರೆ ಕೆಲರಾತ್ಮ ಯೋ । ಗಾಯಾತರಹರಿಂತು ದ್ವಿವಿಧಾ ॥ ೬೩ ॥

ಪರಬೊಮ್ಮವಿದು ಪರಮಾಗಮಸಾರದ । ತಿರುಳಿದು ದಿವ್ಯತೀರ್ಥವಿದು ॥
ತಿರುಗಾಡದತ್ತಿತ್ತ ಚಿದ್ರೂಪನೊಳು ನಿಂದು । ಪರಿಣಾಮವೆಯ್ದಿರೈಯೆಂದಾ ॥ ೬೪ ॥

ಮೆಯ್ಯೊಳಗಿದ್ದ ಶುದ್ಧಾತ್ಮನ ನೋಳ್ಪಂಗೆ । ಕೆಯ್ಯೊಳಗಿಹುದು ಕೈವಲ್ಯಾ ॥
ಸಯ್ಯಮಿ ತಾನೆ ಸಾಹಸಿ ತಾನೆ ಧ್ಯಾನದಿ । ಕೊಯ್ಯನೆ ಕರ್ಮದ ಬೇರಾ ॥ ೬೫ ॥

ನೋಡಿರೈ ಹಂಸನ ಕಾಲಕರ್ಮವ ಭಸ್ಮ । ಮಾಡಿರೈ ಧ್ಯಾನಾಗ್ನಿಯಿಂದ ॥
ಈಡಾಡಿರೈ ಮೂರುದೇಹದ ಭಾರವ । ಕೂಡಿರೈ ಮುಕ್ತಿಯನೆಂದಾ ॥ ॥ ೬೬ ॥

ಇದ ನಂಬುವುದೆ ಶುದ್ಧಸಮ್ಯಕ್ತ್ವ ತಿಳಿವುದೆ । ಸದಮಲಜ್ಞಾನ ಮತ್ತಲ್ಲಿ ॥
ಕದಲದೆ ಮನ ನಿಲೆ ಚಾರಿತ್ರ ತಾನೆ ಮೋ । ಕ್ಷದ ಬಟ್ಟೆ ನೆರೆ ನಂಬಿರೆಂದಾ ॥ ೬೭ ॥

ಸಂತುಷ್ಟರಾದರೆಲ್ಲರು ಮಂತ್ರಿಮಿತ್ರರೋ । ರಂತೆ ಹೋಪುರೆ ಸ್ವಾಮಿಯೆಂದು ॥
ಮುಂತೆ ನಿವಾಳಿಯಿಟ್ಟಡಿಗೆರಗಿದರು ಸಿ । ದ್ಧಾಂತಕೇಳ್ದಾದರ್ಶಿವಡರು ॥ ೬೮ ॥

ಶೂದ್ರಕ್ಷತ್ರಿಯವೈಶ್ಯರುರೆ ನಿವಾಳಿಯನಿಟ್ಟು । ಚಿದ್ರೂಪರಸಿಕಗೆರಗಲು ॥
ಉದ್ರೇಕವೆತ್ತು ಸಂತಸಗೂಡಿ ವಿಪ್ರಸ । ಮುದ್ರವೆದ್ದುದು ಸೇಸೆವಿಡಿದು ॥ ೬೯ ॥

ಆನಂದಬಾಷ್ಪ ಕಂಗಳೊಳು ರೋಮಾಂಚದ । ಸೇನೆ ಮೈಯೊಳು ನಸುನಡುಕಾ ॥
ಆನನಹೊಸಕಾಂತಿ ತುಳುಕೆ ನಗುತ ಬಂದ । ರಾ ನೃಪನೊತ್ತಿಗುಬ್ಬಿನೊಳು ॥ ೨೦ ॥
ಹರಿದುದು ಮನದಂಧಕಾರ ಸುಜ್ಞಾನಾಂಶು । ನೆರೆದುದು ವಿಭುವೆ ನಿನ್ನಿಂದ ॥
ಸ್ಥಿರಬಾಳು ಸುಖಬಾಳು ಜಯ ಜಯಯೆಂದು ವಿ । ಪ್ರರು ನೃಪಗಿಟ್ಟರಕ್ಷತೆಯಾ ॥ ೨೧ ॥
ಎಲ್ಲರ ಹರ್ಷವ ನೋಳ್ಪಾಗ ಭೂಸುರ । ರಲ್ಲಿದ್ದ ಹರುಷ ಹೆಚ್ಚಾಗೆ ॥
ಅಲ್ಲಾಡಿ ಮಕುಟವನಧಿಕಜಾತಿಯುಲಾಯೆಂ । ದುಲ್ಲಾಸವೆತ್ತನಾ ರಾಯಾ ॥ ೨೨ ॥
ಜಾತಿವಿಶಿಷ್ಟರಲ್ಲದೆ ಹಂಸನಾಥನ । ಖ್ಯಾತಿಗರ್ತಿಸರದೆಂತೆನಲು ॥
ಶೀತಾಂಶುಕಳೆಗೆ ಚಕೋರಗಳರ್ತಿಪಂ । ತಾತುರಿಸುವುವೆ ಕಾಗೆಗಳು ॥ ೨೩ ॥
ಅಂದಾದಿಬ್ರಹ್ಮನು ನಾಲ್ಕುವರ್ಣಕೆ ಗುರು । ವೆಂದು ಸೃಷ್ಟಿಸಿದ ಜಾತಿಯುಲಾ ॥
ಇಂದು ಪ್ರತ್ಯಕ್ಷವಾಯಿತುಯಿವರಂಗ ಲೇ । ಸೆಂದರ್ತಿವಟ್ಟ ತನ್ನೊಳಗೆ ॥ ೨೪ ॥
ಜಿನದಕಷ್ಟರ ಮೇಲೆ ದ್ವಿಜರಿರ ಚಿದ್ರೂಪ । ನನುಭವವೆಂತಿಹುದೆಂದಾ ॥
ಜಿನನಗ್ರಪುತ್ರನ ನಡೆಯಂತೆ ನುಡಿಯಂತೆ । ನೆನಹಿನಂತಿಹುದೆಂದರವರು ॥ ೨೫ ॥
ಆದಿಚಕ್ರೇಶ್ವರನೊಬ್ಬನಾ ಹಂಸಲೀ । ಲೋದಯಾರ್ಥವ ಬಲ್ಲ ನಾವು ॥
ಓದೊಂದ ಬಲ್ಲೆವಾ ಧ್ಯಾನವೆಂತಿಹುದೊ ಇ । ನ್ನಾದರಾಗಲಿಯೆಂದರೊಡನೆ ॥ ೨೬ ॥
ಪರಮಾತ್ಮಯೋಗಾನುಭವ ತವಗುಂಟದ । ವಿರಚಿಸರಂತಿಂತುಟೆಂದು ॥
ಅರೆಗೊಡ ತುಳುಕುವುದಲ್ಲದೆ ತುಂಬಿದ । ಸಿರಿಗೊಡ ಬಿದಿರ್ವುದೆಯೆಂದಾ ॥ ೨೭ ॥
ಆಸನ್ನಭವ್ಯರೆ ನೀವು ನಿಮ್ಮಾತ್ಮವಿ । ಲಾಸಕಾನಂದವಾಯ್ತೆನಗೆ ॥
ಭೂಸುರರಿರ ಕೇಳಿ ನಿಮಗೆ ನಾನಿನ್ನೊಂದು । ಲೇಸಿನ ಪೆಸರೀವೆನೆಂದಾ ॥ ೨೮ ॥
ಬ್ರಹ್ಮವೆಂದರೆ ಹಂಸ ಹಂಸಾನುಭವಿ ತಾನೆ । ಬ್ರಾಹ್ಮಣನಿದು ಶಬ್ದಸಿದ್ಧಾ ॥
ಬ್ರಹ್ಮ ವೇತ್ತ್ಯನುಭವತೀತಿ ಬ್ರಾಹ್ಮಣಯೆಂದು । ಬ್ರಾಹ್ಮಣವೆಸರಿತ್ತನವರ್ಗೆ ॥ ೨೯ ॥
ನಾಮವೆಲ್ಲವ ಧರಿಸಲು ಬಹುದಾತ್ಮಾಭಿ । ರಾಮವೆಸರ ತಾಳಲರಿದು ॥
ಸಾಮರ್ಥ್ಯರೈ ನೀವು ಬ್ರಾಹ್ಮಣರೆಂದವ । ರ್ಗಾ ಮಹೀಪತಿ ಪೆಸರಿತ್ತಾ ॥ ೩೦ ॥
ಪೂಜಿತನಾಮವಿನ್ನೊಂದಿರಲುಳಿದ ನಾ । ನಾಜನಗಳು ಜನವಲ್ತೆ ॥
ಆ ಜನಗಳೊಳು ಮಹಾಜನ ನೀವೆನು । ತಾ ಜನಪತಿ ನಾಮವಿತ್ತಾ ॥ ೩೧ ॥
ದ್ವಿಜರು ಭೂಸುರರು ವಿಪ್ರರು ಬುಧರೆಂದಂದು । ಸೃಜಿಸಿ ನಾಮವನಿತ್ತನಯ್ಯಾ ॥
ಭಜಿಸಿ ಬ್ರಾಹ್ಮಣಮಹಾಜನಗಳೆಂದಾನಿಂದು । ನಿಜಗೊಳಿಸಿದೆನಿರಲೆಂದಾ ॥ ೩೨ ॥
ದಾನಕೆ ಪಾತ್ರ ದೀಕ್ಷೆಗೆ ಯೋಗ್ಯರೆಂದು ವಿ । ಧಾನದೋರಿದನಯ್ಯನಂದು ॥
ಜ್ಞಾನಕೆ ಧ್ಯಾನಕೆ ದಕ್ಷರೆಂದಾನಭಿ । ಧಾನದೋರಿದೆನೊಪ್ಪಿರೆಂದಾ ॥ ೩೩ ॥

ಉತ್ತಮರಿವರರಿದುತ್ತಮಪೆಸರಿತ್ತು । ದುತ್ತಮೋತ್ತಮವಾದುದೆಂದು ॥
ಒತ್ತಿನ ಸಖ ಮಂತ್ರಿ ಮೊದಲಾದರೆಲ್ಲ ಕೈ । ಯೆತ್ತಿ ಕೀರ್ತಿಸಿದರಾ ನೃಪನಾ ॥ ೮೪ ॥
ನಾಮಮಾತ್ರವನಿತ್ತು ಬರಿದೆ ಬೀಳ್ಕೊಡುವಾಗ । ಗ್ರಾಮೀಣನೃಪನೆ ಚಕ್ರೇಶಾ ॥
ಹೇಮ ವಸ್ತ್ರಾಭರಣವ ಗ್ರಾಮ ಗಜ ಧೇನು । ಸ್ತೋಮದಾನವನಿತ್ತ ತಣಿಯೆ ॥ ೮೫ ॥
ಅನ್ನ ಮುಂತೆನೆ ನಾಲ್ಕುದಾನ ತಾಪಸಗೆ ದಿ । ವ್ಯಾನ್ನ ಮುಂತೆನೆ ನಾಲ್ಕುಗೂಡಿ ॥
ಹೊನ್ನು ಮುಂತೆನೆ ಪತ್ತು ಪದಿನಾಲ್ಕುದಾನ ವ್ಯ । ತ್ಪನ್ನವಿಪ್ರಗೆ ಸಲ್ವುದೆಂದಾ ॥ ೮೬ ॥
ಸತ್ಕಾರಗೈದ ಮೇಲಾತ್ಮಾನುಭವಿಗಳೆಂ । ಬುತ್ಕಂಠೆಯಿಂದ ರಾಜೇಂದ್ರಾ ॥
ಸತ್ಕುಲಾಢ್ಯರನಪ್ಪಿ ಮನ್ನಿಸಿದನು ತನ್ನ । ಚಿತ್ಕಳಾರ್ಥವ ಪತ್ತಿಸುವೊಲು ॥ ೮೭ ॥
ಹಮ್ಮಿನ ವ್ಯಂತರರ್ಕಳು ನಮಿಸುವ ಪರ । ಬೊಮ್ಮರಸಿಕನಪ್ಪುಲವರು ॥
ನಮ್ಮ ಜನ್ಮವೆ ಜನ್ಮವೆಂದು ಬೆರಳ ದರ್ಭೆ । ಭಿಮ್ಮನೆ ಬಿಗಿಯಲುಬ್ಬಿದರು ॥ ೮೮ ॥
ತುಷ್ಟಿಬಟ್ಟೊಡನೆಲೆ ದೇವ ನೀನಿಂದೆಮ್ಮ । ಸೃಷ್ಟಿಸಿದೈ ಜಿನನಂದು ॥
ಸೃಷ್ಟಿಸಿದುದು ಮೂರುವರ್ಣಕಿರಲಿ ನಿನ್ನ । ಸೃಷ್ಟಿ ನಾವೆಂದರಾ ದ್ವಿಜರು ॥ ೮೯ ॥
ಆ ಮಾತು ಬೇಡ ಸ್ವಾಮಿಯೆ ಸೃಷ್ಟಿಕರ್ತಾರ । ನಾಮಮಾತ್ರವೆ ನನ್ನದೆಂದಾ ॥
ಸ್ವಾಮಿಯ ಮುಂದಿದ ಸಲಿಪೆವು ನಾವೆಂದ । ರಾಮೋದಬಟ್ಟ ಬ್ರಾಹ್ಮಣರು ॥ ೯೦ ॥
ಪ್ರೇಮವಾಕ್ಯದೊಳಿರ್ದರೆಲ್ಲರ ಬೀಳ್ಕೊಟ್ಟು । ಭೂಮೀಶನರಮನೆಗೆಯ್ದೆ ॥
ಕ್ಷೇಮದೊಳಿರ್ದನೆಂಬಲ್ಲಿಗೆ ಬ್ರಾಹ್ಮಣ । **ನಾಮದ ಸಂಧಿ** ಸುಗಂಧಿ ॥ ೯೧ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೨ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೩ ॥
ಇದಿರ ಗುಣವ ನಿನ್ನ ಗುಣವ ಪರೀಕ್ಷಿಸು । ತಿದಿರ ಗುಣನ ಕೂಡೆ ಮರೆದು ॥
ಅದಿದೆಂಬ ಸಂಕಲ್ಪವಳಿದು ನನ್ನೊಳಗಿರು । ಚದುರಾ ಚಿದಂಬರಪುರುಷಾ ॥ ೯೪ ॥

ಬ್ರಾಹ್ಮಣನಾಮಸಂಧಿ ಸಂಪೂರ್ಣಂ

## ಷೋಡಶಸ್ವಪ್ನಸಂಧಿ.

ಶ್ರೀಚ್ಚ ಬೆಳ್ದಿಂಗಳ ಬೊಂಬೆಯೊಯೆನೆ ಮನ । ಕಚ್ಚರಿದಾವಾಗ ತೋರ್ಪ ॥
ಸಚ್ಚಿದಾನಂದ ಸನ್ಮತಿದೋರು ಭವ್ಯರ । ಮೆಚ್ಚ ನಿರಂಜನಸಿದ್ಧಾ ॥ ೧ ॥

ದ್ವಿಜರಿಗೆ ಬ್ರಾಹ್ಮಣವೆಸರಿತ್ತ ದಿವಸದ । ರಜನಿಯ ಕಡೆಯೊಳಾ ಚಕ್ರಿ ॥
ನಿಜಗೆಟ್ಟ ಷೋಡಶಸ್ವಪ್ನವ ಕಂಡನಂ । ಬುಜಸಖ ಮೂಡ ಮೂಡಿದನು ॥ ೨ ॥

ವಿನಯದಿಂದಾ ವಿಪ್ರಜನವ ಬರಿಸಿ ಕಂಡ । ಕನಸ ಪೇಳ್ದವರ ಫಲವನು ॥
ಜಿನನಲ್ಲಿ ಕೇಳ್ವೆನೆಂದಾ ರಾಯ ಪಯಣವಾ । ದನು ಕೂಡೆ ಕೈಲಾಸಗಿರಿಗೆ ॥ ೩ ॥

ಅರುಹನ ಕಂಡೆಮಗತಿದಿನವಾಯ್ತು ದೇ । ವರ ಕೂಡೆ ಬಹೆವು ನಾವೆನಲು ॥
ಸುರರೊಡಗೂಡಿ ದೇವೇಂದ್ರ ಪೋಪಂತೆ ಭೂ । ಸುರರೊಡಗೂಡಿ ಸಾಗಿದನು ॥ ೪ ॥

ಅಂಬರಮಾರ್ಗದೊಳೆಯ್ತಂದು ಜಿನಸಭೆ । ಯೆಂಬೊಂದು ತಾವರೆಗೊಳನಾ ॥
ತುಂಬಿಗಳೊಗುವಂತೆ ಪೊಕ್ಕು ಭೂಸುರನಿಕು । ರುಂಬವೆರಸಿ ಕಂಡ ಜಿನನಾ ॥ ೫ ॥

ಬಾಷ್ಪಧಾರೆಗಳೊಗೆ ನಸುಕಂಪವಾಗೆ ವ । ಪುಃ ಪುಳಕಿಸೆ ತಾನು ದ್ವಿಜರು ॥
ಪುಷ್ಪಮಾಲೆಯ ಜಿನಗರ್ಪಿಸುತಮಲವಾ । ಕ್ಪುಷ್ಪಮಾಲೆಯನರ್ಪಿಸಿದರು ॥ ೬ ॥

ಜಯಜಯ ಸರ್ವಜ್ಞ ಶಾಂತ ಸರ್ವೇಶ ಚಿ । ನ್ಮಯ ಚಿದಾನಂದ ತೀರ್ಥೇಶಾ ॥
ಭಯಹರ ಶರಣಾಗು ಸಲಹೆಂಬ ವಿಪ್ರಸಂ । ಚಯಗೂಡಿ ನ್ಯೈನೀಡಿ ಮಣಿದಾ ॥ ೭ ॥

ಕೊಸರುವ ಹೊತ್ತಿಲ್ಲ ವಿಪ್ರರುಗೂಡಿ ತಾ । ಮಸವಿಲ್ಲದರುಹಪೂಜೆಯನು ॥
ದೆಸೆಯೆಲ್ಲ ಪುರೆ ಜಯಜಯಯೆನೆ ಮಾಡಿ । ಸಂತಸವಾಂತನಾ ಸಾರ್ವಭೌಮಾ ॥ ೮ ॥

ಮುನಿಗಳಿಗೆರಗಿ ವಿಪ್ರರುಗೂಡಿ ಕುಳಿತೆಲೆ । ಜಿನ ನಿನ್ನ ಸೃಷ್ಟಿಯ ದ್ವಿಜರಾ ॥
ನೆನಹ ಕಂಡಾನು ಬ್ರಾಹ್ಮಣವೆಸರಿತ್ತೆನೊ । ಪ್ಪೆನುತ ಕೈಮುಗಿದನಾ ಚಕ್ರಿ ॥ ೯ ॥

ಇಂದು ನಾವೊಪ್ಪುವುದೇನವರ್ಗಾ ನಾಮ । ಮುಂದೆ ನಿನ್ನಿಂದಹುದೆಂದು ॥
ಅಂದೆ ಕಂಡಿರ್ದೆವಾ ನಾಮುವವರಿಗಿರ । ಲೆಂದನಾ ದಿವ್ಯವಾಣೀಶಾ ॥ ೧೦ ॥

ಆತ್ಮಾನುಭವಿಯಿಂದ ಬ್ರಾಹ್ಮಣನಾಮ ನಿ । ಜಾತ್ಮಾನುಚರಿತರಿಗಹುದು ॥
ಆತ್ಮನ ಶುಭನಾಮುದುದಯುವೆಂದಾ ಪರ । ಮಾತ್ಮ ನಿರೂಪದೋರಿದನು ॥ ೧೧ ॥

ಪರಮ ನೀನಂದು ಸೃಷ್ಟಿಸಿದೆ ನಿನ್ನಣುಗ ಭಾ । ಸುರನಾಮವಿತ್ತು ಮನ್ನಿಸಲು ॥
ಕರಸೋತುದೆದೆ ನಾವು ಚಕ್ರಿಯ ಸೃಷ್ಟಿಯೆಂ । ದರು ಚಕ್ರಿ ಹೋಹೋ ಬೇಡೆನಲು ॥ ೧೨ ॥

ಇಲ್ಲೆನಲೇಕೊಪ್ಪು ಭವ್ಯ ವಿಪ್ರರಿಗೆ ನಿ । ನ್ನಲ್ಲಿ ಮಹಾಪ್ರೀತಿಯಿವರ ॥
ಸೊಲ್ಲಿಂದು ಬಿನದವಾಗಿಹುದು ಕಾಲಾಂತರ । ದಲ್ಲಿ ಮೆರೆವುದೆಂದನರುಹಾ ॥ ೧೩ ॥

ಕಡೆಗಾಲದಲ್ಲಿಯು ಸರ್ವರೊಳ್ಕೆರೆಯುದು । ಬಡಕಾಗಿ ಜೈನಗೋಷ್ಠಿಯಲಿ ॥
ನಡೆವುದು ದ್ವಿಜರು ಚಕ್ರಿಯ ಸೃಷ್ಟಿಯೆಂದು ಸಂ । ಗಡಿಸುವುದದರಿಂದ ಕದನಾ ॥ ೧೪ ॥
ಇಂದಿನವರಿಗಿದು ಬಿನದವಾಗಿಯೆ ಹೋಹು । ದಂದಿನವರು ಸತ್ಯವೆನಲು ॥
ಮುಂದಾದ ವರ್ಣವ ಹಿಂದಾದುದೆಂಬಾಗ । ಕೊಂದಾಡದಿಹರೆ ಕರ್ಮಿಗಳು ॥ ೧೫ ॥
ಶೂದ್ರಕ್ಷತ್ರಿಯವೈಶ್ಯರಾದ ಬಳಿಕ ವಿಪ್ರ । ಮುದ್ರೆಯಾಯ್ತೆಂಬಾಗ ಕೇಳ್ದು ॥
ರೌದ್ರ ಹುಟ್ಟದೆ ಕೂಡೆ ವಿಪ್ರರು ಜಿನಧರ್ಮ । ಶೂದ್ರೀಯವೆಂಬರಂತಾಗ ॥ ೧೬ ॥
ಬಿಡುವರು ವಿಪ್ರರೀ ಧರ್ಮವ ಯಜ್ಞವ । ನಡೆಯಿಸುತಿಹರದರಲ್ಲಿ ॥
ನಡುವೊಂದು ಹಿಂಸೆ ಪುಟ್ಟುವುದದನವರು ಕೈ । ವಿಡಿಯೆ ಜೈನರು ದೂರುತಿಹರು ॥ ೧೭ ॥
ದಶದಾನ ಸಲ್ಲದೆಂಬರು ಜೈನರಾ ಚತು । ರ್ದಶದಾನಧರರದ ಕೇಳ್ದು ॥
ಕುಶಲಗೆಟ್ಟಾನೆಯುಟ್ಟಿದರೂ ಜೈನಾಲಯ । ವಶಕೆಯ್ದಬೇಡೆಂಬರಳಲಿ ॥ ೧೮ ॥
ದ್ವಿಜರ ನಿಂದಿಸುವರು ಜೈನರು ಜೈನರ । ದ್ವಿಜರು ನಿಂದಿಪರು ನೋಯಿಪರು ॥
ಗಜಬಜೆಯಹುದಂತ್ಯದೊಳು ಜಿನಮತ ನಷ್ಟ । ದ್ವಿಜಧರ್ಮ ನಷ್ಟವಿಲ್ಲೆಂದಾ ॥ ೧೯ ॥
ಸೃಷ್ಟಿಗೆ ದೇವರಲ್ಲದೆ ನಾನು ಕರ್ತನೆ । ಯಿಷ್ಟ ನೋಡರೆಯೆಂದ ಚಕ್ರಿ ॥
ಆಷ್ಟು ವಿವೇಕ ಮುಂದೆಲ್ಲರಿಗಿಲ್ಲಿನ್ನು । ನಷ್ಟವೈ ದಿನದಿನಕೆಂದಾ ॥ ೨೦ ॥
ನಾಟಕಶಾಲೆ ಮಹಾನವಮಿಗಳನು । ದ್ಘಾಟಿಸೆ ಮನುವೆಂಬರೆನ್ನಾ ॥
ಮೀಟನ ಬ್ರಹ್ಮನೆಂಬರೆ ಬೇರೆ ವರ್ಣಸಂ । ಕೂಟವ ಕಲ್ಪಿಸುವಾಗ ॥ ೨೧ ॥
ಸ್ವಾಮಿಯಿದ್ದಂತೆ ನಾನೊಂದ ಸೃಷ್ಟಿಸುವಾಗ । ಸ್ವಾಮಿಯ ಮೀರಿದೆನೈಸೆ ॥
ಆ ಮರ್ತ್ಯರೇಕಿಂತು ನೆನೆವರೆಂದನು ನ್ಯಾಯ । ಸೀಮೆಯರಿಯರೆಂದನರುಹಾ ॥ ೨೨ ॥
ಕಡೆಯಲ್ಲಿ ದ್ವಿಜರಾದರೆಂಬಾಗ ನೀ ಮುನ್ನ । ಪಡೆದ ಕ್ಷತ್ರಿಯವಂಶಜನಕೆ ॥
ನಡೆಯಿಸಿದವರಾರು ಷೋಡಶಕರ್ಮವ । ಕಡುಹೆಡ್ಡರಲ್ತೆ ಹಾಯೆಂದಾ ॥ ೨೩ ॥
ಜಾತಕರ್ಮವ ನಾಮಕರ್ಮವ ಯಜ್ಞೋಪ । ವೀತವ ವಿಪ್ರರೆಸಗದೆ ॥
ಜಾತಿಕ್ಷತ್ರಿಯರೆಂತು ವೈಶ್ಯರೆಂತಾದರೀ । ರೀತಿ ಕಾಣಿಸದೆ ಹಾಯೆಂದಾ ॥ ೨೪ ॥
ಆಗಲೊಬ್ಬೊಬ್ಬರ ಮನೆಗೆ ತಮ್ಮೊಳು ತಾವೆ । ಹೋಗಿ ಕರ್ಮವ ಮಾಳ್ಪ ನೆನಹೊ ॥
ಆ ಗುಣ ಮೊದಲೆ ತಮ್ಮೊಳು ನಿಂದ ಮೇಲೆ ನಾ । ನೀಗ ನಿರ್ಮಿಸಲೇಕೆ ದ್ವಿಜರಾ ॥ ೨೫ ॥
ಬೆರಳಿಗೆ ದರ್ಭೆಯ ಸುತ್ತಿ ಹೋಮವ ಮಾಡಿ । ಪರರ ದಕ್ಷಿಣೆಗೆ ಕೈಯೊಡ್ಡಿ ॥
ಕರವಾಳಪಿಡಿವನೆ ಕ್ಷತ್ರಿಯ ವೈಶ್ಯರು । ಪರದುಗ್ಗೈವರೆ ಹಾಸ್ಯವೆಂದಾ ॥ ೨೬ ॥
ಪಾತೃಗಳಲ್ಲದೆ ಕ್ಷತ್ರಿಯವೈಶ್ಯರು । ಪಾತ್ರಗಳಲ್ಲವೀ ದ್ವಿಜರು ॥
ಪಾತೃಗಳಹುದು ಪಾತ್ರಗಳಹುದಿದರ ಸು । ಸೂತ್ರ ಕಾಣಿಸದಲಾಯೆಂದಾ ॥ ೨೭ ॥

ನನಗೆ ನನ್ನನುಜರ್ಗೆ ನನ್ನ ಮಕ್ಕಳಿಗೆ ಪಾ । ವನಯಜ್ಞಸೂತ್ರಕರ್ಮವನು ॥
ಅನುಗೊಳಿಸಿದರಾರು ವಿಪ್ರರಲ್ಲವೆ ಅಂತ್ಯ । ಜನಿತರೆಂಬರೆ ಭ್ರಾಂತರೆಂದಾ ॥ ೨೮ ॥

ನಿಲಲಿ ಸಾಕಾ ಮಾತು ಹದಿನಾರುಕನಸಿನ । ಫಲವ ನಿರೂಪಿಸೆಂದೊಡನೆ ॥
ತಲೆಮಣಿದಾ ರಾಯ ನುಡಿವುತಿರ್ದನು ಸ್ವಾಮಿ । ತಿಳುಹಿದನೇನ ಬಣ್ಣಿಪೆನು ॥ ೨೯ ॥

ಒಂದೊಂದು ಸಿಂಹದ ಕೂಡೆ ಹಲವುಸಿಂಹ । ಸಂದಣಿಸಿರೆ ಪೋಗುತಿರ್ಪ ॥
ಚಂದದಿಪ್ಪತ್ತಮೂರಧಿಕಸಿಂಹವ ಕಂಡೆ । ಮುಂದಹ ಫಲಗಳೇನೆಂದಾ ॥ ೩೦ ॥

ನಾವು ಮುಂತಾಗಿ ತೀರ್ಥಂಕರರಿಪ್ಪತ್ತ । ಮೂವರ ಕಾಲದಿ ಕುಮತಾ ॥
ಜೀವರೊಳ್ಪುಟ್ಟಿಯು ಹೆಚ್ಚದು ಜಿನಧರ್ಮ । ಧಾವಲ್ಯವಹುದೆಂದನಭವಾ ॥ ೩೧ ॥

ಕಡೆಗೊಂದು ಸಿಂಹದೊಳ್ಬಹುಮೃಗವೆಯ್ದದೆ । ಸಿಡಿದು ಪೋಪುದ ಕಂಡೆನೆನಲು ॥
ಕಡೆಯ ತೀರ್ಥೇಶನ ಕಾಲಕೆ ಕುಮತದ । ಪಡೆಯೇಳ್ವುದೆಂದನಾ ಸ್ವಾಮಿ ॥ ೩೨ ॥

ಜಲ ನಟ್ಟನಡುವೆ ಬರತು ಕಡೆಯೊಳು ನಿಂದ । ಬಲುತಟಾಕವ ಕಂಡೆನೆಂದಾ ॥
ಕಲಿಕಾಲ ಜಿನಧರ್ಮ ನಡುನಾಡೊಳಿರದಂತ್ಯ । ದೊಳು ನಿಲ್ವುದೆಂದನಾ ದೇವಾ ॥ ೩೩ ॥

ಆನೆಯನೇರಿ ಕೋಡಗ ಬರ್ಪದೊಂದು ಕ । ಷ್ಟಾನುಗತಿಯ ಕಂಡೆನೆನಲು ॥
ಮಾನಿತಕ್ಷತ್ರಿಯಕುಲಗೆಟ್ಟು ಕಡೆಯಲ್ಲಿ । ಹೀನರೆ ನೃಪರಹರೆಂದಾ ॥ ೩೪ ॥

ಓತು ಗೋವೆಳೆಮೇವ ಬಿಟ್ಟೊಣತರಗ ಬಾ । ಯ್ವಾತು ಮೇವುದ ಕಂಡೆನೆನಲು ॥
ಜಾತಿವರ್ತನೆಯ ಸ್ತ್ರೀಪುರುಷರೊಲ್ಲದೆ ವಿಪ । ರೀತವೃತ್ತಿಗೆ ಸಲ್ವರೆಂದಾ ॥ ೩೫ ॥

ಎಲೆಯುದುರಿದ ತರುಗಳ ಕಂಡೆನೆಂದನು । ಕಲಿಕಾಲದೊಳು ಸೆರೆ ಬರನು ॥
ಫಲಿಸುವುವಲ್ಲಿ ಪೈಸಿರಿಗೆಟ್ಟು ನಾಣ್ಗೆಟ್ಟು । ಸುಳಿವರು ಮಾನವರೆಂದಾ ॥ ೩೬ ॥

ವಸುಧೆಯೊಳೆತ್ತ ನೋಡಿದರೊಣದರಗಿನ । ಪಸರವೆ ಪರಿದಿದ್ದುದೆನಲು ॥
ರಸಹೀನವಸ್ತುವೆ ಉಪಭೋಗಪರಿಭೋಗ । ವಿಸರಕಂದಿಗೆ ಸಲ್ವುದೆಂದಾ ॥ ೩೭ ॥

ಮರುಳು ಸಿಂಗರಿಸಿ ಬಪ್ಪುದ ಕಂಡೆನೆಂದ ಸೌಂ । ದರನಾಮುಗಳ ಬಿಟ್ಟು ನರರು ॥
ಪುರುಳುಗೆಟ್ಟಿತ್ತರತತ್ತರನಾಮವ । ಧರಿಸುವರೆಂದನಾ ಸ್ವಾಮಿ ॥ ೩೮ ॥

ಪೊಂಬರಿವಾಣದೊಳಗೆ ಶ್ವಾನ ತುಯ್ಯಲ । ನುಂಬುದ ಕಂಡೆ ನಾನೆನಲು ॥
ಡಂಬಕರ್ಬಿನುಗರು ಕಡೆಯ ಕಾಲಕೆ ಪೂಜೆ । ಗೊಂಬರೊಳ್ಳಿದನುಂಬರೆಂದಾ ॥ ೩೯ ॥

ಕಾಗೆಗೂಗೆಗಳೊಡ್ಡು ರಾಜಹಂಸೆಯ ಪಿರಿ । ದಾಗಿ ಬಾಧಿಸೆ ಕಂಡೆನೆನಲು ॥
ರಾಗರೋಷಿಗಳಿನ್ನು ಹಂಸಯೋಗವ ಹಂಸ । ಯೋಗಿಯ ನಿಂದಿಪರೆಂದಾ ॥ ೪೦ ॥

ವಿಧಿವಶದಿಂದಾನೆ ಹೊರುವ ರಂಚಿಕೆಯ ಸ । ನ್ನಿಧಿಯಶ್ವ ಹೊತ್ತು ಹೋಯ್ತೆನಲು ॥
ಅಧಿಕರು ಧರಿಸುವ ಜೈನಧರ್ಮವ ಕಡೆ । ಗಧಮರೆ ಧರಿಸುವರೆಂದಾ ॥ ೪೧ ॥

ಚಿಕ್ಕಬಸವನೊಂದುಹಿಂಡನಗಲಿ ಗುಟು । ರಿಕ್ಕುತಿಯ್ದಿದುದು ಕಂಡೆನೆನಲು ॥
ಚಿಕ್ಕಂದೆ ದೀಕ್ಷೆವಡೆವರು ಬಹಳ ಪ್ರಾಯ । ಮಿಕ್ಕು ದೀಕ್ಷಿತರಲ್ಪವೆಂದಾ ॥ ೪೨ ॥
ಎರಡುಗೂಳಿಗಳೊಂದುಗೂಡಿ ಭೂತಳದಲ್ಲಿ । ಚರಿಸುತಿರ್ದುದ ಕಂಡೆನೆನಲು ॥
ಗಿರಿವನಗುಹೆಯೊಳೊಬ್ಬೊಬ್ಬರಿರರು ಗೋಷ್ಠಿ । ವೆರಸಿ ತಾಪಸರಿಹರೆಂದಾ ॥ ೪೩ ॥
ಪಸರಿಪ ಪ್ರಭೆಯುಳ್ಳ ರತ್ನರಾಶಿಗೆ ಧೂಳು । ಮುಸುಕಿಕೊಂಡುದ ಕಂಡೆನೆನಲು ॥
ರಸ ಬುದ್ಧಿ ಬಲ ಮೊದಲಾದ ವೃದ್ಧಿಗಳು ತಾ । ಪಸರಿಗಂದುದಯಿಸವೆಂದಾ ॥ ೪೪ ॥
ಧವಳಪ್ರಕಾಶದ ಚಂದ್ರಗೆ ಪರಿವೇಷ । ಕವಿದುದ ಕಂಡೆ ನಾನೆನಲು ॥
ಅವಧಿವಿಜ್ಞಾನ ಚೇತೋಜ್ಞಾನವೊಂದೂ ಸಂ । ಭವಿಸವು ಮುನಿಗಳಿಗೆಂದಾ ॥ ೪೫ ॥
ದೇವರ ದೇವ ಚಿತ್ತೈಸು ಸೂರ್ಯಗೆ ಮುಗಿ । ಲಾವರಿಸಿತು ಕಂಡೆನೆನಲು ॥
ಕೈವಲ್ಯಬೋಧವಾಗದು ಕಲಿಯೊಳು ಭವ್ಯ । ಭಾವಿಸೆಂದನು ಭವಾಂತಕನು ॥ ೪೬ ॥
ಆವುಗ್ರಕಲಿಯುಗವೆಂಬುದಿಪ್ಪತ್ತೊಂದು । ಸಾವಿರವರುಷ ಮುಂದತ್ತ ॥
ಆವ ಧರ್ಮದ ಸೋಂಕು ಸುಳಿಯದಿಪ್ಪತ್ತೊಂದು । ಸಾವಿರವರುಷ ಸಾಗುವುದು ॥ ೪೭ ॥
ಪ್ರಳಯವಹುದು ಮತ್ತೆ ಪ್ರಳಯದ ಮುಂದೆಲ್ಲ । ಮೊಳೆವುವು ಧರ್ಮಕರ್ಮಗಳು ॥
ಬೆಳೆದು ಮತ್ತಂತ್ಯದೊಳ್ಕೆಡುತ ಕೂಗಾಡುತ । ಸುಳಿವುದೀ ಪರಿಯೆಂದನಭವಾ ॥ ೪೮ ॥
ದುಸ್ಸ್ವಪ್ನ ಮುಂದಿನ ಜನಕ್ಕೈಸೆ ನನಗಿಂದು । ಸುಸ್ವಪ್ನ ನಿನ್ನ ಕಂಡಾಗ ॥
ಆಸ್ವಪ್ನಪತಿವಂದ್ಯ ಜಯಜಯ ಪುರೆಯೆಂದು । ಸುಸ್ವರಗೈದನಾ ರಾಯಾ ॥ ೪೯ ॥

ಇನ್ನೊಂದು ಬಯಕೆಯುಂಟೆಂದರುಹನ ಮುಂದೆ । ಮುನ್ನಹ ಜಿನನಿವಾಸಗಳಾ ॥
ನಿನ್ನದ್ರಿಯೊಳು ರಚಿಸಃವೆನೊಪ್ಪು ಸ್ವಾಮಿ ತು । ಭ್ಯನ್ನವೋಯೆನುತೆದ್ದು ನಿಂದಾ ॥ ೫೦ ॥
ಫಣಿನರಾಮರವಂದ್ಯ ಜಯಜಯಯೆಂಬ ಬ್ರಾ । ಹ್ಮಣರುವೆರಸಿ ದೇವಗೆರಗಿ ॥
ಮಣಿದು ತಾಪಸರಿಗೆ ಜಿನಸಭೆಯಿಂದ ಧಾ । ರಿಣಿಪತಿಯೆದ್ದನುಬ್ಬಿನೊಳು ॥ ೫೧ ॥
ಮೇಲಿದ್ದ ಜಿನಸಭೆಯಿಂದಿಳಿದಡಿಯಣ । ಶೈಲದೊಳ್ನಿಂದು ರಾಜೇಂದ್ರಾ ॥
ಲಾಲಿತಜಿನಗೃಹಗಳನಿಲ್ಲಿ ರಚಿಸೆಂದು । ಸಾಲುದೋರಿದ ಭದ್ರಮುಖಗೆ ॥ ೫೨ ॥
ತತ್ತರ ಬೇಡೆಂಯ್ಯನೊಳ್ಪಾಗಿ ನಿರ್ಮಿಸೆ । ಪ್ಪತ್ತೆರಡಭವವಾಸಗಳಾ ॥
ಮತ್ತಾನು ಬಂದು ಪ್ರತಿಷ್ಠೆಗುಜ್ಜುಗಿಪೆನೆಂ । ದಿತ್ತನಾತನಿಗೆ ನೇಮವನು ॥ ೫೩ ॥

ಆ ವೇಳೆಯಲ್ಲಿ ತೇಜೋರಾಶಿಯೆಂಬಾತ್ಮ । ಭಾವಕಮುನಿ ಭಿಕ್ಷೆಗೆಂದು ॥
ಭೂವಳಯಕೆ ಪೋಗಿ ಬರುತ ಪರ್ವತದಲ್ಲಿ । ಭೂವರಾಗ್ರಣಿಯು ಸಂದಿಸಿದಾ ॥ ೫೪ ॥
ಗಣಧರನಾತ ಚೇತೋಜ್ಞಾನಸಂಪನ್ನ । ನಣಿಮಾದಿಸಿದ್ಧಿ ಭಾಸುರನು ॥
ಪ್ರಣತನಾದನು ವಿಪ್ರತತಿಗೂಡಿ ನೃಪತಿ ಕಾ । ರಣಯೋಗಿ ಹರಸಿದನೊಲಿದು ॥ ೫೫ ॥

ಅರಸ ನೀನಿಲ್ಲಿ ನೂತನವಸತಿಗಳ ಸಿಂ । ಗರಿಪುದುತ್ತಮವಾದುದಿನ್ನು ॥
ಪರಹಿತಾರ್ಥವನೊಂದ ಮಾಡೆಂದರಾವುದು । ಗುರುವೆ ಸೂಚಿಸು ಮಾಳ್ಪೆನೆಂದಾ ॥ ೫೬ ॥
ಜಿನನ ಕಾಣ್ಬಾಶೆ ನಿನ್ನರಸಿಯರ್ಗುಂಟನ್ಯ । ಜನವಿಹುದಾಗಿ ಕಾಣ್ಬುದಕೆ ॥
ಅನುಗೂಡದೆಂದರಿದೊಂದೊಂದು ವ್ರತಗಳ । ಮನದೊಳಾಂತಿಹರೆಲೆ ನೃಪತಿ ॥ ೫೭ ॥
ಎಂದಾದರರುಹನ ಕಂಡ ಮೇಲಿರಲಿಲ್ಲ । ದಂದು ಜನ್ನಕೆ ಪೋಗಲೆಂದು ॥
ಒಂದೊಂದು ರಸವಸ್ತು ಪರಿಮಳವಸ್ತುವ । ಸೌಂದರಿಯರು ತೊರೆದಿಹರೆ ॥ ೫೮ ॥
ನೀನರಿಯದವೊಲು ಪರರರಿಯದವೊಲು । ಸ್ವಾನುವೇದ್ಯದಿ ಗೂಢವ್ರತವಾ ॥
ಮಾನಿನಿಯರು ನಡೆಯಿಸಿದರಾ ವ್ರತ ತನ್ನ । ತಾನೆ ಸಿದ್ಧಿಸುತದೆ ಕೇಳು ॥ ೫೯ ॥
ಈ ವಸತಿಗಳ ಪ್ರತಿಷ್ಠೆಯ ದಿನಕೊಂದು । ಕೈವಲ್ಯಕಲ್ಯಾಣಕೂರ್ತು ॥
ದೇವನ ಸಭೆಯುವರನ್ಯಭೂಮಿಗೆ ಪೋಪ । ರಾ ವೇಳೆಯೊಳು ಕಾಣಿಸೆಂದಾ ॥ ೬೦ ॥
ಹರಿವರೆಲ್ಲರು ಪುರುನಾಥ ವೃದ್ಧಾರ್ಯರು । ವೆರಸಿಹನಾಗ ಪೆಂಗಳಿಗೆ ॥
ಅರುಹನ ಕಾಣಿಸೆಂದಾ ಮುನಿ ಜಿನಸಭೆ । ಗಿರದೆದ್ದನಾ ಕ್ಷಣದಲ್ಲಿ ॥ ೬೧ ॥
ಹೆಂಗಳ ಚರಿತಕಾನಂದಬಟ್ಟನು ಮುಂದೆ । ಸಂಗಡಿಸುವ ಪ್ರತಿಷ್ಠೆಯಲಿ ॥
ತಂಗಿಯರ್ತನುಜೆಯರರಸಿಯರನು ಪರ । ಮಂಗೆರಗಿಪೆನೆಂದು ನೆನೆದಾ ॥ ೬೨ ॥
ಅಲ್ಲಿಯೆ ಸುತೆಯರ್ಗೆ ತಂಗಿಯರ್ಗೋಲೆಯ । ನಿಲ್ಲದಾ ಕ್ಷಣದೊಳಟ್ಟಿದನು ॥
ಉಲ್ಲಾಸ ಮಿಗೆ ದ್ವಿಜರೊಡಗೂಡಿ ಪುರಕೆ ಭೂ । ವಲ್ಲಭನೊಲಿದನೋಜೆಯೊಳು ॥ ೬೩ ॥
ದೇವ ನಿನ್ನರಸಿಯರ್ನಿನು ನಿನ್ನಣುಗರು । ಜೀವರೆಲ್ಲರನು ಲೋಕದೊಳು ॥
ಪಾವನಮಾಡಲುದ್ಭವಿಸಿದಿರೆಂದು ವಿ । ಪ್ರಾವಳಿ ಪೊಗಳುತೆಯ್ದಿದುದು ॥ ೬೪ ॥
ಭೋಗದೊಳಾಸಕ್ತಿಯಿಲ್ಲ ನಿಮಗೆ ಧರ್ಮ । ಯೋಗದೊಳಿದ್ದುದಾಸಕ್ತಿ ॥
ನಾಗರರೆನ್ನಬಹುದೆ ನೀವು ಗೃಹತಪೋ । ಭಾಗಿಗಳೆಂದರರ್ತಿಯೊಳು ॥ ೬೫ ॥
ಪರಮಾತ್ಮ ಜಿನಸಿದ್ಧ ಭರತರಾಜೇಂದ್ರನು । ವರ್ರೆಗೆ ಗೃಹಸ್ಥನೆ ಅಹಹಾ ॥
ವರಮೋಕ್ಷಮಾರ್ಗಸ್ಥನೆನುತ ಕುಂಡಲ ಗಡ್ಡ । ಶಿರದೂಗಿ ಪೊಗಳುತೆಯ್ದಿದರು ॥ ೬೬ ॥
ಪುರವ ಪೊಕ್ಕಾ ವಿಪ್ರಜನವ ಬೀಳ್ಕೊಟ್ಟು ತ । ನ್ನರಮನೆಗೆಯ್ದಿ ರಾಜೇಂದ್ರಾ ॥
ಇರುತಿರೆ ದುಃಸ್ವಪ್ನಗಂಡ ವಾರ್ತೆಯ ಕೇಳಿ । ಬರುತಿರ್ದರಖಿಳಭೂಭುಜರು ॥ ೬೭ ॥
ಇಲ್ಲದವನಿಗೊಂದು ನೋವಾದರೆಡೆಹಿದ । ಕಲ್ಲೆಂದು ನೋಡದು ಲೋಕಾ ॥
ಬಲ್ಲಿದನೊಂದು ಕನಸ ಕಂಡರದಕೆ ನಾ । ಡೆಲ್ಲ ಬಂದುಪಚರಿಸಿದುದು ॥ ೬೮ ॥
ಮಾಗಧ ವರತನು ಹಿಮವಂತದೇವ ಮುಂ । ತಾಗಿ ವ್ಯಂತರರು ಖೇಚರರು ॥
ಬೇಗದೊಳೆಯ್ದಿದರೊಯ್ಯನೊಯ್ಯನೆ ಪುರ । ಕಾಗಮಿಸಿದರು ಭೂಚರರು ॥ ೬೯ ॥

ಕಾಣಿಕೆಗೊಡುವ ನಿವಾಳಿಯಿಡುವ ಪೊಸ । ಮಾಣಿಕಗಳ ನಿವಾಳಿಸುವ ॥
ಕ್ಷೋಣಿಯೊಳೆರಗುವ ಕೈಮುಗಿವುಪಚಾರ । ಶ್ರೇಣಿಯಿದ್ದುದು ದಿನದಿನಕೆ ॥ ೭೦ ॥

ದ್ವಿಜರಿಗೆ ದಾನಗೊಡುವ ಜಿನಪೂಜೆಯು । ಧ್ವಜವೆತ್ತಿ ಮಾಳ್ಪ ಯೋಗಿಗಳಾ ॥
ಭಜಿಸುವ ತತ್ಫಲ ನಿನಗಿರಲೆಂಬ ಭೂ । ಭುಜರುಪಚಾರ ಮೆರೆದುದು ॥ ೭೧ ॥

ಕನಸಿನ ದೋಷ ಹೋಗಲಿಯೆಂದು ಶಾಂತಿಕ । ವನು ಭೂಪರಲ್ಲಲ್ಲಿ ನೆಗಳೆ ॥
ಜನನಾಥನಲ್ಲೆನ್ನದಹುದೆನ್ನದವನೊಂದು । ಕನಸ ಕಾಂಬೊಲು ಕಾಣುತಿರ್ದಾ ॥ ೭೨ ॥

ಸುಕ್ಷೇಮಿ ನಾನೆನಗಾತ್ಮಯೋಗವೆ ಸರ್ವ । ರಕ್ಷೆಯೆಂದೆದೆಯೊಳಾಂತಿಹನು ॥
ಆ ಕ್ಷಿತಿಪರು ಮಾಳ್ಪ ವಿನಯಕಲ್ಲೆನ್ನದೆ । ಸಾಕ್ಷಿಮಾತ್ರದಿ ನೋಡುತಿರ್ದಾ ॥ ೭೩ ॥

ತೆಂಮೆತೆಂಮೆಯೊಳೆಯ್ದಿ ಸರ್ವರು ಮಾಡಿದ । ಸಂಮುತಾರ್ಥವನೊಪ್ಪುಗೊಂಡು ॥
ಒಂಮುಡಿಗಿಮ್ಮಡಿ ಮನ್ನಣೆಯಿತ್ತು ತೇ । ಜಂ ಮಿಗೆ ಕಳುಹಿದನೊಡನೆ ॥ ೭೪ ॥

ಹೋದರೆಲ್ಲರು ಮಂತ್ರಿ ಮತ್ತೊಂದು ದಿನ ತನ್ನ । ಸೋದರನೊಡಗೂಡಿ ಬಂದು ॥
ಮಾದಲವಣ್ಣ ಕಾಣಿಕೆಗೊಟ್ಟು ನೃಪನ ಕಂ । ಡೇ ದೇವ ಬಿನ್ನಹವೆಂದಾ ॥ ೭೫ ॥

ಸುರನಾಗಮರ್ತ್ಯಲೋಕದೊಳು ನಿನ್ನಂತಪ್ಪ । ದೊರೆಗಳಿಲ್ಲದು ಲೋಕವರಿಕೆ ॥
ಎರಡುಘಳಿಗೆಗೆ ಕರ್ಮವ ಮುಂದೆ ಸುಡುವನೆಂ । ದರುಹನಾಡಿದುದೆಲ್ಲರರಿಕೆ ॥ ೭೬ ॥

ರಾಜರೊಳಗೆ ರಾಜ ಯೋಗಿಗಳೊಳು ಯೋಗಿ । ಸ್ತ್ರೀಜನಕಿಮ್ಮಡಿಮದನಾ ॥
ಸೂಜಿಯ ಮೊನೆಯುಷ್ಟು ಕೊರತೆ ಪೊದ್ದದ ಪ್ರೌಢ । ರಾಜ ನೀನಲ್ಲದಿನ್ನಿಲ್ಲ ॥ ೭೭ ॥

ಕೊಂಡಾಡುವಾಗಾನು ಭಟ್ಟನಲ್ಲೊಳ್ಳಿತ । ಕಂಡು ಸೋಲದ ಸುಖಿ ಯಾರು ॥
ಪಿಂಡುಮಾತಿನ ಜೋಲಿಯೇನು ನೀನೊಬ್ಬನೆ । ಮುಂಡೆದೂಗಿಸಿದೆ ಮೂಜಗವಾ ॥ ೭೮ ॥

ಸುವಿವೇಕಿರಾಜನೋಲಗವದು ಮುನ್ನ ನೋಂ । ತವರಿಗೆ ಫಲಿಸುವುದೆಂಬ ॥
ರವ ಹುಸಿವುದೆ ನಿನ್ನನೋಲೈಸಿ ಪ್ರತ್ಯಕ್ಷ । ದಿವಿಜಸುಖವನುಂಡೆ ನಾನು ॥ ೭೯ ॥

ನೆನೆದ ಮಾತ್ರದಿ ನಿನ್ನ ಕಂಡ ಮಾತ್ರದಿ ಸರ್ವ । ಜನಕೆ ಸುಜ್ಞಾನ ಸೂಸುವುದು ॥
ನಿನಗೊಬ್ಬ ಮಂತ್ರಿಯೆ ಉಪಚಾರಕೆನ್ನ ಮು । ಖ್ಯನ ಮಾಡಿ ನಡೆಸಿದೈ ವಿಭುವೆ ॥ ೮೦ ॥

ಅಣುಮಾತ್ರ ತೇಜ ಪೈಸರಿಸದೆ ಸರ್ವಥಾ । ರಿಣಿ ಮೆಚ್ಚೆ ನಡೆಸಿದೈ ನನ್ನಾ ॥
ತಣಿದೆನೊಡೆಯ ಬಹುವಚನ ಸಾಕೀಗೊಂದ । ನೆಣಿಸಿ ಬಂದೆನು ಪರಾಂಬರಿಸು ॥ ೮೧ ॥

ಚಿರಕಾಲತೊಡಗಿ ಸಂಸಾರಚಕ್ರದೊಳಾನು । ತಿರುಗಿದೆನದು ಹೋಗಲೀಗ ॥
ಹರೆಯ ಜಾರಿತು ಮುಪ್ಪು ಮೀರಿತು ದೇಹವಿ । ನ್ನಿರಲರಿಯದು ಬಹುಕಾಲಾ ॥ ೮೨ ॥

ಕೆಡುವ ದೇಹವನಿನ್ನು ತಪದಲ್ಲಿ ವೆಚ್ಚಿಸಿ । ಕೆಡದ ಸಿದ್ಧಿಯ ಮಾಳ್ಪೆನದಕೆ ॥
ಬಿಡುಗೆಗೊಡೆಂದು ಸಾಷ್ಟಾಂಗವೆರಗಿದನು । ಪೊಡವೀಶನೆದೆ ದಿಗಿಲೆನಲು ॥ ೮೩ ॥

ಎದ್ದು ಕೇಳೆಂದನು ದೀಕ್ಷೆಗೆ ಪೋಗೆಂದ । ರೆದ್ದಪೆನೆಂದೆರಗಿದರ್ ॥
ಬಿದ್ದ ವೇಳೆಯೊಳಾರು ಪೋಗೆಂಬರೈಯೆಂದ । ರೆದ್ದನಾ ಕ್ಷಣದೊಳಾ ಮಂತ್ರಿ ॥ ೮೪ ॥

ಕಡೆಯಲ್ಲಿ ತಪಸುವಾಳ್ವುದು ಜಾಣ್ಮೆಯಹುದಿಷ್ಟು । ತಡೆದು ಹೋಗೀಗ ಬೇಡೆಂದಾ ॥
ನಡೆ ನುಡಿ ತಕ್ಕುಷ್ಟು ಶಕ್ತಿಯುಳ್ಳಲ್ಲಿ ಕಂ । ಗೆಡಿಸೆ ಕರ್ಮವನೆಂದನವನು ॥ ೮೫ ॥

ನೂತನಜಿನಗೃಹಗಳ ಪೂಜೆಗಂಡು ದೀ । ಕ್ಷಾತುರನಾಗು ತಾಳೆಂದಾ ॥
ಏತಕಿನ್ನೆನ್ನಾಶೆ ಕಳುಹೆಂದು ಪಾದಾಂಬು । ಜಾತಕೆ ಪಣೆಯಿಟ್ಟನೊಡನೆ ॥ ೮೬ ॥

ಅರಿದೆನೈ ನಿನ್ನ ತಂತ್ರವನಿಷ್ಟು ದಿನ ನಮು । ಗೆರಗಿದೈಯಿನ್ನು ನೀನೆಮ್ಮಾ ॥
ಎರಗಿಸಿಕೊಂಬೆನೆಂದೆಣಿಸಿದೈಯೆಂದೆತ್ತಿ । ಮರುಕದಿ ತಕ್ಕೈಸಿಕೊಂಡಾ ॥ ೮೭ ॥

ಕರುಣದಿ ರಕ್ಷಿಸೆಂದೆರಗಿಸಿ ತಮ್ಮನ । ದೊರೆಯ ಕೈಲೆಡೆಗೊಟ್ಟು ಕೂಡೆ ॥
ಬೆರಳ ಮುದ್ರಿಕೆಯನೊಪ್ಪಿಸಿದನು ರಾಗದಂ । ಕುರವನೊಪ್ಪಿಸುವನೆಂಬಂತೆ ॥ ೮೮ ॥

ಗುಮ್ಮಿತು ಕಂಬನಿ ನೃಪಗೆ ಮಿತ್ರರು ತನ್ನ । ತಮ್ಮನು ಮರುಗಲೀಕ್ಷಿಸದೆ ॥
ಘುಮ್ಮನೆ ಕೈಮುಗಿದಾ ಮಂತ್ರಿ ಸಭೆಯಿಂದ । ಸುಮ್ಮಾನದಲಿ ಪೋದನತ್ತ ॥ ೮೯ ॥

ತನ್ನ ತಾನಳಲ ಸಂತೈಸಿ ಭೂವರ ಕೂಡೆ । ನಿನ್ನಣ್ಣ ಮುಪ್ಪಿನೊಳಿನ್ನು ॥
ತನ್ನಾತ್ಮಸಿದ್ಧಿಯ ನೆಗಳಲ್ಕೆ ತಾಳೆಂದು । ಮನ್ನಣೆಗೈದನಾ ದ್ವಿಜಗೆ ॥ ೯೦ ॥

ಯೋಗಕೆ ನಿನ್ನಣ್ಣ ಪೋದ ಮೇಲುರೆ ಬುದ್ಧಿ । ಸಾಗರ ನೀನೆಮಗೆಂದು ॥
ಪೋಗುವಾಗಿತ್ತ ಮುದ್ರಿಕೆಯನಾತನಿಗನು । ರಾಗದಿಂದಿತ್ತನಾ ಚಕ್ರಿ ॥ ೯೧ ॥

ಪಿರಿದುಡುಗೊರೆಯಿತ್ತು ತಕ್ಕೈಸಿಕೊಂಡೆನ್ನ । ಧರೆ ನಿನ್ನ ಭಾರವಿನ್ನೆಂದು ॥
ಕರೆದು ಮಿತ್ರರುಗೂಡಿ ಕೊಟ್ಟು ಸಂತಸದೊಳಾ । ಭರತೇಶ ಬೀಳ್ಕೊಟ್ಟನವನಾ ॥ ೯೨ ॥

ತೇರಾನೆ ಕುದುರೆ ಪತಾಕೆ ಮಂಗಲವಾದ್ಯ । ಭೋರೆನೆ ಬಸದಿಗೆಯ್ತಂದು ॥
ಮಾರವಿಜಯನ ಕಾಣಿಸಿ ಮಿತ್ರರವನ ಮ । ತ್ತಾ ರಾಯನೆಡೆಗೆಯ್ದಿಸಿದರು ॥ ೯೩ ॥

ರಾಜಗೆ ಯುವರಾಜಗಿಕ್ಕಿ ಕಾಣಿಕೆಯ ಸ । ಭಾಜನ ಜಯ ಜಯಯೆನಲು ॥
ತೇಜದಿ ಬುದ್ಧಿಸಾಗರಮಂತ್ರಿ ಗೃಹಕೆ ಮ । ಹಾಜನಗೂಡಿ ಸಾಗಿದನು ॥ ೯೪ ॥

ಕೂಡೆ ಸರ್ವರನು ಬೀಳ್ಕೊಟ್ಟು ವಿರೋಧಿವಿ । ಭಾಡ ತನ್ನರಮನೆಗೆಯ್ದಿ ॥
ಜೋಡಿಯಿಲ್ಲದ ವಿಲಾಸದೊಳಿರ್ದನಿಲ್ಲಿಗೆ । **ಷೋಡಶಸ್ವಪ್ನದ ಸಂಧಿ** ॥ ೯೫ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೬ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೭ ॥

ದಿನದಿನಕೆಯ್ದುವ ಸುಖದುಃಖ ಸಖಶತ್ರು । ಧನದಾರಿದ್ರ್ಯವು ಕನಸೆಂದು ॥
ಅನುಗಾಣಿಸುತ ನನ್ನ ನೆನಹಿನೊಳಿರು ಸುಖಾ । ಸನನೆ ಚಿದಂಬರಪುರುಷಾ ॥ ೯೮ ॥

ಷೋಡಶಸ್ವಪ್ನಸಂಧಿ ಸಂಪೂರ್ಣಂ

## ಜಿನವಾಸನಿರ್ಮಿತಸಂಧಿ

ಭಕ್ತರೊಡೆಯ ಭವ್ಯರೊಡೆಯ *ನವೀನವಿ । ರಕ್ತರೊಡೆಯ ವೀರರೊಡೆಯಾ ॥
ಶಕ್ತರೊಡೆಯ ಶಾಂತರೊಡೆಯ ಸನ್ಮತಿದೋರು । ಮುಕ್ತಾತ್ಮ ನಿರಂಜನಸಿದ್ಧಾ ॥ ೧ ॥

ಶಿಖರಿಯೊಳಭವವಾಸಗಳ ನಿರ್ಮಿಸಿ ಭದ್ರ । ಮುಖ ಬಂದು ನೃಪಗೆ ಕೈಮುಗಿದು ॥
ಸುಖದೊಳಾ ಕಾರ್ಯ ಸಂಪೂರ್ಣವಾಯ್ತೆನೆ ಕೊಟ್ಟ । ನಖಿಳರು ಮೆಚ್ಚೆ ಮನ್ನಣೆಯಾ॥ ೨ ॥

ಸುರಶಿಲ್ಪಿ ಕೊಯೆಂದು ಯುವರಾಜ ಕೊಟ್ಟ ಸೋ । ದರರೆಲ್ಲ ಮಯನೆ ಕೊಯೆಂದು ॥
ಕರೆದಿತ್ತರೆಲೆ ವಿಶ್ವಕರ್ಮ ಕೊಯೆಂದು ಮಿ । ತ್ರರು ಮಂತ್ರಿಯಿತ್ತರುಚಿತವಾ ॥ ೩ ॥

ಅರಸುಮಕ್ಕಳು ದೊರೆಗಳು ಮೊದಲಾಗಿ ಸ । ರ್ವರು ಕೊಟ್ಟರವನಿಗುಚಿತವಾ ॥
ಅರುಹನಾಲಯದೊಸಗೆಯ ಕೇಳ್ದು ಕೊಡದ ಜೈ । ನರಿಗುಂಟೆ ಜಿನನಲ್ಲಿ ಭಕ್ತಿ ॥ ೪ ॥

ಮೊದಲವನಿಗೆ ಸಿರಿ ಕಡವೆಯಿಲ್ಲಿಲ್ಲವೆ । ನ್ನದೆ ಹೊನ್ನು ಪಟ್ಟೆ ಮಾಣಿಕದ ॥
ಮೆದೆಯನಾ ಸುರಶಿಲ್ಪಿ ಕೊಂಡೊಯ್ದನೊಡನೆ ಭೂ । ಸುದತೀಶ ಪೂಜೆಗೆ ನೆನೆದಾ ॥ ೫ ॥

ಪ್ರಗುಣಲಗ್ನವ ಕೂಡೆ ಕೇಳ್ದಾನು ಮುಖವಸ್ತ್ರ । ದೆಗೆವ ದಿನಕೆ ಬರ್ಪೆ ನೀವು ॥
ನೆಗಳಿ ಪೂಜೆಯನೆಂದು ಮಂತ್ರಿಮಿತ್ರರನು ಹೆ । ಮ್ಮಗನನು ಬೀಳ್ಕೊಟ್ಟನೊಡನೆ ॥ ೬ ॥

ಬಾರರೇತಕೆ ತನೂಜೆಯರು ತಂಗಿಯರೆಂದು । ಹಾರೈಸುತಿರ್ದನಷ್ಟರೊಳು ॥
ಚಾರುವೈಭವ ತೋರೆ ವರರೊಡಗೂಡಿ ಕು । ಮಾರಿಯರೆಯ್ತಂದರೆಲ್ಲ ॥ ೭ ॥

ಕನಕಾವಳಿಯು ರತ್ನಾವಳಿಯು ಮುಕ್ತಾವಳಿ । ಮನುದೇವಿ ಮೊದಲಾದ ತನ್ನ ॥
ತನುಜೆಯರೆಯ್ದಿದರೆನಲರಮನೆಗೆಯ್ದಿ । ಜನನಾಥ ಕಾಣಿಸಿಕೊಂಡಾ ॥ ೮ ॥

ಜನನಿಯರೊಡಗೂಡಿ ಬಂದು ಪುತ್ರಿಯರು ಘ । ಮ್ಮನೆ ಕಾಣ್ಕೆಯಿಕ್ಕಿ ಕಾಲ್ಗೆರಗೆ ॥
ಜನಕನಾ ಕ್ಷಣ ಬಹುರೂಪಾಗಿ ತನ್ನ ನಂ । ದನೆಯರ ತೆಗೆದಪ್ಪಿಕೊಂಡಾ ॥ ೯ ॥

ತೊಡೆಯ ಮೇಲಿಟ್ಟುಕೊಂಡೆಲ್ಲರ ಮಂಡೆಯ । ತಡಹುತ ನಗುತ ನಿಟ್ಟಿಸುತ ॥
ಬೆಡಗಾದುದಕ್ಕ ನೀವೆಯ್ತಂದುದೆಂದರ್ತಿ । ವಡುತಿರ್ದನಾ ಪೆತ್ತ ತಂದೆ ॥ ೧೦ ॥

ಹೊಕ್ಕ ಮನೆಯೊಳವರೋಜೆಯೊಳ್ಬಾಳ್ವದ । ಮಕ್ಕಳಾಟಿಕೆಯಿಲ್ಲದಿಹುದಾ ॥
ಪಕ್ಕವ ಸಾರ್ದು ದಾದಿಯರುಸುರಲು ಕೇಳಿ । ಚೊಕ್ಕಭೂವರನರ್ತಿವಟ್ಟಾ ॥ ೧೧ ॥

ಕೇಳಿರಾ ಮಕ್ಕಳ ಮಾರ್ಗವನೆಂದು ನೃ । ಪಾಲಕ ನುಡಿದ ಪೆಂಡಿರಿಗೆ ॥
ಕೇಳಲಾವೆನಿತರವರು ದೇವರೆ ಕೇಳ್ದು । ಲಾಲಿಪುದೆಂದರಂದವರು ॥ ೧೨ ॥

---

* ವಿನಯ

ಬಳಲಿದಿರಕ್ಕ ವಿಶ್ರಮಿಸಿರೆಂದೆಲ್ಲರ । ಕಳುಹಿದನವರ ತಾಯ್ಗೂಡಿ ॥
ನಿಳಯದಿಂದೊಡನೆದ್ದು ನಡುವಣ ಚಾವಡಿ । ಯೊಳಗಿದ್ದ ಕಜ್ಜವೆಂಗಳಿರೆ ॥ ೧೩ ॥

ಅಣ್ಣನ ದೀರ್ಘರಾಜ್ಯವ ನೋಡುತಿದೆಯಲ್ಲಿ । ತಣ್ಣನೆ ಸಂತಸಬಡುತ ॥
ಹೆಣ್ಣೊಡಹುಟ್ಟಿಬ್ಬರೆಯ್ತಂದು ಕಂಡರಾ । ಬಣ್ಣದ ಚಾವಡಿಯಲ್ಲಿ ॥ ೧೪ ॥
ಸೇಸೆಯನಿಕ್ಕಿದ ತಂಗಿಯರಿಗೆ ಮಂಗ । ಲಾಸನಗೊಡಿಸಿ ರಾಜೇಂದ್ರಾ ॥
ಬಾ ಸಿಂಧುದೇವಿ ಗಂಗಮ್ಮಿ ಕುಳ್ಳಿರಿರೆನ । ಲಾ ಸುದತಿಯರು ಕುಳಿತರು ॥ ೧೫ ॥
ದೂರವಕ್ಕಾ ನಿಮ್ಮ ನಾಡು ನೀವೆಯ್ತಂದು । ದೋರಂತೆ ಲೇಸಾದುದೆಂದಾ ॥
ಸಾರವಾಗಿದ್ದುದಣ್ಣಾಜಿ ಇದೇತರ । ದೂರ ಮಾರನಿತೆಂದರವರು ॥ ೧೬ ॥
ಅನಿತರೊಳವರು ಬಂದುದ ಕೇಳುತೊಳಗಣಂ । ಗನೆಯರು ಕರೆಯಲಟ್ಟಿದರು ॥
ಜನನಾಥ ಕಳುಹಲಾ ದಿವಿಜೆಯರೆದ್ದು ಭೋಂ । ಕನೆ ಹೊಕ್ಕರಣ್ಣನ ಮನೆಗೆ ॥ ೧೭ ॥
ಪಟ್ಟದಾಕೆಯ ಮುಂದುಮಾಡಿಕೊಂಡಬಲೆಯ । ರೊಟ್ಟುಗೊಂಡಿದಿರ್ವರುತಿರ್ದು ॥
ಕಟ್ಟಿದಿರೊಳು ಕಾಣುತತ್ತಿಗೆಯರೊಳಿಷ್ಟು । ಸಟ್ಟಾಟವಾಡಿದರಾಗ ॥ ೧೮ ॥
ಆವ ದೇಶದ ಪೆಂಗಳಿವ್ರು ಮನೆಗೆ ನುಗ್ಗಿ । ತಾವೇಕೆ ಬಹರೆಂದರವರು ॥
ನಾವು ಹುಟ್ಟಿದ ಮನೆಯಲಿ ತುಂಬಿಕೊಂಡಿದ್ದ । ಭಾವೆಯರಾರೆಂದರಿವರು ॥ ೧೯ ॥
ಪಟ್ಟದರಸಿಯು ತಾವನ್ಯೋನ್ಯ ತೋಳ್ತುಂಬಿ । ತೊಟ್ಟುಕೊಂಡೊಡನೆ ಕುಳಿತರು ॥
ನಿಟ್ಟಿಸಿ ನಕ್ಕು ನುಡಿದು ಮಿಕ್ಕ ಸತಿಯರು । ಮುಟ್ಟಿ ಸಾರ್ದಿದ್ದರೊಪ್ಪದೊಳು ॥ ೨೦ ॥

ಕಾಂತೆಯರಿರಲಿತ್ತಲತ್ತ ಕನಕರಾಜ । ಕಾಂತರಾಜನು ಶಾಂತರಾಜಾ ॥
ಮುಂತಾದ ಜಾಮಾತೃಗಳು ಕಾಣ್ಕೆಯಿಕ್ಕಿ ಪೆಂ । ಪಾಂತ ಮಾವನ ಕಂಡರೊಸೆದು ॥ ೨೧ ॥
ಆದೆ ಸಿಂಧುದೇವಗಂಗಾದೇವನವರು ರ । ತ್ನದ ಕಾಣ್ಕೆಯಿಕ್ಕಿ ಭಾವನಿಗೆ ॥
ಮುದದಿ ಕೈಮುಗಿಯಲಾ ಚಕ್ರೇಶ ತೆಗೆದಪ್ಪಿ । ಮೃದುವಾಕ್ಯದೋರಿ ಮನ್ನಿಸಿದಾ ॥ ೨೨ ॥
ಜಂಬುಖಾನವನಳಿಯಂದಿರ್ಗೆ ಮೈದುನ । ರೆಂಬರ್ಗೆ ಗದ್ದುಗೆಗೊಡಿಸೆ ॥
ಇಂಬುಗೊಂಡರು ಮತ್ತು ಚಕ್ರಿಯ ಬಂಧುಕ । ದಂಬದ ಸಿರಿಯೆ ಸಿಂಗರವೆ ॥ ೨೩ ॥
ಅವರವರಿಚ್ಛೆಯನರಿದಲ್ಪದಿವಸ ಮಾ । ನವಪತಿ ವಿನಯವ ಮಾಡಿ ॥
ಅವರ ಪರಿಸ್ಪಂದ ತನ್ನ ಪರಿಸ್ಪಂದ । ನಿವಹವೆರಸಿ ಗಿರಿಗೆದ್ದಾ ॥ ೨೪ ॥
ಏನು ಮೋಹವೊ ಮತ್ತು ಸ್ಮರಪುರದೊಳಗಿದ್ದ । ಸೂನುಗಳನು ಸೊಸೆಯರನು ॥
ಮಾನವಪತಿ ಕರೆಯಿಸಿಕೊಂಡು ತಳರ್ದನೊಂ । ದಾನಂದರಸವನೇನೆಂಬೆ ॥ ೨೫ ॥
ಮತ್ತಿನ್ನು ತಮ್ಮಂದಿರಣುಗರ ಸೊಸೆಯರ । ಮೊತ್ತವ ಕರೆಯಿಸಿಕೊಂಡು ॥
ಚಿತ್ತಜರೂಪನೆದ್ದನು ಸರ್ವಪುತ್ರರ । ಹೆತ್ತ ತಾಯ್ತಂದೆಯ ಮರೆಸಿ ॥ ೨೬ ॥

ನಿಖಿಳಕುಟುಂಬವೆರಸಿ ವಾದ್ಯರವ ದಶ । ಮುಖದಿಕ್ಕುತುಂಬಿ ಸೂಳೈಸೆ ॥
ಮುಖವಸ್ತ್ರದೆಗೆವ ದಿನಕೆ ಬಂದು ಶೈಲದ । ಶಿಖರವ ಸಾರ್ದನಾ ರಾಯ ॥ ೨೭ ॥

ಸರ್ವವಿಧಾನವ ಮೊದಲೆ ತನ್ನವರಲ್ಲಿ । ನಿರ್ವಹಿಸಿರ್ದರು ಕೂಡೆ ॥
ಸಾರ್ವಭೌಮನು ಮುಖವಸ್ತ್ರವ ತೆಗೆಸಿದ । ನುರ್ವರೆ ಜಯಜಯಯೆನಲು ॥ ೨೮ ॥

ತರದೊಳೆಪ್ಪತ್ತೆರಡಮಲವಾಸದೊಳು ಭಾ । ಸುರವೆತ್ತ ಜಿನಬಿಂಬಗಳಿಗೆ ॥
ದರುಶನವಿಕ್ಕಿ ವಂದಿಸಿದನು ಪುತ್ರಮಿ । ತ್ರರು ಮೊದಲಾದರುವೆರಸಿ ॥ ೨೯ ॥

ರಾಣಿಯರನುಜೆ ತನುಜೆಯರು ಸೊಸೆಯರು । ಮಾಣಿಕ್ಯಹೇಮಬಿಂಬಗಳಾ ॥
ಕಾಣಿಕೆ ಮುಂತಾಗಿ ಕಂಡು ವಂದನೆಗೈದು । ಕೇಣಿಗೊಂಡರು ಪುಣ್ಯಪದವಾ ॥ ೩೦ ॥

ಬಸದಿಗಳ್ನವರತ್ನಮಯ ಹೇಮಮಯವಲ್ಲಿ । ಎಸೆವ ದೇಹಾರಗಳ್ತಾವು ॥
ಮಿಸುನಿರನ್ನದೊಳು ಸಿದ್ಧಾಸನದಲ್ಲಿ ರಾ । ಜಿಸಿದುವೇನೆಂಬೆನಾ ಸಿರಿಯಾ ॥ ೩೧ ॥

ಪೂಜಾಕ್ರಮ ತೀರೆ ನಿತ್ಯನೈಮಿತ್ತಿಕ । ಪೂಜೆಗೆ ಶಾಸನಗೈದು ॥
ತೇಜೋರಾಶಿಯೋಗಿಂದ್ರ ಸೂಚಿಸಿದುದ । ನಾ ಜನಪತಿ ಹಾರುತಿರ್ದಾ ॥ ೩೨ ॥

ಋಷಿವಾಕ್ಯ ಹುಸಿವುದೆ ತನತನಗಾಗಳೆ । ಋಷಿಗಳು ನರಸುರೋರಗರು ॥
ವೃಷಭೇಶನಾಸ್ಥಾನದಿಂದ ಗಂಗಾತೀರ । ವಿಷಯಕಿಳಿವುತಿರ್ದರಾಗ ॥ ೩೩ ॥

ಪರಮಕಲ್ಯಾಣವ ಕಾಣ್ಬೆವೆನುತ ತರ । ತರದೊಳೆಲ್ಲುತ್ಸಾಹಗೊಳುತ ॥
ಗಿರಿಯಿಂದ ಹೊನಲಿಳಿವಂತಿಳಿದತ್ತೊಂದು । ಧರೆಗೆ ಹೋದರು ನಿಮಿಷದಲಿ ॥ ೩೪ ॥

ಕದಲಿದರೆಲ್ಲರು ವೃದ್ಧತಾಪಸರ ಮೇ । ಳದೊಳಿರ್ದನಾ ಪುರುನಾಥಾ ॥
ಇದೆ ವೇಳೆಯೆಂದು ಪೆಂಗಳುಗೂಡಿ ಚಕ್ರಿ ಬೇ । ಗದಿ ಪೊಕ್ಕನಾ ಜಿನಸಭೆಯಾ ॥ ೩೫ ॥

ದ್ವಾರಪಾಲಕರನುಮತಗೊಟ್ಟು ತಾವಿಷ್ಟು । ದೂರಕೆ ತೊಲಗಿದರದಕೆ ॥
ನಾರಿಯರುಗ್ರವ್ರತವೆಯೆಂದು ಮೆಚ್ಚುತ । ಭೂರಾಮ ನಡೆದನೋಜೆಯೊಳು ॥ ೩೬ ॥

ನವವಿಧಕೋಟೆ ಮಾನಸ್ತಂಭ ಖಾತಿಕೆ । ವಿವಿಧವನಗಳ ನಾರಿಯರು ॥
ಕಿವಿಯಾರೆ ಕೇಳಿದ್ದು ಕಣ್ಣಾರೆ ಕಾಣುತು । ತ್ಸವಬಡುತೆಯ್ದಿದರಾಗ ॥ ೩೭ ॥

ತುಂಬಿದ್ದರೆಲ್ಲರು ತೊಲಗೆ ಜಿನಾಸ್ಥಾನ । ವೆಂಬುದು ಭಿನ್ನಗೇಕಿಹುದು ॥
ಪೊಂಬಸುರನ ಪೆಣ್ಣುಗಂಡಿಂದ ತೆಕ್ಕನೆ । ತುಂಬಿತು ಕಿರಿದೆ ಕುಟುಂಬಾ ॥ ೩೮ ॥

ಸುರರ ನಗುವ ಪುರುಷರು ಸುರವನಿತೆಯ । ರಿರವ ನಗುವ ವನಿತೆಯರು ॥
ಪರಿಪೂರ್ಣವಾಗೆ ದೇವನ ಸಭೆ ಬೇರೊಂದು । ಪರಿಯ ಸಿಂಗರವೆತ್ತುದೊಡನೆ ॥ ೩೯ ॥

ಸ್ವರ್ಗದ ಪೆಣ್ಗಂಡುಗೂಡಿ ದೇವೇಂದ್ರನು । ಸ್ವರ್ಗದಿಂ ಬಪ್ಪನೊಯೆಂಬ ॥
ಮಾರ್ಗದೊಳೆಲ್ಲರುವೆರಸಿ ಚಕ್ರೇಶ ನಿ । ರರ್ಗಳವೆನೆ ಬರುತಿರ್ದಾ ॥ ೪೦ ॥

ಅಳಿಯಂದಿರಣುಗರು ಮೈದುನರರುಹನ । ಬಳಿಕ ಕಾಣಲ್ಬಹುದೆಂದು ॥
ನಿಲಿಸಿ ಹೊರಗೆ ಸರ್ವಸತಿಯರುವೆರಸಿ ಮುಂ । ದೊಳಹೊಕ್ಕನಾ ಜಾಣರೊಡೆಯಾ ॥ ೪೧ ॥
ಕಾಣುತ ಜಯಜಯಯೆನುತ ಕಾಣ್ಕೆಯನಿಕ್ಕಿ । ಕ್ಷೋಣೀಶ ಸಾಷ್ಟಾಂಗವೆರಗಿ ॥
ಪ್ರಾಣೇಶ ವೃಷಭೇಶ ಪರಮಾತ್ಮಯೆನುತ ಬಿ । ನ್ನಾಣದಿಂದೊಡನೆದ್ದು ನಿಂದಾ ॥ ೪೨ ॥
ಸೊಸೆಯರು ಪುತ್ರಿಯರನುಜೆಯರರಸಿಯು । ರೊಸೆದು ಕಾಣಿಕೆಯಿಕ್ಕಿ ಜಿನಗೆ ॥
ಸಸಿನೆರಗಿದರು ಭೂಮಿಯ ಮೇಲೆ ಹಬ್ಬಿದ । ಪೊಸಲತೆಗಳೊಯೆಂಬ ತೆರದಿ ॥ ೪೩ ॥
ಕೂಡಲ್ಲರೆದ್ದು ಕೈಗಳ ಮುಗಿದುರೆ ಸುತ್ತಿ । ನೋಡುತ ದೇವನ ಸೊಬಗಾ ॥
ನೋಡಿ ಬಾಷ್ಪಗಳೊಗೆ ರೋಮಾಂಚ ನೆಗೆಯಲೋ । ಲಾಡಿದರಾನಂದದಲ್ಲಿ ॥ ೪೪ ॥
ಜಲಜವ ಸೋಂಕದ ದೇವನಿರವ ಹೊಳೆ । ಹೊಳೆದು ನೋಳ್ಪರು ಚೋದ್ಯಬಟ್ಟು ॥
ಬಲಗೊಳುತಾ ನಾಲ್ಕುದೆಸೆಯ ಮೊಗವ ನೋಡಿ । ತಲೆದೂಗುತರ್ತಿಮಾಡುವರು ॥ ೪೫ ॥
ನಿಡುಜೆಡೆಗಳ ಚೆಲ್ವ ನೋಡಿ ಚಂದ್ರಾರ್ಕರ । ಪಡೆಗೆ ಹೆಚ್ಚಾದಂಗಪ್ರಭೆಯಾ ॥
ನಡೆನೋಡಿ ನೋಡಿ ನಾರಿಯರೆಲ್ಲರಾನಂದ । ಬಡುತಿರ್ದರೇನ ಬಣ್ಣಿಪೆನು ॥ ೪೬ ॥
ಭದ್ರಾಕಾರವನೊಮ್ಮೆ ಪದ್ಮಾಸನ । ಮುದ್ರೆಯೊಳಿರ್ಪುದನೊಮ್ಮೆ ॥
ಸದ್ರುಚಿಯೊಳು ನೋಡಿ ನೋಡಿ ಸಂತೋಷಸ । ಮುದ್ರದೊಳ್ಮುಳುಗಿ ಮೂಡಿದರು ॥ ೪೭ ॥
ಸುರರು ಪೋಪಾಗ ಪ್ರೇರಿಸಿ ಪೋದ ವಿದ್ಯಾಳಿ । ಪೊರೆಯೆ ಬೀಸುವ ಚಮರಗಳ ॥
ಆರಲ ಮಳೆಯ ಬೆಳುಗೊಡೆಯ ಭಾಮಂಡಲ । ದಿರವ ಕಂಡರ್ತಿಮಾಡಿದರು ॥ ೪೮ ॥
ವಿರಚಿಸಿ ಪ್ರತಿಮೆಯ ಕಾಣ್ಬರಲ್ಲದೆ ಮುನ್ನ । ಪರಮನ ಕಂಡವರಲ್ಲ ॥
ನರನೊಬ್ಬನಿದ್ದಂತುಟದ್ದು ಸ್ವರ್ಗವ ಕಂಡ । ಪರಿಯೊಳಿದ್ದರು ಬೆರಗಾಗಿ ॥ ೪೯ ॥
ದೇವನಿಗವರಲ್ಲಿ ಮಮಕಾರವಿಲ್ಲವ । ರ್ಮಾವನಜ್ಜನು ತಂದೆಯೆಂದು ॥
ತಾವಾಶೆಗೆಯ್ವರು ಶಿಶುಗಳು ಚಂದ್ರನ । ಮಾವನೆಂದರ್ತಿಮಾಳ್ಪಂತೆ ॥ ೫೦ ॥
ಗಂಗಾದೇವಿಯು ಸಿಂಧುದೇವಿಯು ಚಕ್ರಿ । ತಂಗಿಯರೆಂದುದಿಂದೆಮಗೆ ॥
ತುಂಗಸಂಪದವಿತ್ತುದೆಂದಯ್ಯಗಾಗಂತ । ರಂಗದೊಳ್ನಲಿದೆರಗಿದರು ॥ ೫೧ ॥
ಜಿನಪನ ಸುತ್ತಲಿಪ್ಪತ್ತುಸಾಸಿರ್ವರು । ಜಿನರಿದ್ದರವರ್ಗೆ ನಾರಿಯರು ॥
ವಿನಮಿಸುತಿರೆ ಕಚ್ಛಜಿನನ ಮಹಾಕಚ್ಛ । ಜಿನನ ಕಂಡಳು ಪಟ್ಟದರಸಿ ॥ ೫೨ ॥
ಮನವುಕ್ಕಿ ನಮಿಸಿದಳದ ಕಂಡು ನಮಿರಾಜ । ವಿನಮಿರಾಜರ ಕುಮರಿಯರು ॥
ಘನಭಕ್ತಿಗೈದರು ಪಿತನಜ್ಜನೆಂದೊಂದು । ನೆನಹನೇನೆಂಬೆ ನೋಡವರ ॥ ೫೩ ॥
ಭುಜಬಲೀಶ್ವರನನನಂತವೀರ್ಯೇಶನ । ಗಜಗಮನೆಯರರಸಿದರು ॥
ರಜತಶೈಲದೊಳಿಲ್ಲ ಭೂತಳದತ್ತೈದಿ । ನಿಜವಿಹಾರದೊಳಿದ್ದರವರು ॥ ೫೪ ॥

ರತಿಕಂತಿ ಬ್ರಾಹ್ಮಿಲಾಕಂತಿಯಿಚ್ಛಾಕಂತಿ । ನುತಸೌಂದರಾಕಂತಿಯರನು ॥
ಸತಿಯರರಸಿದರು ಗಣದೊಡನವರನ್ಯ । ಕ್ಷಿತಿಗೆ ಹೋಗಿರ್ದರಲ್ಲಿಲ್ಲ ॥ ೫೫ ॥

ಉಳಿದ ತಾಪಸರಿಗೆರಗಿ ದೇವನಿದಿರ್ಗೆಯ್ದಿ । ತಳೆದ ಗೂಢವ್ರತವೆಮಗೆ ॥
ಫಲವಿತ್ತವಿಂದಿಗೆ ಸಂಪೂರ್ಣವೆಂದು ಪೆಂ । ಗಳು ನಮಿಸಿದರಾದಿಜಿನಗೆ ॥ ೫೬ ॥

ವಿಸ್ತಾರದಲಿ ಪೂಜೆಗೈವೊಡೀಗಾಗ ದೇ । ವಸ್ತೋತ್ರಮು ಬಹುದೆಂಬ ಶಂಕೆ ॥
ಪ್ರಸ್ತುತಾರ್ಚನೆಯ ಸಂಕಲ್ಪಗೆಯ್ಸಿದನು ಸ । ಮಸ್ತನಾರಿಯರಿಂದ ನೃಪತಿ ॥ ೫೭ ॥

ಬಳಿಕೆಲೆ ಸ್ವಾಮಿ ನಾರಿಯರಲ್ಲಿ ನಿರ್ಭವ್ಯ । ಕುಲವೆಷ್ಟು ಭವ್ಯಾಳಿಯೆಷ್ಟು ॥
ತಿಳುಹಬೇಕೆಂದು ಚಕ್ರೇಶ್ವರ ಬೆಸಗೊಳೆ । ಕಲಿಲಾರಿ ನುಡಿದನಿಂತೆಂದು ॥ ೫೮ ॥

ಭವ್ಯ ಕೇಳೊಬ್ಬರು ನಿರ್ಭವ್ಯರಲ್ಲ ಸು । ಭವ್ಯಜೀವಿಗಳೆ ರಾಣಿಯರು ॥
ಅವ್ಯಯಸಿದ್ಧಿಯ ಕ್ರಮದೊಳೆಯ್ದುವರು ಚಿ । ದ್ದ್ರವ್ಯಾನುಮತಿಗಳೈಯೆಂದಾ ॥ ೫೯ ॥

ಈ ಜನ್ಮವೊಂದಲ್ಲದಿವರಿಗೆ ಮುಂದಿನ್ನು । ಸ್ತ್ರೀಜನ್ಮವಿಲ್ಲ ಗಂಡಾಗಿ ॥
ರಾಜಿಸುತಿರ್ದು ಕೈವಲ್ಯವೆಯ್ದುವರೆಂದು । ಶ್ರೀಜಿನೇಶ್ವರ ನಿರೂಪಿಸಿದಾ ॥ ೬೦ ॥

ಅನುಜೆಯರಣುಗೆಯರಣುಗರು ಸೊಸೆಯರೆ । ಲ್ಲನುದಿನ ನಿನ್ನ ಕೂಡಾಡಿ ॥
ವಿನುತಾತ್ಮರುಚಿಗಳೈ ಭವ್ಯರೈ ಭವ್ಯಯೆಂ । ದನು ಮಹಾದೇವನಾತನೊಳು ॥ ೬೧ ॥

ಆನಂದಬಟ್ಟನಾ ಪೆಂಗಳರ್ತಿಸಿದರಿ । ನ್ನೀ ನೆಲದೊಳು ಜೋಲಿ ಸಾಕು ॥
ಜೈನೇಂದ್ರಗೆರಗಿರೆಂದೆನಲು ಸಾಷ್ಟಾಂಗದಿಂ । ದಾನತಿಗೆಯ್ದಿದ್ದರೆಲ್ಲ ॥ ೬೨ ॥

ಲಲನೆಯರೆಲ್ಲರ ಕಡೆಗೆ ಸಾಗಿಸಿ ಮುನ್ನ । ನಿಲಿಸಿದವರ ಬರಿಸಿದನು ॥
ಅಳಿಯಂದಿರಣುಗರು ಮೈದುನರೆರಗಿದ । ರೆಳಸಿ ಕಾಣಿಕೆಯಿಕ್ಕಿ ಜಿನಗೆ ॥ ೬೩ ॥

ಸ್ತುತಿಮಾಡಿದರು ಬಲಗೊಂಡರೆಲ್ಲರು ನಾವು । ಕೃತಕೃತ್ಯರಾದೆವೆಂದೆನಲು ॥
ಅತಿವಿಶಾಲದಿ ಮತ್ತೆ ಬಂದೊಮ್ಮೆ ಪೂಜೆಯ । ರತಿಸಿರೈ ಸಾಕೆಂದಿಗೆಂದಾ ॥ ೬೪ ॥

ಜಿನಗವರೆರಗಿ ಬೀಳ್ಕೊಂಡರು ಕೂಡೆ ಮೈ । ದುನರಳಿಯಂದಿರು ಸುತರು ॥
ವನಿತೆಯರ್ಕಳ ಪೌಜ ಸಾಗಿಸಿಕೊಂಡು ಚಿ । ಕ್ಕನೆ ಪುರಕೆಯ್ದಿರೈಯೆಂದಾ ॥ ೬೫ ॥

ಭೂರಿವಿಮಾನದೊಳಬಲೆಯರ್ತೆರಳೆ ಕೂ । ಡಾರೈಕೆವಿಡಿದವರತ್ತ ॥
ದಾರಿದೆಗೆದರಲ್ಲಿ ಚಕ್ರಿಯಿದ್ದನು ಗಣ । ಸಾರಲೀಕ್ಷಿಸಿ ಪೋಪೆನೆಂದು ॥ ೬೬ ॥

ಹೋದ ಮಹಾಗಣ ತಿರುಗಿತಾ ಕಲ್ಯಾಣ । ವಾದುದು ಲೇಸು ಲೇಸೆನುತ ॥
ಆದ ಕಲ್ಯಾಣ ತಾನೇನೆಂದು ಚಕ್ರೇಶ । ನಾ ದೇವಗಣವ ಕೇಳಿಬನು ॥ ೬೭ ॥

ಗಂಗೆಯು ತಡಿಯೊಳನಂತವೀರ್ಯಸ್ವಾಮಿ । ಹಿಂಗಿಸಿ ಮೂರುದೇಹವನು ॥
ಮಂಗಲಮುಕ್ತಿಗೆಯ್ದಿದನೆಂದು ಬಂದ ಜ । ನಂಗಳು ಪೇಳ್ದರಾ ನೃಪಗೆ ॥ ೬೮ ॥

ಜಿನಸಭೆಯೊಳು ಶೋಕ ಹುಟ್ಟಿದ ಕಾರಣ । ಜನನಾಥ ಸ್ಥೈರಿಸಿ ನಿಂದಾ ॥
ಅನುಜ ಮುಕ್ತಿಗೆ ಸಂದನೆಂಬಾಗ ಮೂರ್ಛೆಹೋ । ಗನೆ ಬೇರೆ ನೆಲದಿ ಕೇಳಿದರೆ ॥ ೬೯ ॥
ಅಗಲಲ್ಲಿರ್ದ ಯಶಸ್ವತೀಕಂತಿಯು । ರೀಗೆತ್ತಲೆಯ್ದಿದರೆಂದಾ ॥
ಸಾಗಿದಳ್ಭುಜಬಲೀಶನ ಗಂಧಕುಟಿಗೆಂದು । ಯೋಗಿಗಳ್ನುಡಿದರಾ ನೃಪಗೆ ॥ ೭೦ ॥
ಏಕಿಷ್ಟು ಬೇಗ ಮುಕ್ತಿಗೆ ಸಂದನೆಂದಾಗ । ಭೂಕಾಂತ ಕೇಳ್ದನಯ್ಯನೊಳು ॥
ಈ ಕಾಲಕಾತನಲ್ಪಾಯುವೈ ಹೋಗಲೆಂ । ದಾ ಕಾಲಕರ್ಮಾರಿ ನುಡಿದಾ ॥ ೭೧ ॥

ನಮಿಸಿ ಬೀಳ್ಕೊಂಡನೊಯ್ಯನೆ ಪೊರವಟ್ಟನಾ । ಸಮವಸರಣವನಾ ರಾಯ ॥
ವಿಮಲಮಿತ್ರರು ಮಂತ್ರಿವೆರಸಿ ಬರ್ಪಾಗ ವಿ । ಕ್ರಮಿ ಕಂಡನಲ್ಲಿ ಮೇಘೇಶಾ ॥ ೭೨ ॥
ದೇವ ಬಿನ್ನಹವೆಂದನೇನುಸುರೆನಲಿಂದು । ದೇವರ್ಕಳುಪಸರ್ಗವಿಡಲು ॥
ಈ ವಿಘ್ನ ತೊಲಗೆ ದೀಕ್ಷೆಯ ಕೊಂಬೆನೆಂದು ವ್ರ । ತಾವಾಪ್ತಿಗೈದೆ ನಾನೆಂದಾ ॥ ೭೩ ॥
ತೊಲಗಿತಾ ವಿಘ್ನ ದೀಕ್ಷೆಗೆ ಕಳುಹೆಂದಂಘ್ರಿ । ನಳಿನದೊಳ್ಪಣೆಯಿಟ್ಟನವನು ॥
ತಲೆವಿಡಿದೆತ್ತಿದನಹುದವ ವ್ರತಗೈದ । ಬಳಿಕಿನ್ನು ತಡೆವ ಮಾತಿಲ್ಲ ॥ ೭೪ ॥
ವಿಜಯಜಯಂತರಿರ್ದರೆ ಸಾಕು ಹೋಗೆಂದ । ವಿಜಯಜಯಂತರ ನಾನು ॥
ನಿಜಪದವಿಯೊಳಿರಿಸುವೆನಹುದವರದ । ತ್ಯಜಿಸಿದರೆಂತೆಂದನವನು ॥ ೭೫ ॥
ಅವರೊಲ್ಲದಿರೆ ಮತ್ತೆ ನೀನಾರನಿರಿಸಿದೆ । ಅವರೆ ನನ್ನವರು ಹೋಗೆಂದಾ ॥
ಯುವನಲ್ಲವೈದಾರುವರುಷದ ಪುತ್ರನುಂ । ಟವನ ರಕ್ಷಿಸು ಸ್ವಾಮಿಯೆಂದಾ ॥ ೭೬ ॥
ಬಾಲಕನಾದರೇನವ ನೆರೆಯನೆ ನಿನ್ನ । ಪಾಲನೆಯಿಂದ ಹೆಚ್ಚಾಗಿ ॥
ಪಾಲಿಪೆನ್ನೈ ಸುಮ್ಮನಿರಿಸಿ ಹೋಗೆನೆ ಲೀಲೆ । ದಾಳಿದನಾ ಮೇಘರಾಜಾ ॥ ೭೭ ॥
ಅರುಹನ ಕಂಡೂರ್ಗೆ ಪೋಗಿ ಮತ್ತೀ ದೇವ । ಗಿರಿಗೆಯ್ದಿ ಮುನಿಯಪ್ಪೆನೆಂದು ॥
ಶಿರಮಣಿದವನತ್ತ ಪೋದನಿತ್ತಾ ಚಕ್ರ । ಧರನೆಯ್ದುತಿರ್ದನೋಜೆಯೊಳು ॥ ೭೮ ॥

ಬಂದಯೋಧ್ಯೆಯ ಪೊಕ್ಕು ಮಂತ್ರಿಮಿತ್ರರ ನೋಟ । ದಿಂದ ಬೀಳ್ಕೊಡುತ ರಾಜೇಂದ್ರಾ ॥
ಮಂದಿರದೊಳಪೊಕ್ಕು ತನ್ನಯ ಬಹುಪರಿ । ಸ್ಪಂದದೊಳಿರ್ದನೇನೆಂಬೆ ॥ ೭೯ ॥
ಬಸದಿಯುತ್ಸಾಹವ ಸ್ವಾಮಿಯು ಕಂಡುದ । ಬಿಸವಂದಬಟ್ಟು ರಾಣಿಯರು ॥
ಕೊಸರಿ ಕೊಸರಿ ನುಡಿದಾಡಲಂತವರ ಸಂ । ತಸಗಂಡು ನಲವೇರುತಿರ್ದಾ ॥ ೮೦ ॥
ಏಕಾಂತ ತಮಗೆ ಸಂದಿಸಿದುದ ಜಿನನ ದಿ । ವ್ಯಾಕಾರಕಾಂತಿಶಾಂತಿಯನು ॥
ಕೋಕನದವ ಸೋಂಕದಿರ್ದುದ ನುಡಿನುಡಿ । ದಾ ಕಾಂತೆಯರು ಹಿಗ್ಗುತಿಹರು ॥ ೮೧ ॥
ಕಂಡಿರಲ್ಲಕ್ಕ ನಿಮ್ಮಯ್ಯನನೆಂದೋಜೆ । ಗೊಂಡು ತಂಗಿಯರೊಳು ನುಡಿದಾ ।
ಕಂಡೆವಣ್ಣಾಜಿ ನಿನ್ನಿಂದಿಂದೆ ಮುಕ್ತಿಯ । ಕಂಡೆವಿನ್ನೇನೆಂದರವರು ॥ ೮೨ ॥

ಪೂತೆಮ್ಮ ಪುಣ್ಯವೆ ಜಿನಸಿದ್ಧ ನಿನ್ನನು । ಜಾತೆಯರೆಂದು ನೀನೊಂದು ॥
ಮಾತನಾಡಿದರೆಮಗಿಷ್ಟಾಯ್ತು ಸಿರಿಯೆಂದು । ಕೌತುಕಬಟ್ಟು ನುಡಿದರು ॥ ೮೩ ॥

ಪ್ರಾಯಾಸಬಟ್ಟೊಂದುಬಸುರಿಂದ ಬರಬೇಕೆ । ತಾಯೆಂದು ತಂಗಿಯರೆಂದು ॥
ಬಾಯಾರೆ ನುಡಿದರೆ ಸಾಲದೆಯೆಂದನಾ । ರಾಯ ತನ್ನನುಜೆಯರೊಡನೆ ॥ ೮೪ ॥

ಬೀರರಮನೆಯಿತ್ತು ತಂಗಿಯರನು ನಲ್ಮೆ । ಕಾರಿಕೆವೆತ್ತ ಮೈದುನರಾ ॥
ಮೂರುಹೊತ್ತಾರಯ್ದುವತೊಲಿದು ಮನ್ನಿಸಿದನು । ಮೂರುತಿಂಗಳು ಚಕ್ರಧರನು ॥ ೮೫ ॥

ಮತ್ತು ಕೆಲವುದಿನವಿರಲೆಂದು ನೆನೆದನಾ । ಬಿತ್ತಿಗರರು ಪೋಪೆವೆಂದು ॥
ಬಿತ್ತರದಿಂದ ಭಾವನಿಗುಡುಗೊರೆಯ ತಾ । ವಿತ್ತು ಪಯಣವಾದರೊಡನೆ ॥ ೮೬ ॥

ಗಂಗಾದೇವ ಬಾರೆಲೆ ಸಿಂಧುದೇವ ಸು । ಸಂಗರೈ ನೀವೆಂದು ನಗುತ ॥
ಕಂಗಳು ತಣಿಯೆ ಮನ್ನಣೆಯಿತ್ತು ರಾಯನಾ । ಲಿಂಗಿಸಿಕೊಂಡು ಬೀಳ್ಕೊಟ್ಟ ॥ ೮೭ ॥

ತಂಗಿಯರಿಗೆ ಸಾಕುಸಾಕೆನೆ ಕೊಟ್ಟನಾ । ತಂಗಿಯರಿಟ್ಟು ಸೇಸೆಯನು ॥
ಅಂಗನೆಯರ್ಕಳ ಬೀಳ್ಕೊಂಡು ಪೋದರು । ತುಂಗಲೀಲೆಯೊಳು ತಮ್ಮೂರ್ಗೆ ॥ ೮೮ ॥

ತನುಜೆಯರೆಲ್ಲರಿಗಳಿಯಂದಿರೆಲ್ಲರ್ಗೆ । ಘನತರದುಡುಗೊರೆಯಿತ್ತು ॥
ಅನುರಾಗದಿಂದ ಬೀಳ್ಕೊಟ್ಟನಾ ಚಕ್ರಿಯು । ಮನದ ವಿಲಾಸವಾಗಿರ್ಪಂಟು ॥ ೮೯ ॥

ಪೌದನಪುರದ ಕುಮಾರರ್ಗೆ ಸೊಸೆಯರಿ । ಗಾದರದಿಂದ ಬುದ್ಧಿಯನು ॥
ವೇದಿಸಿ ಪಿರಿದು ಮನ್ನಣೆಯಿತ್ತು ಬೀಳ್ಕೊಟ್ಟ । ನಾದಿಚಕ್ರಿಯ ಪೋಲ್ವರಾರು ॥ ೯೦ ॥

ಮಿಕ್ಕ ತಮ್ಮಂದಿರ ಪುತ್ರರ್ಗೆ ಸೊಸೆಯರಿ । ಗಕ್ಕರಿಂದೊರೆದು ಬುದ್ಧಿಯನು ॥
ಚೊಕ್ಕಮನ್ನಣೆಯಿತ್ತು ಬೀಳ್ಕೊಟ್ಟನವನ ಭಾ । ವಕ್ಕೆ ಭಾಗ್ಯಕೆ ಸರಿಯುಂಟೆ ॥ ೯೧ ॥

ದೂರಸ್ಥರೆಲ್ಲರ ಕಳುಹಿ ಪೆಂಡಿರಿಗೆ ಕು । ಮಾರರ್ಗೆ ಸೊಸೆಯರ್ಗೆ ನಿಚ್ಚ ॥
ಸಾರಸುಖವ ಕರೆವುತ ತಾನು ಪರಮಸಂ । ಸಾರಸುಖಾಂಗದೊಳಿರ್ದಾ ॥ ೯೨ ॥

ತನುಜರ ದೀಕ್ಷಾಪೂರ್ವಕವಾಗಿ ಮುಂದೆ ಜು । ಮ್ಮನೆ ಮೋಕ್ಷಬೀಜ ಮೊಳೆವುದು ॥
ಮನದೊಳಿಟ್ಟಿಹುದು ಕೋವಿದರದನಿಲ್ಲಿಗೆ । **ಜಿನವಾಸನಿರ್ಮಿತಸಂಧಿ** ॥ ೯೩ ॥

ಪ್ರಜೆಗಳರ್ತಿಸೆ ಪರಿವಾರವರ್ತಿಸೆ ಮಹೀ । ಭುಜರರ್ತಿವಡೆ ಭರತೇಶಾ ॥
ನಿಜಭೋಗಯೋಗದೊಳಿರ್ದನಿಂತಿದು ಯೋಗ । ವಿಜಯ ತೃತೀಯ ಕಲ್ಯಾಣಾ ॥ ೯೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ಸೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೬ ॥

ಯೋಗವಾಗಲಿ ಭೋಗವಾಗಲಿ ನಿನ್ನ ಸಂ । ಯೋಗವಾದರೆ ತಾನೆ ಮುಕ್ತಿ ॥
ಶ್ರೀಗುರುನಾಥ ನನ್ನದೆಯೊಳಿರಲಿ ಮಹಾ । ಭೋಗಿ ಚಿದಂಬರಪುರುಷಾ ॥ ೯೭ ॥

ಜಿನವಾಸನಿರ್ಮಿತಸಂಧಿ ಸಂಪೂರ್ಣಂ



॥ ತೃತೀಯಕಲ್ಯಾಣಂ ಸಮಾಪ್ತಂ ॥

# ಮೋಕ್ಷವಿಜಯ

## ಸಾಧನೆಯ ಸಂಧಿ

ಪರಮಪರಂಜ್ಯೋತಿ ಕೋಟಿಚಂದ್ರಾದಿತ್ಯ । ಕಿರಣಾ ಸುಜ್ಞಾನಪ್ರಕಾಶಾ ॥
ಸುರರ ಮಕುಟಮಣಿರಂಜಿತಚರಣಾಬ್ಜ । ಶರಣಾಗು ಪ್ರಥಮಜಿನೇಶಾ ॥ ೧ ॥

ಸಾಕ್ಷಾನ್ಮೋಕ್ಷಕಾರಣನೆ ಸರ್ವಜ್ಞನೆ । ಮೋಕ್ಷಗಾಮಿಗಳ ಮೋಹನನೆ ॥
ಮೋಕ್ಷವಿಜಯನೆ ಸನ್ಮತಿದೋರು ತ್ರಿಭುವನ । ಚಕ್ಷು ನಿರಂಜನಸಿದ್ಧಾ ॥ ೨ ॥

ಜಿನವಾಸರಚನೆ ಜಿನೇಂದ್ರಪೂಜಾರ್ಚನೆ । ಘನವೆನಲೆಸಗಿ ಚಕ್ರೇಶಾ ॥
ತನಯರ ನೋಟ ಪೆಂಡಿರ ಕೂಟದಿಂದ ಮೋ । ದಿನಿಯನಾಳುತ ಸುಖವಿರ್ದಾ ॥ ೩ ॥

ಹಲಬರು ಸುಕುಮಾರರವರು ತಮ್ಮೊಳು ತಾವು । ಕೆಲಬರೊಂದೊಂದು ಪಣ್ಣೆಯಲಿ ॥
ನಲಿದಾಡುತಿಹರಾಟಪಾಟದಿ ಭೂರಿಭೂ । ತಳದೊಡೆಯನ ಮಕ್ಕಳಲ್ತೆ ॥ ೪ ॥

ಒಂದುದಿನದೊಳಾದಿಚಕ್ರವರ್ತಿಯ ನೂರು । ಮಂದಿಕುಮಾರರೊಂದಾಗಿ ॥
ಬಂದೊಂದುತೊರೆಯ ತಡಿಯು ಮಳಲೊಳಗಾ । ನಂದಿಸುತಿರ್ದರೇನೆಂಬೆ ॥ ೫ ॥

ಹದಿನಾಲ್ಕು ಹದಿನೈದು ಹದಿನಾರು ಹದಿನೇಳು । ಹದಿನೆಂಟುಪ್ರಾಯವಾದವರು ॥
ಮದುವೆಯಾದವರಲ್ಲ ಗರುಡಿಯೋದಿನ ಮಠ । ದೊದವಿನೊಳಾಡುತಿರ್ದವರು ॥ ೬ ॥

ರವಿಕೀರ್ತಿರಾಜನು ರತಿವೀರ್ಯರಾಜನೊ । ಪ್ಪುವ ಶತ್ರುವೀರ್ಯರಾಜೇಂದ್ರಾ ॥
ದಿವಿಚಂದ್ರರಾಜ ಮಹಾಜಯರಾಜ ಮಾ । ಧವಚಂದ್ರರಾಜನೆಂಬವರು ॥ ೭ ॥

ಸುಜಯರಾಜನು ಮತ್ತರಿಂಜಯರಾಜನು । ವಿಜಯರಾಜನು ಕಾಂತರಾಜಾ ॥
ಅಜಿತಂಜಯರಾಜ ವೀರಂಜಯರಾಜ । ಗಜಸಿಂಹರಾಜನೆಂಬವರು ॥ ೮ ॥

ಇವರು ಮುಂತಾಗಿ ಕುಮಾರರು ನೂರ್ವರು । ದಿವಿಜರ ನಗುವ ಚೆನ್ನಿಗರು ॥
ವಿವಿಧಶಾಸ್ತ್ರದೊಳು ಸಾಧನೆಗೀತದೊಳಗನು । ಭವಿಗಳಾಟಕೆ ಬಂದರಂದು ॥ ೯ ॥

ಗಿಂಡಿ ಹಡಪ ಕುಂಚ ಸಂಪುಟ ಪುಸ್ತಕ । ಖಂಡೆಯ ಕಿರಿಸೆ ಕಠಾರಿ ॥
ದಂಡಿಗೆ ವೀಣೆಯ ಪಿಡಿದರಸುಗಳೊತ್ತು । ಗೊಂಡಿರ್ದರೂಳಿಗದವರು ॥ ೧೦ ॥

ತೊರೆಯ ತಡಿಯ ಮಳಲೊಳ್ಳಿತಾಗಿದೆ ನೆಲ । ತೆರಪಾದುದಿಲ್ಲಿ ಸಾಧನೆಯಾ ॥
ನೆರೆಯಬಹುದು ಸ್ವಾಮಿಯೆಂದಿಂತು ಪಿರಿಯರ್ಗೆ । ಕಿರಿಯರು ಬಿನ್ನವಿಸಿದರು ॥ ೧೧ ॥

ಅಹುದೆ ಸಾಹಸಿಗಳಿರಾ ನಿಮ್ಮ ಮನಸಿನು । ತ್ಸಹವ ನಾವಲ್ಲೆನಲೇಕೆ ॥
ಬಹೆವು ಸಾಧನೆಮಾಳ್ಪವೆಂದು ತಮ್ಮಂದಿರ । ಮಹಿಮೆಗಣ್ಣಂದಿರೊಪ್ಪಿದರು ॥ ೧೨ ॥

ಚಲ್ಲಣ ಹೊನ್ನೊಡ್ಡಿಯಾಣ ಮೇಲ್ಬಿಗುಹಿನ । ಕುಲ್ಲಾಯಿ ಕುಂಕುಮತಿಲಕಾ ॥
ಗೆಲ್ಲದಿ ಪಿಡಿದ ತಾವಡಗೋಲ್ಗಳಿಂದತಿ । ಮಲ್ಲರೆದ್ದರು ಸಾಧನೆಗೆ ॥ ೧೩ ॥

ಮುರಿದುಟ್ಟ ಕಾಸೆ ಚಿಮ್ಮುರಿ ಬಿಟ್ಟ ಜಡೆ ಪಾದ । ಸರವಿಟ್ಟ ಸಾದಿನ ಬೊಟ್ಟು ॥
ಕರದಲಿ ಸಾಣ ಖಂಡೆಯವೊಪ್ಪೆ ಕೆಲರು ಸಿಂ । ಗರಿಸಿ ಸಾಧನೆಗೆದ್ದರವರು ॥ ೧೪ ॥

ಕಿರುನಡು ಬಡಬಟ್ಟ ಪೆಂಚಕ ನುಣ್ದೊಡೆ । ಮಿರುಪ ಕಾಲ್ಮಾವುಗೆವಜ್ಜೆ ॥
ತೆರಪಾದೆದೆ ನಿಡುದೋಳ್ಮುದ್ದು ಮೊಗ ಕಡೆ । ದೆರೆದಂತೆ ಮೆರೆದರಾಯೆದೊಳು ॥ ೧೫ ॥

ಕೊರಳು ಕಂಕುಳು ಬೆನ್ನು ತೊಡೆ ತೋಳ ಸಂದಿನೊ । ಳುರದಲ್ಲಿ ಪೊಕ್ಕುಳೆಡೆಯೊಳು ॥
ಪೊರೆದ ಕಮ್ಮೆಣ್ಣೆಗೆ ತುಂಬಿಗಳೆರಗಿ ಝೇಂ । ಕರಿಸಿ ಪಾಡಿದುವಾಗ ನೃಪರಾ ॥ ೧೬ ॥

ಕೂಡಡಿಗಡಿಗೆಯ್ದಿ ಶುಚಿವೆತ್ತ ಹಡಪಿಗ । ರೂಡುವೆಲೆಯ ಘಳಿಗೆಗಳಾ ॥
ಪಾಡರಿದರೆಗಚ್ಚಿಕೊಳುತ ಬಂದುಗೆಗೋಲ । ನೀಡುತ ತಿರುಹುತೆಯ್ದಿದರು ॥ ೧೭ ॥

ಸಿದ್ಧರೆ ಗತಿ ಜಿನಶರಣು ನಿರಂಜನ । ಸಿದ್ಧಂ ನಮೊಯೆನುತೆರಗಿ ॥
ಉದ್ದದ ತಿಟ್ಟಿಂದ ತೊರೆಯ ಮಳಲಿಗೆ ಸ । ನ್ನದ್ಧದೊಳವರು ನೆಗೆದರು ॥ ೧೮ ॥

ಗರುಡನಂತಾಕಾಶಕೆ ಹಾರಿ ಮಳಲಿಗೊ । ಯ್ಯರದೊಳವರು ಕುಪ್ಪುವಾಗ ॥
ಸುರಲೋಕದಮರಕುಮಾರರು ಲಂಘಿಸಿ । ಧರೆಗೆ ಬಹಂತೆ ತೋರಿದರು ॥ ೧೯ ॥

ತಮ್ಮೊಳು ತಾವೆರಡೊಡ್ಡಾಗಿ ನಿಂದಣ್ಣ । ತಮ್ಮಂದಿರಂದು ಸಾಧನೆಗೆ ॥
ಸಮ್ಮುಖರಾದರು ಕಾಮ ಹಲವುರೂಪ । ನೊಮ್ಮೆ ಕೈಕೊಂಡು ನಿಂದಂತೆ ॥ ೨೦ ॥

ಮಿಂಚಿನಂತತ್ತಿತ್ತ ಹೊಳೆದಾಡಿ ಮಳಲಲ್ಲಿ । ಹಂಚಿಕೊಂಡೆರಡುಪಕ್ಕದಲಿ ॥
ಹೊಂಚಿರ್ವರಿರ್ವರೊಂದಾಗೆ ಸಾಧನೆಗೆ ಪ । ಳಂಚಿ ಪ್ರಾರಂಭಮಾಡಿದರು ॥ ೨೧ ॥

ಬಾಳೇಂದುಕೈದುವನುದ್ದಕಿಟ್ಟಾಂತು ಸು । ತ್ತಾಳಿಸಿ ಖಡ್ಗಖಡ್ಗದೊಳು ॥
ಏಳಡಿ ಹಿಂದುಮುಂದಕೆ ನಡೆದರು ಹಾಗೆ । ಕೋಲುವಿಡಿದು ನಮಿಸಿದರು ॥ ೨೨ ॥

ಹೋಳಾಗಿ ನಿಂದ ಮೈ ಮುಂದಕೊತ್ತಿದ ಬಲ । ಗಾಲು ಹಿಂದೆಗೆದೆಡಗಾಲು ॥
ಕೋಲುವಿಡಿದು ನೀಡಿದಾ ಬಲದೋಳಿಂದ । ಸಾಲೊಳಾಯತವಾದರವರು ॥ ೨೩ ॥

ಆದೆ ಸ್ವಾಮಿ ಚಿತ್ತವಿಸೆನುತ ಮುಂಡೆಗೆ ತೋರಿ । ಪದಕೆ ಬೀಸಿದನೊಬ್ಬ ತಮ್ಮಾ ॥
ಅದು ಹುಸಿಯೈ ವೀರಯೆನುತಣ್ಣ ಹಿಂದಕೆ । ಪದವ ತೆಗೆದು ಕೋಲೊಳಾಂತಾ ॥ ೨೪ ॥

ಸ್ವಾಮಿಯೆ ಹುಸಿಯದೀ ಘಾಯ ನಿಶ್ಚಯವೆಂದು । ಮೂವೆ ಮಸ್ತಕಕೆ ಬೀಸಿದನು ॥
ಆ ಮಾತು ಹುಸಿಯಲ್ಲ ಸಟೆಯಾಯಿತೆನುತವ । ನಾ ಮೂರುಸೊಳೊಡ್ಡಿ ಕಳೆದಾ ॥ ೨೫ ॥
ಚಿತ್ರೈಸು ಪ್ರಭುವೆ ಈ ಘಾಯ ನಿಶ್ಚಯವೆಂದು । ಮತ್ತೆ ಕಾಳ್ಗೆದೆಗೆ ನೀಡಿದನು ॥
ಅತ್ತಲಿರಲಿಯಿತ್ತ ಬರಲಾಗದೆಂದವ । ನೊತ್ತಿ ಕಾಲೊಳಗೆ ನೂಂಕಿದನು ॥ ೨೬ ॥
ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ । ಬಲಸನ್ನೆಯೆಡದ ಸನ್ನೆಯೊಳು ॥
ಅಲಗ ನೀಡಿದರಲಗಿನೊಳಾಂತು ನೆಗೆದು ಮೈ । ಹೊಳೆದು ತಪ್ಪಿಸಿದನೆಲ್ಲವನು ॥ ೨೭ ॥
ದೇವ ಚಿತ್ತೈಸು ನಿನ್ನೊಳಗದನ್ನನ ಕೈ । ಯಾವ ಚಳಕವೆಂಬುದೆನುತ ॥
ಹಾವಿನ ನಾಲಗೆವೊಲ್ಚಳಚಳನೆ ಕೈ । ತೀವಿ ನೂರಾರ ಚಿಮ್ಮಿಸಿದಾ ॥ ೨೮ ॥
ಆದುದೈ ಧೀರ ನೀನಲೆದ ಘಾಯಗಳೆಲ್ಲ । ಹೋದುವೈ ಹೊರಹೊರಗೆನುತ ॥
ಪಾದರಸಂಬೊಲು ಮೈಯೊಲೆದೊಲೆದೊಡ । ನಾದರ ಮಿಗೆ ತಪ್ಪಿಸಿದನು ॥ ೨೯ ॥
ಮೆಚ್ಚಿ ಕೈದುವ ಬಿಟ್ಟು ಕೊರಳ ಲುಳಿಯ ತೆಗೆ । ದಚ್ಚ ನಿವಾಳಿಯನಿಟ್ಟು ॥
ಅಚ್ಚರಿಯೆನುತ ಕಾಲ್ಗೆರಗಿದ ತಮ್ಮನ । ಹೆಚ್ಚಿ ತಕ್ಕೈಸಿದನಣ್ಣಾ ॥ ೩೦ ॥
ಕೆಲಬಲದಣ್ಣತಮ್ಮಂದಿರೆಲ್ಲರು ಮೆಚ್ಚಿ । ಕೆಲರಪ್ಪಿ ಕೆಲರು ಕಾಲ್ಗೆರಗಿ ॥
ಸಲುವುದಿಬ್ಬರಿಗಿಂತು ನಿಮಗೀ ಕೈಯ ಮೈಯ । ಚಳಕವೆಂದುರೆ ಹೊಗಳಿದರು ॥ ೩೧ ॥

ಮತ್ತೊರ್ವನಣ್ಣನು ತಮ್ಮನ ಮೇಲೆ ಕೋ । ಲೆತ್ತಿ ಹೊಯ್ದನು ಹೊಯ್ಯಲೊಡನೆ ॥
ಹೊತ್ತು ಕೋಲೊಳಗಾಂತು ನೆತ್ತಿಯೊಳಾಂತೆನು । ಚಿತ್ತವಿಸಣ್ಣಾಜಿಯೆಂದಾ ॥ ೩೨ ॥
ಆಗಲೈ ವಿಕ್ರಮ ನಿನಗೆ ನನ್ನೊಳು ಭಕ್ತಿ । ಯೋಗವುಂಟದ ಬಲ್ಲೆ ನಾನು ॥
ಈಗಲಾ ಭಕ್ತಿಯನಿರಿಸು ಶಕ್ತಿಯ ತೋರು । ತಾಗು ಹೊಯ್ಯೊಡ್ಡೆಂದು ನುಡಿದಾ ॥ ೩೩ ॥
ಎಂದರೆ ನೃಪತಿ ನಿನ್ನಾಜ್ಞೆಯ ಮೀರಲೇ । ಕೆಂದಿನ್ನು ಚಿತ್ತವಿಸೆನುತ ॥
ಒಂದ ಹೊಯ್ದರೆ ತಾನೊಡ್ಡಿಕೊಂಡೆರಡ ಹೊ । ಯ್ದಂದಣ್ಣಗಧಟುದೋರಿದನು ॥ ೩೪ ॥
ಭಲರೆ ಸಾಹಸಿಯೆನುತೆರಡುಘಾಯವನೊಡ್ಡಿ । ಕಳೆದು ಹೊಯ್ದನು ನಾಲ್ಕುಬಾರಿ ॥
ಅಲಗಿನಿಂದಾ ನಾಲ್ಕ ಕಳೆವುತಣ್ಣನ ಮೇಲೆ । ನಿಲುಕಿ ನೀಡಿದನೆಂಟು ಪೆಟ್ಟಾ ॥ ೩೫ ॥
ಜೀವುರೆ ಮಲ್ಲಯೆಂದೆಂಟುಘಾಯವ ತಪ್ಪಿ । ಯೋವದೆ ಹದಿನಾರ ಹೊಯ್ದಾ ॥
ಆ ವೀರನವನೊಡ್ಡಿ ಕಳೆವುತಣ್ಣನ ಮೇಲೆ । ಮೂವತ್ತೆರಡನು ಬೀಸಿದನು ॥ ೩೬ ॥
ಇಮ್ಮಡಿ ಹೊಯ್ಯಾಗಿ ಬರುತ ಬರುತ ಮತ್ತೆ । ಮುಮ್ಮಡಿ ನಾಲ್ಮಡಿಯಾಗಿ ॥
ತಮ್ಮೊಳು ಹೊಯ್ದಾಡಿ ಕಳೆದರಾ ಲೆಕ್ಕವ । ಬೊಮ್ಮನೆ ಬಲ್ಲ ನಾನರಿಯೆ ॥ ೩೭ ॥
ತಲೆಗೆ ಕಾಲಿಗೆ ಕೊರಳಿಗೆ ನಡುವಿಗೆಯೆಡ । ಬಲದ ಬದಿಗೆ ತೋಳುತೊಡೆಗೆ ॥
ಚಳಚಳನಣ್ಣಗೆ ನೀಡಿದನಲಗೊಂದೆ । ಹಲವುರೂಪಾದುದೆಂಬಂತೆ ॥ ೩೮ ॥

ಸುಳಿಗಾಳಿಯಂತೆ ವ್ಯೈಹೊಳೆದು ಖಡ್ಗದೊಳಾಂತು । ಕಳೆದು ತಮ್ಮನ ಹೊಯ್ದುಹೊಯ್ದು ॥
ಎಲೆ ವೀರವೊಡ್ಡೆಂದು ಹೊಯ್ದರೆ ನೀನೆಂತು । ಕಲಿಸಿದಂತೆನುತೊಡ್ಡಿಕೊಂಡಾ ॥ ೩೯ ॥
ಮೋಸದೊಳೊಂದನಾದರು ತಾಗಿಸುವೆನೆಂದು । ಸೂಸಿದಂತಲಗ ಚಿಮ್ಮಿಸಿದಾ ॥
ಸಾಸಿರವೊಗದಲ್ಲಿ ತಡೆದ ತಮ್ಮನ ಕಂಡು । ಲೇಸು ಲೇಸಭ್ಯಾಸಿಯೆಂದಾ ॥ ೪೦ ॥
ಕಾಲ್ಗೆ ಬೀಸಿದನಣ್ಣ ಕಾಲೊಳೊಡ್ಡದೆ ತಮ್ಮ । ಮೇಲ್ಗೆ ನೆಗೆದು ತಪ್ಪಿಸಿದನು ॥
ಮೇಲ್ಗಡೆಯಿಂದಿಳಿವಾಗ ಹೊಯ್ದನು ಕೂಡೆ । ಕಾಲ್ಗೊನೆಯಿಂದೊಡ್ಡಿ ಕಳೆದಾ ॥ ೪೧ ॥
ತಕ್ಕಿಸಿಕೊಂಡು ತಮ್ಮನ ತನ್ನ ಕೊರಳೊಳ । ಗಿಕ್ಕಿದ ಪದಕವ ತೆಗೆದು ॥
ಇಕ್ಕಿದನವನ ಕೊರಳಿಗವನಣ್ಣನ । ಚೊಕ್ಕಡಿಗಳಿಗೆರಗಿದನು ॥ ೪೨ ॥

ನೋಡುತಿರ್ದೊಡಹುಟ್ಟಿದವರೆಲ್ಲ ಮೆಚ್ಚಿ ಕೊಂ । ಡಾಡಿ ಸತ್ಕರಿಸಿಯಿರ್ವರನು ॥
ನೋಡಿ ನೀವೆಮ್ಮ ಸಾಧನೆಯ ನೀವಿನ್ನು ಕೈ । ಮಾಡದಿರೆಂದುಸುರಿದರು ॥ ೪೩ ॥
ವಿನಯದಪ್ಪದ ನುಡಿ ಜೋಕೆದಪ್ಪದ ನಡೆ । ಮುನಿಸು ಮೊಳೆಯದೊಡ್ಡ ಪೆಟ್ಟು ॥
ತನುವ ತಾಗದ ಘಾಯ ಡಗೆಯೇಳದದೆಯಿಂದ । ಬಿನದಿಸಿದರು ತಮತಮಗೆ ॥ ೪೪ ॥
ವೀರ ವಿಕ್ರಮ ಧೀರ ಸಾಹಸಿಯಭ್ಯಾಸಿ । ಶೂರ ಲೇಸೆಂಬ ಮಾತುಗಳು ॥
ಆರೈಕೆ ಸ್ವಾಮಿ ದೇವಣ್ಣಾಜಿ ಪ್ರಭುವೆಯೆಂ । ಬೀ ರವವೆಸೆದುದವರೊಳು ॥ ೪೫ ॥
ಅರರೆ ಮಝರೆ ಮಝು ಭಾಪು ಭಾಪುರೆ ಪೂತು । ಧಿರುರೆ ತಿರುರೆ ಝಣಾರೆಂಬ ॥
ಪುರುನಾಥು ಗುರುನಾಥು ಶ್ರೀಹಂಸನಾಥು ಹೋ । ಪುರೆಯೆಂಬ ನುಡಿಗಳೊಪ್ಪಿದುವು ॥ ೪೬ ॥
ಕಣಿಪಣಿ ಕಟಿಜಟಿರೆಪ್ಪು ಚಿಪ್ಪುಟುಗಣ್ಮು । ಢಣಢಣ ಚಿಂಚಿಮ್ಮು ಘಣಿಲು ॥
ಝುಣಝುಣ ಜಂಝುಣಯೆಂದೆಂಬ ನಾದ ಸಂ । ದಣಿಸಿದುದೆಲ್ಲಿ ನೋಡಿದರು ॥ ೪೭ ॥
ಗಗನಕೆ ಹಾರುವರೊಡನೆ ಭೂಮಿಗೆ ಬಂದು । ಬೊಗರಿಯಂತೊಲೆದಾಡುತಿಹರು ॥
ತೆಗೆದೆಂಟುದಿಕ್ಕಿಗೆ ಹಿಡಿದರಾಗಳೆ ತಾಗಿ । ನಗುತ ಸಾಧನೆಮಾಡುತಿಹರು ॥ ೪೮ ॥
ಅಟ್ಟಿದರಂಜಿದಂತೋಡುತಣ್ಣಂದಿರಿ । ಗಟ್ಟಹಾಸವ ಮಾಳ್ಪೆವೆನುತ ॥
ತೊಟ್ಟನೀ ತಡಿಯಿಂದ ತೊರೆಯಾಚೆಗವರು ದಿಂ । ಕಿಟ್ಟು ಲಾಗಿಸಿ ನಗುತಿಹರು ॥ ೪೯ ॥
ಬೆಂಗೊಡುವುದು ನೀರ ದಾಂಟುವುದರಸುಗ । ಳಂಗವೆ ಬನ್ನಿರೈಯೆನಲು ॥
ಸಂಗರವೆನೆ ಬಪ್ಪೆವೆನುತ ಲಂಘಿಸಿ ಮರಿ । ಸಿಂಗದಂತೀಚೆ ಬಂದಿಹರು ॥ ೫೦ ॥
ಬಾಳಾಂತು ಬಳಸಿ ಬಟ್ಟಗೆ ಬಂದು ಸುಟ್ಟುರೆ । ಗಾಳಿಯಂತೊದಗಿ ಸುತ್ತುವರು ॥
ಏಳೆಂಟು ಹದಿನಾರು ಹಾರ ಹರಿಣನಂತೆ । ಸಾಲಾಗಿ ಸರಳಿಸುತಿಹರು ॥ ೫೧ ॥
ತೊಡೆ ಮಡ ಕಾಲೆದೆ ಕೊರಳು ತೋಳ್ತಲೆ ಬೆನ್ನು । ನಡುಗಳನತ್ತಿತ್ತ ಮುರಿದು ॥
ಅಡಗಿಸುವರು ನಿಮಿರಿಸುವರು ಮೇಣದ । ನಿಡುರೂಪೊ ಮೈಯೊಯೆಂಬಂತೆ ॥ ೫೨ ॥

ಅಂತರಾಳದೊಳಡ್ಡಲಾಗಿ ದಟ್ಟಿಯ ಮಡಿ । ವಂತೆ ಮೈಮಡಿದು ಹಾರುವರು ॥
ಹೊಂತಕಾರಿಗಳೊಮ್ಮೆ ಹಿಂದುಮುಂದುಕೆ ಚಕ್ರ । ದಂತೆ ಮೈಹೊಳೆದುರುಳುವರು ॥ ೫೩ ॥

ಹಿಂಡ ಕಲಕಿ ಹಿಡಿಹಿಡಿಯೆ ಸಿಕ್ಕದೆ ಗಾಳಿ । ಕೊಂಡೋಡಿದಂತೆ ಸಾಗುವರು ॥
ಗಂಡೆದ್ದು ಗಗನಕುರ್ವಿಗೆ ಠಣಠಣನೆ ಹೊ । ಯ್ಕಂಡಿನಂತಿಳಿದೇರುತಿಹರು ॥ ೫೪ ॥

ಆಕಾಶಕೊರ್ವನು ನೆಗೆದೊಡವನನಾನ । ಬೇಕೆನುತೊರ್ವ ಕೈಯಾಂತಾ ॥
ಆ ಕಲಿ ಬರುತಿರ್ದು ನಡುವೆ ಹಿಂತಿರುಗಿ ಮ । ತ್ತಾಕಾಶಕಡರ್ದಿಳಿಗಿಳಿದಾ ॥ ೫೫ ॥

ಡೊಂಬಿಯೆದ್ದೆಲ್ಲರು ಹಿಡಿಹಿಡಿಯೆನೆ ಸಿಕ್ಕ । ದಂಬರಕೊಡನೆ ಹಾರುವರು ॥
ಅಂಬರದಿಂ ಬೀಳುತಡೆಯೊಳಿ ಮಗುಳ್ವರು । ವಿಾಂಬುಲಿಗನ ಪಕ್ಕಿಯಂತೆ ॥ ೫೬ ॥

ಪೊಟ್ಟನೆ ಹಾಯ್ದಾಕಾಶಕೆದ್ದವನ ಹಿಂ । ದಟ್ಟಿ ಲಾಗಿಸುವರಂಬರಕೆ ॥
ತೊಟ್ಟನೆ ನೆಲಕವನಿಳಿವಾಗ ಬೆಂಬತ್ತಿ । ದಟ್ಟಿಯ ಹಿಡಿದೆತ್ತುತಿಹರು ॥ ೫೭ ॥

ಭೂಚಕ್ರದಲಿ ಹೊಳೆದಾಡಿ ಮೇಲಕೆ ನೆಗೆ । ದಾ ಚದುರರು ಸುಳಿವಾಗ ॥
ಭೂಚರರೊ ಮಝು ಖೇಚರರೊಯೆಂಬ । ಯೋಚನೆಯಾಯ್ತು ನೋಳ್ಪರಿಗೆ ॥ ೫೮ ॥

ಆವ ಲಂಘನ ಮತ್ತದಾವ ಚಮತ್ಕಾರ । ವಾವೆಚ್ಚರಾವಂಗಲಘುತೆ ॥
ದೇವಕುಮಾರರೊ ರಾಜಕುಮಾರರೊ । ಆ ವೀರರರ್ತಿಮಾಡಿದರು ॥ ೫೯ ॥

ತಮ್ಮೊದಗಿಗೆ ಲಂಘನಕ್ಕೆ ಬಿನ್ನಾಣಕೆ । ತಮ್ಮೊಳು ತಾವುಬ್ಬಿ ನಗುತ ॥
ಮಮ್ಮಾ ಮಝುಯೆಂದು ಮೆಚ್ಚುತ ಹೆಚ್ಚುತ । ಸಮ್ಮತದರ್ತಿಮಾಡಿದರು ॥ ೬೦ ॥

ಪಿರಿಯರೇಳಿಗೆಗೆ ಕಿರಿಯರು ನಿವಾಳಿಯಿ । ಟ್ಟರದಡಿಗೆರಗಿ ಮನ್ನಿಪರು ॥
ಪಿರಿಯರು ಕಿರಿಯರ್ಗೆ ಮೆಚ್ಚಿ ತಾವಿಕ್ಕಿದಾ । ಭರಣವಿತ್ತಪ್ಪಿ ಮನ್ನಿಪರು ॥ ೬೧ ॥

ಸವತಿತಾಯಿಗಳ ತನುಜರೆಂಬ ಭೇದ ಮ । ತ್ತವರಿಗೆಳ್ಳನಿತಾದರಿಲ್ಲ ॥
ತವೆ ವಿನಯಂ ರಾಜಪುತ್ರೇಭ್ಯಯೆಂಬುದು । ಅವರ ಕಂಡಾಯ್ತು ನೀತಿಯೊಳು ॥ ೬೨ ॥

ಮಲ್ಲಸಾಧನೆ ಮೈಯ ಸಾಧನೆ ಸಿಂಗಾಡಿ । ಬಿಲ್ಲ ಸಾಧನೆಯಲ್ಲಿ ಕೆಲರು ॥
ಬಲ್ಲೆಹ ಲಾಡಿ ಕಠಾರಿ ಮುಪ್ಪಿಡಿ ಗದೆ । ಯಲ್ಲಿ ಕೆಲಬರೆಸಗಿದರು ॥ ೬೩ ॥

ಚಂದ್ರಾಯುಧದಿ ವಜ್ರಾಯುಧ ರವಿಹಾಸ । ಚಂದ್ರಹಾಸದೊಳು ಸಾಧನೆಯಾ ॥
ಚಂದ್ರಾದಿತ್ಯರಂತಿರ್ವರಿರ್ವರು ಮನು । ಜೇಂದ್ರರು ಪರಿಚಯಿಸಿದರು ॥ ೬೪ ॥

ಹರಿಗೆ ಕೊರಡು ಸಬಳಗಳಲ್ಲಿ ತಮ್ಮ ಕಿಂ । ಕರರು ಹೋರಿದರೆ ನೋಡಿದರು ॥
ಭರತಚಕ್ರಿಯ ಸುಕುಮಾರರಲ್ಲವೆ ತಮ್ಮ । ದೊರೆವೋಡಿತಪ್ಪಿ ನಡೆವರೆ ॥ ೬೫ ॥

ಗೋಣತರಗಳನೆತ್ತೆಂದರೆ ಮೊರಡಿಯ । ತ್ರಾಣದಿಂದೆತ್ತಿ ನೂಂಕುವರು ॥
ಸಾಣವನುದ್ದಕಿಟ್ಟಾನೆನೆ ವೃಕ್ಷವ । ಹೂಣಿ ಕಿತ್ತಿಟ್ಟಾನುತಿಹರು ॥ ೬೬ ॥

ಗಿರಿಯನೆತ್ತುವರರ್ಧಚಕ್ರಿಗಳೀ ಕುವ । ರರು ಪೂರ್ಣಚಕ್ರಿಯ ಸುತರು ॥
ನೊರಡಿಮರಗಳನೆತ್ತುವುದೊಂದು ದೊಡ್ಡಿತೆ । ವರವಜ್ರಮಯದೇಹಿಗಳಿಗೆ ॥ ೬೭ ॥

ಹೊತ್ತು ವಿಹಾರಿಯು ಸಾಧನೆಯ ಗೆಯ್ವ ದೊರೆಗಳ । ಒತ್ತಿನೊಳಿಗದವರರಿದು ॥
ಚಿತ್ತೈಸಿ ನಿಮಗಂಜಿ ರವಿಯೋಡಿ ಗಗನವ । ಹತ್ತಿದನೆಂದು ತೋರಿದರು ॥ ೬೮ ॥

ಸಾಕು ಹೋ ಹೊತ್ತಾದುದೆಂದೆಡಬಲಜಾರಿ । ಯಾಕುವರರು ಮೈಯ ಮುರಿದು ॥
ನಾಕ ಲಂಘಿಸಿ ಕೋಲುಕೋಲನೊಂದಿಸಿ ಜಿನ । ನೇಕಚಿತ್ತದೊಳೆರಗಿದರು ॥ ೬೯ ॥

ಕಲಕಿತು ತಿಲಕ ಮೈ ಬೆವರಿತು ಮೈಗಿಷ್ಟು । ಮಳಲು ಪತ್ತಿದುದಲ್ಲಿಗಲ್ಲಿ ॥
ಕಳೆಯೇರಿದ ಮೊಗದಿಂದೊರ್ವರೊರ್ವರು । ಬಳಲಿದಿರೆಂದುಸುರಿದರು ॥ ೭೦ ॥

ಕೋಲುಖಂಡೆಯಕೆ ಕೈಯಾನುತ ದೊರೆಗಳಿ । ಗಾಲವಟ್ಟವನಿಕ್ಕುತೊಡನೆ ॥
ಊಳಿಗದವರು ದಟ್ಟಿಯನಳಿದೊಯ್ಯನೆ । ಕೈಲಾಗುಗೊಟ್ಟು ನಡೆದರು ॥ ೭೧ ॥

ಮರಿಯಾನೆಗಳು ನೀರಿನಾಟಕೆ ನಡೆವಂತೆ । ತೊರೆಗೆಯ್ದಿ ತಿಳಿನೀರ ಹೊಕ್ಕು ॥
ನೆರೆ ನೀಸಿ ತೇಲಿ ಮೂಡುತ ಮುಳುಗುತ ದುಡು । ವ್ಮಿರಿದಾಡಿ ಲೀಲೆಮಾಡಿದರು ॥ ೭೨ ॥

ಮತ್ತೆ ಸಿಂಗರಿಸಿ ಜಿನಸ್ತುತಿಗೈದಾತ್ಮ । ನುತ್ತಮಧ್ಯಾನವ ಮಾಡಿ ॥
ಬುತ್ತಿಯನ್ನವನ್ನಾರೋಗಿಸಿಯಾ ತೊರೆ । ಯೊತ್ತಿನ ಬನಕೆ ನಡೆದರು ॥ ೭೩ ॥

ಹೊಳೆಯ ತಡಿಯೊಳು ಚಕ್ರೇಶನ ಸುತರೆಂಬ । ಕಳಭಗಳುರೆ ಲೀಲೆಮಾಡಿ ॥
ಎಳಸಿ ವನಕೆ ನಡೆತಂದರೆಂಬಲ್ಲಿಗು । ಜ್ಜಳಿಪ **ಸಾಧನೆಯ ಸುಸಂಧಿ** ॥ ೭೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೭೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂಧರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೭೬ ॥

ಚಿಂತಾರತ್ನ ರತ್ನಾಕರಸ್ವಾಮಿ ಸು । ಕಾಂತಾ ನೀನಗಲದೆ ನನ್ನ ॥
ಅಂತರಂಗದೊಳಿರು ಜಯ ಜಯ ಗುರುವೆ ನಿ । ಶ್ಚಿಂತಾ ಚಿದಂಬರಪುರುಷಾ ॥ ೭೭ ॥

ಸಾಧನೆಯಸಂಧಿ ಸಂಪೂರ್ಣಂ



## ವಿದ್ಯಾಗೋಷ್ಠಿಸಂಧಿ.

ಅತಿಶಯರೂಪ ರೂಪಾತೀತ ದೇಹವ । ರ್ಜಿತ ದೇಹಯುತ ಚಿನ್ಮಯಾಂಗಾ ॥
ಮತಿಗಮ್ಯ ಮತಿದೂರ ಜಯ ಜಯ ಗುರುವೆ ಅ । ಪ್ರತಿಮಾ ನಿರಂಜನಸಿದ್ಧಾ ॥ ೧ ॥

ಬನದ ತಣ್ಣೆಳಲ ತಂಗಾಳಿಯೊಳೊಪ್ಪಚ್ಚಿ । ತನುವನೊರಗಿ ನಿದ್ರೆಗೈದು ॥
ಜಿನಸಿದ್ಧ ಗುರುವೆ ನಿರಂಜನಸಿದ್ಧಯೆಂ । ದೆನುತೆದ್ದರವರು ಜೋಕೆಯೊಳು ॥ ೨ ॥

ಗಿಂಡಿಯುದಕವಿತ್ತು ಪನ್ನೀರ ಚಿಮ್ಮಿಸಿ । ಕೊಂಡು ಕಪ್ಪುರವ ಕಣ್ಗೆಚ್ಚಿ ॥
ಮಂಡಳಿಕರಿಗೆ ಸೇವಕರು ವೀಳೆಯದ ಕ । ರಂಡಗೆದೆಗೆದು ನೀಡಿದರು ॥ ೩ ॥

ವೀಳೆಯಗೊಳುತ ಕನ್ನಡಿಯ ನೋಡುತ ತೆಳು । ಗಾಳಿಗೆ ಮೈಯನೊಪ್ಪಿಸುತ ॥
ಮೇಲೊಯ್ಯನೊಯ್ಯನೆ ತಮ್ಮೊಳು ಸಂಗೀತ । ಕೇಳಿಗವರು ತೊಡಗಿದರು ॥ ೪ ॥

ಕಾಲವನರಿದು ಕಟ್ಟಣೆಗಳನರಿದಾಗ । ಗೌಳಶ್ರೀರಾಗಗಳಿಂದ ॥
ಮಾಳವಶ್ರೀಯೆಂಬ ರಾಗದಿಂದವರೊಲಿ । ದಾಲಾಪಗಳನು ಮಾಡಿದರು ॥ ೫ ॥

ತುರುಬಿದ ಪುಷ್ಪಕೆ ತೊಡೆದ ಜವಾದಿಗೆ । ಬರೆದ ಶ್ರೀಗಂಧಲೇಪನಕೆ ॥
ನರುಸುಯ್ಗೆ ಕೆಂಬಾಯ ಕಂಪಿಗೆ ತುಂಬಿಗ । ಳೆರಗಿ ಸುಶ್ರುತಿಗೊಟ್ಟುವೊಡನೆ ॥ ೬ ॥

ಸ್ವರವೇಳು ಗ್ರಾಮಮೂರರುವತ್ತನಾಲ್ಕೆಂದು । ತಿರುಗಿ ನೂರೆಂಟುರಾಗದೊಳು ॥
ಭರತಶಾಸ್ತ್ರದ ನೆಲೆಯರಿವುದು ಗಹನವೆ । ಭರತಚಕ್ರಿಯ ತನೂಜರಿಗೆ ॥ ೭ ॥

ಮೇಘರಂಜಿಯನೊರ್ವನಾಲಾಪಿಸಿದರೆ ನಿ । ದಾಘಕಾಲದೊಳು ತತ್ಕ್ಷಣವೆ ॥
ಮೇಘ ಕವಿದು ಮಳೆಗರೆವುತಿರಲು ಕಂಡು । ಮೇಘರಂಜಿಯ ನಿಲಿಸಿದನು ॥ ೮ ॥

ಕಲ್ಲ ಮೇಲಿರ್ದೊರ್ವನೊಲಿದು ಗುಂಡಾಕ್ರಿಯ । ಮೆಲ್ಲನಾಲಾಪಿಸುತಿರಲು ॥
ಕಲ್ಲು ತಾಂ ಕರಗಿ ನೀರಾಗಿ ಪರಿದುದಿನ್ನು । ಮೆಲ್ಲೆದೆ ಕರಗುವುದರಿದೆ ॥ ೯ ॥

ಹಿಂದುವರಾಳಿಯನೊರ್ವನಾಲಾಪಿಸೆ । ಹಿಂದುಳಿಯದೆ ವನವೆಲ್ಲ ॥
ಒಂದು ಘಳಿಗೆಯೊಳೆ ಪೂ ತಳಿರ್ಮಿಡಿಪಣ್ಗ । ಳೊಂದುಗೂಡಿರ್ದುವೇನೆಂಬೆ ॥ ೧೦ ॥

ನಾಗವರಾಳಿಯನೊರ್ವನಾಲಾಪಿಸ । ಲಾಗಳೆ ನೆರೆದು ಸರ್ಪಗಳು ॥
ರಾಗಿಸಿ ಪೆಡೆಯೆತ್ತಿ ಕೇಳುತಿರ್ದುವು ಸಕ । ಲಾಗಮಜ್ಞರ ಸಮ್ಮುಖದೊಳು ॥ ೧೧ ॥

ಕೂಡೊರ್ವ ಗರುಡಗಾಂಧಾರಿಯ ಪಾಡಿದ । ರೋಡಿದುವವು ಕಂಡ ಕಡೆಗೆ ॥
ಆಡುತಾಕಾಶದೊಳಿರ್ದ ಪರ್ದುಗಳು ಮೈ । ನೀಡಿಳಿತಂದು ಕೇಳಿದುವು ॥ ೧೨ ॥

ಬನದೊಳಗಿರ್ದ ಕೋಗಿಲೆ ಗಿಳಿ ನವಿಲು ಸೊ । ಕ್ಕಿನ ಮಿಗಗಳು ಕಿವಿಯೊಡ್ಡಿ ॥
ತನುಮಿಸುಕದೆ ಕೇಳುತಿರ್ದುವಾ ಕುವರರ । ದನಿಯ ಚೆಲ್ವಿಕೆಯನೇನೆಂಬೆ ॥ ೧೩ ॥

ಸ್ವರಮಂಡಲದಲ್ಲಿ ದಂಡಿಗೆಯಲ್ಲಿ ಕಿ । ನ್ನರಿಯಲ್ಲಿ ತ್ರಿವಿಧವೀಣೆಯೊಳು ॥
ಕೊರಳು ಬೆರಳು ಕೊಂಕದನುಗೂಡಿ ಮುತ್ತಿನ । ಸರವೆತ್ತಿದಂತೆ ಪಾಡಿದರು ॥ ೧೪ ॥

ದನಿಯಿಂಪು ರಾಗದ ಸೊಂಪು ತಾನದ ನುಂಪು । ಅನುವೆತ್ತ ಪದಗಳ ವ್ಯಕ್ತಿ ॥
ನೆನೆಯಬಾರದು ಪಾಡಬಾರದಿನ್ನೊಬ್ಬರಿ । ಗೆನಿಸಿ ಪಾಡಿದರು ಗಾಡಿಯೊಳು ॥ ೧೫ ॥

ಕೇತಾರಗೌಳದೊಳುತ್ತರಗೌಳಸಂ । ಗೀತದೊಳೊಲಿದಾದಿಜಿನನು ॥
ಘಾತಿಕರ್ಮವ ಗೆಲ್ದ ಕಥನವನತ್ಯಂತ । ಚಾತುರ್ಯ್ಯವೆಸೆಯೆ ಪಾಡಿದರು ॥ ೧೬ ॥

ಬೋಧನಿಧಾನನ ಪರಮಬೋಧವನು ಕಾಂ । ಬೋಧಿಯಿಂದೊಲಿದು ಪಾಡಿದರು ॥
ಮಾಧುರ್ಯವಡೆದ ದಿವ್ಯಧ್ವನಿಯನು ಮಧು । ಮಾಧವಿಯಿಂದ ಪಾಡಿದರು ॥ ೧೭ ॥

ಶುದ್ಧದೊಳಗೆ ಜಿನಸಿದ್ಧರ ಪಾಡಿ ನಿ । ಬದ್ಧಿಸಿ ಸಂಕೀರ್ಣದೊಳಗೆ ॥
ವೃದ್ಧಸಂಪನ್ನಯೋಗಿಗಳ ಪಾಡಿದರಹೊ । ಶುದ್ಧಸಂಕೀರ್ಣಕೋವಿದರು ॥ ೧೮ ॥

ದ್ರವ್ಯವಾರಯ್ದಂಗ ತತ್ತ್ವವೇಳೊಂಭತ್ತು । ನವ್ಯಪದಾರ್ಥವ ಹಾಡಿ ॥
ಸೇವ್ಯವಿವರೊಳಿಮಗೆಮ್ಮಾತ್ಮನೆಂದು ಚಿ । ದ್ದ್ರವ್ಯವ ಮತ್ತೆ ಹಾಡಿದರು ॥ ೧೯ ॥

ಕನಕ ಕಲ್ಲೊಳಗೆ ಕಾಷ್ಠದೊಳಗ್ನಿ ಪಾಲೊಳ । ಗನುವಡೆದಾಜ್ಯವಿಪ್ಪಂತೆ ॥
ತನುವಿನೊಳಿಹನಾತ್ಮನೆಂದಾತ್ಮತತ್ತ್ವವ । ಜನವರಿವಂತೆ ಹಾಡಿದರು ॥ ೨೦ ॥

ಜೋಕೆಯಿಂ ಮೇಣದ ಕರುವ ಸೋದಿಸೆ ಮೂಷೆ । ಯಾಕಾರಗರ್ಭದೊಳೆಸೆವ ॥
ಆಕಾಶದಂತಾತ್ಮ ಮೈಯೊಳಿಹನು ಪುರು । ಷಾಕಾರನೆಂದು ಹಾಡಿದರು ॥ ೨೧ ॥

ನೀರಿಂದ ನನೆಯ ಕಿಚ್ಚಿಂದ ಬೇಯನು ಖಡ್ಗ । ಧಾರೆಗೆ ಸಂಧಿಸನಾತ್ಮಾ ॥
ನೀರು ಕಿಚ್ಚಾಯುಧ ರುಜೆಗಳ ಬಾಧೆ ಶ । ರೀರಕೆಂದೆತ್ತಿ ಹಾಡಿದರು ॥ ೨೨ ॥

ಕೆಡವುದೊಡಲು ಕೆಡನಾತ್ಮ ಶರೀರವೆ । ಜಡರೂಪು ಚಿದ್ರೂಪನಾತ್ಮಾ ॥
ಒಡಲಿದು ಭೂಮಿಯಂತಾತ್ಮನಂಬರದಂತೆ । ನುಡಿಯಲನ್ಯೋನ್ಯವಿರುದ್ಧಾ ॥ ೨೩ ॥

ಆಕಾಶ ಬಯಲಾತ್ಮನುರೆ ಬಯಲದು ಪುರು । ಷಾಕಾರವಲ್ಲರಿವಿಲ್ಲ ॥
ಆಕಾಶಗಾತ್ಮಗು ಭೇದವಿಷ್ಟಲ್ಲದೆ । ಲೋಕದೊಳಿನ್ನಾವುದುಂಟು ॥ ೨೪ ॥

ಅಂಬರದಂತೆ ಮೈಯಿಲ್ಲ ಚಿದ್ರೂಪು ಮ । ತ್ತಿಂಬಿನ ಪುರುಷಾಕಾರಾ ॥
ಎಂಬ ಚಿಹ್ನಗಳು ಮೂರುಂಟಾಗಿ ಪೆಸರು ಚಿ । ದಂಬರಪುರುಷನೆಂದಾಯ್ತು ॥ ೨೫ ॥

ತನು ಸೆರೆಮನೆಯಾಯುಷ್ಯ ಸಂಕಲೆ ಮುಪ್ಪು । ಜನನ ಮರಣ ಮೊದಲಾದ ॥
ಘನಬಾಧೆಯೊಳು ನೋವುತಿಹನಾತ್ಮನಾತ್ಮನ । ಘನತೆಯನರಿಯದಯ್ಯಯ್ಯೊ ॥ ೨೬ ॥

ಮೂಜಗದಷ್ಟು ತೆರಪು ಮೂರುಜಗವ ನಿ। ವ್ವಾ೯ಜದಿಂದೆತ್ತುವ ಶಕ್ತಾ ॥
ಈ ಜಡದೇಹದೊಳಡಗಿಹನಾತ್ಮನು। ಬೀಜದೊಳಿಹ ವೃಕ್ಷದಂತೆ ॥ ೨೭ ॥
ಜಗಮೂರರೊಳಗು ಹೊರಗು ಕಾಣ್ಬನರಿವನು। ವಿಗೆ ಕೋಟಿಸೂರ್ಯಪ್ರಕಾಶಾ ॥
ನೊಗಸಿ ಮುತ್ತಿದ ಕರ್ಮದೊಳಗಿಹನಾತ್ಮನು। ಮುಗಿಲು ಮುತ್ತಿದ ಸೂರ್ಯನಂತೆ ॥ ೨೮ ॥
ಮೆಯ್ಯೊಳಗಿಹನು ಮೆಯ್ಯಿಲ್ಲ ಸುಜ್ಞಾನವೆ। ಮೆಯ್ಯಾಗಿರುತಿಹನಾತ್ಮಾ ॥
ಮೆಯ್ಯ ಸೋಂಕಿಯು ಸೋಂಕ ಮೆಯ್ಯ ತುಂಬಿಹನು ನೋ। ಡಯ್ಯ ಮರ್ಘಂದು ಪಾಡಿದರು ॥
ಅಂಬುಜನಾಳಕೆ ಮೊದಲಿಂದ ತುದಿಮುಟ್ಟ। ತುಂಬಿ ನೂಲಿರ್ಪ ರೀತಿಯೊಳು ॥
ಕೆಂಬಜ್ಜೆಯಿಂದ ಮಸ್ತಕಮುಟ್ಟ ಜೀವ ಮೈ। ತುಂಬಿಹನೆಂದು ಪಾಡಿದರು ॥ ೩೦ ॥
ದಂಟಿನ ಮೊದಲಿಂದ ತುದಿಮುಟ್ಟ ತುಂಬಿ ನೂ। ಲುಂಟು ಬೇರೆಲೆಗಳೊಳಿಲ್ಲ ॥
ನಾಂಟೆ ಮಸ್ತಕದಿಂದ ತಳಪಾದಮುಟ್ಟಾತ್ಮ। ನುಂಟಿಲ್ಲ ನಖಕೇಶಗಳೊಳು ॥ ೩೧ ॥
ಎಲ್ಲಿ ಮೈ ಚಿವುಟಿದರಾ ನೋವನರಿವನಂ। ತಲ್ಲಿ ಮುಟ್ಟಾತ್ಮ ತುಂಬಿಹನು ॥
ಸೆಳ್ಳುಗುರುಗಳ ಕೂದಲ ಚಿವುಟಿದರೆ ನೋ। ವಿಲ್ಲವಲ್ಲಿಲ್ಲ ತನ್ನಾತ್ಮಾ ॥ ೩೨ ॥
ಬೆಳೆವಾಗ ದಂಟು ತಾನೆಷ್ಟು ಹೆಚ್ಚಿದರಷ್ಟು। ಒಳಗಿದ್ದ ನೂಲು ಹೆಚ್ಚುವುದು ॥
ಆಳವಟ್ಟು ಬಾಲತ್ವದಿಂದ ಜವ್ವನಕೆ ಮೈ। ಬಳೆದಷ್ಟು ಹೆಚ್ಚುವನಾತ್ಮಾ ॥ ೩೩ ॥
ನಾಳ ಕಲ್ಮಷ ಮುಳ್ಳು ಬಿಸಹುದೊಳಗಿದ್ದ। ನೂಲು ನಿರ್ಮಲ ಮೃದು ನಯವು ॥
ಮೇಲೆ ನೆತ್ತರು ತೊಗಲೆಲುವಿನ ತನುವೊಳ। ಗಾಲಿಸಲಾತ್ಮನುತ್ತಮನು ॥ ೩೪ ॥

ಹೊರಗಿದು ಸಪ್ತಧಾತುವಿನಂಗವೀ ಮೈಯು। ಮರೆಯೊಳಿನ್ನೆರಡುಮೈಯುಂಟು ॥
ಮಿರುಪ ತೈಜಸತನು ಕಾರ್ಮಣತನುವಿಂತು। ಸೆರೆವನೆಮೂರಾತ್ಮಗಿಹುವು ॥ ೩೫ ॥
ಏಳುಧಾತುವಿನಂಗವೌದಾರಿಕವೆಂದು। ಹೇಳುವರಿದರೊಳಗಿರ್ದ ॥
ಕಾಳಕೂಟೋಪಮದೆರಡಂಗವೆಂಟುಕ। ರ್ಮಾಳಿಸ್ವರೂಪವಾಗಿಹುವು ॥ ೩೬ ॥
ನರ ಪಕ್ಷಿ ಪಶುವೆನೆ ಹಲವಾಗಿ ಹೋಗುತ। ಬರುತಿಹುದೌದಾರಿಕಾಂಗಾ ॥
ಮರಣವಾದಾಗಳು ತೈಜಸ ಕಾರ್ಮಣ। ವೆರಡು ಹಿಂಗದೆ ಕೂಡೆ ಬಹುವು ॥ ೩೭ ॥
ಈ ದೇಹವಳಿದು ಮತ್ತೊಂದು ಗರ್ಭಕೆ ಪೋಪ। ಹಾದಿಯೊಳೆರಡುಮೈಯುಂಟು ॥
ಹೋದ ಗರ್ಭದೊಳು ಮತ್ತೊಂದುಮೈಯಿಹುದಿಂತು। ಮೂದೇಹ ತಪ್ಪದಾತ್ಮನಿಗೆ ॥ ೩೮ ॥
ತೊಟ್ಟ ಮೈಜೋಹದೊಳಿರ್ದರೆ ಬದುಕೆಂದು। ಬಿಟ್ಟರೆ ಮರಣವಾಯ್ತೆಂದು ॥
ಬಿಟ್ಟು ಮತ್ತೊಂದು ಮೈಜೋಹವ ತೊಟ್ಟರೆ। ಹುಟ್ಟಿದನೆಂದಾಡುತಿಹರು ॥ ೩೯ ॥
ಮನೆಯಿಂದ ಮನೆಗೆ ಪೋಪಂತಾತ್ಮ ತನುವಿಂದ। ತನುವಿಗೆ ತಾನೆಯ್ದುತಿಹನು ॥
ತನುವಿಡಿದಿರ್ದುದೆ ಸಂಸಾರವಾ ಮೂರು। ತನುವಳಿದಾಗಳೆ ಮುಕ್ತಿ ॥ ೪೦ ॥

ತಿತ್ತಿಯೊಳಿರ್ದ ಗಾಳಿಯನೊತ್ತಬಹುದೈಸೆ । ತಿತ್ತಿ ಹರಿದರೊತ್ತಬಹುದೆ ॥
ಪತ್ತಿ ದೇಹದೊಳಿರ್ದರಾತ್ಮಗೆ ಬಾಧೆ ವೈ । ಯೊತ್ತಿ ಬಿಟ್ಟರೆ ಬಾಧೆಯುಂಟೆ ॥ ೪೧ ॥
ಕಡು ಕಿಚ್ಚು ಕೈದು ಕಲ್ಮೊದಲಾದ ಹತಿಯಿಂದ । ಕೆಡುವುದೌದಾರಿಕದೇಹಾ ॥
ಕೆಡವಿವರಿಂದ ತೈಜಸಕಾರ್ಮಣವಿವು । ಕೆಡುವುವು ಧ್ಯಾನಾಗ್ನಿಯಿಂದ ॥ ೪೨ ॥
ತೈಜಸಕಾರ್ಮಣವೆರಡು ಕೆಟ್ಟಾಗಳೆ । ನೈಜದಿಂದಾತ್ಮಗೆ ಮುಕ್ತಿ ॥
ತೈಜಸಕಾರ್ಮಣಗಳ ಕೆಡಿಸುವುದಕೆ । ಶ್ರೀಜಿನಭಕ್ತಿಯೆ ಯುಕ್ತಿ ॥ ೪೩ ॥

ಭೇದದ ಭಕ್ತಿಯೆಂದುಂಟು ಮೊದಲು ಮತ್ತ । ಭೇದದ ಭಕ್ತಿಯೆಂದುಂಟು ॥
ಭೇದಾಭೇದಭಕ್ತಿಗಳ ಲಕ್ಷಣವ ಮು । ತ್ತಾದರದಿಂದ ಪಾಡಿದರು ॥ ೪೪ ॥
ಸಮವಸರಣದಲ್ಲಿ ಜಿನನಿಹನಾ ಸಿದ್ಧ । ರಮೃತಲೋಕದೊಳಿಹರೆಂದು ॥
ಕ್ರಮದಿಂದ ಬೇರಿಟ್ಟು ಧ್ಯಾನಿಸಿದರೆ ಜಿನ । ಸಮಯದೊಳದೆ ಭೇದಭಕ್ತಿ ॥ ೪೫ ॥
ಆ ಜಿನಸಿದ್ಧರನಲ್ಲಿಂದ ತೆಗೆದು ಸಂ । ಯೋಜಿಸಿ ತನ್ನಾತ್ಮನೊಳಗೆ ॥
ಓಜೆಯಿಂದಿಟ್ಟು ಧ್ಯಾನಿಸಿದರೆ ಮುಕ್ತಿಗೆ । ಬೀಜವಭೇದಭಕ್ತಿಯದು ॥ ೪೬ ॥
ಜಿನನ ಬೇರಿಟ್ಟು ಕಂಡರೆ ಭೇದಭಕ್ತಿಯಾ । ಜಿನನ ಬೇರ್ಮಾಡದಾತ್ಮನೊಳು ॥
ಅನುಗೂಡಿ ಕಂಡರಭೇದಭಕ್ತಿಯಿದಾದಿ । ಜಿನವಾಕ್ಯವೆಂದು ಪಾಡಿದರು ॥ ೪೭ ॥
ಭೇದಭಕ್ತಿಯ ಧ್ಯಾನದಭ್ಯಾಸಕಾಲದೊ । ಳಾದರಿಪುದು ಮುನ್ನ ಮತ್ತೆ ॥
ಭೇದವಿಲ್ಲದ ಭಕ್ತಿಯೊಳೆ ನಿಲ್ವುದಮೃತಕೆ । ಹಾದಿಯೆಂದೊಲಿದು ಪಾಡಿದರು ॥ ೪೮ ॥
ಜಿನನಂತೆ ಸಿದ್ಧರಂತೆನ್ನಾತ್ಮ ಶುದ್ಧನೆಂ । ದನುದಿನ ತನ್ನ ಧ್ಯಾನಿಪುದು ॥
ಜಿನಸಿದ್ಧಭಕ್ತಿ ನಿಶ್ಚಯದ ರತ್ನತ್ರಯ । ವೆನಿಸುವುದದರಿಂದ ಮುಕ್ತಿ ॥ ೪೯ ॥
ಶಿಲೆ ಮೊದಲಾದುವ ಜಿನಮುದ್ರೆಮಾಡಿ ತಾ । ನೊಲಿದರ್ಚಿಪುದು ಭೇದಭಕ್ತಿ ॥
ಚಲಿಸದೆ ತನ್ನಾತ್ಮ ಜಿನನೆಂದು ಕಾಣ್ಬುದು । ಲಲಿತನಿರ್ಭೇದಭಕ್ತಿಯದು ॥ ೫೦ ॥

ಚರ್ಮರುಧಿರಮಾಂಸಮಯದ ಕೆಚ್ಚಲೊಳಿರ್ದು । ನಿರ್ಮಲವೆನಿಪ ಪಾಲಂತೆ ॥
ಕರ್ಮಕಷಾಯಕಷ್ಟದ ಮೈಯೊಳಿದ್ದಾತ್ಮ । ನಿರ್ಮಲನೆಂದು ಪಾಡಿದರು ॥ ೫೧ ॥
ಕಾಷ್ಠದೊಳಿಹುದಗ್ನಿ ಹೊಸೆದರೆ ತಾನಿರ್ದ । ಕಾಷ್ಠವ ತಾನೆ ಸುಡುವುದು ॥
ನಿಷ್ಠುರಕರ್ಮದೊಳಿಹನು ಧ್ಯಾನಿಸಿದರೆ । ನಿಷ್ಠಾತ್ಮ ಸುಡುವ ಕರ್ಮಗಳಾ ॥ ೫೨ ॥
ದಶವಾಯುಗಳ ಗೆಲ್ದು ಪ್ರಾಭೃತಶಾಸ್ತ್ರದ । ಕುಶಲವನರಿದು ಕಣ್ಮುಚ್ಚಿ ॥
ತ್ರಿಶರೀರ ಬೇರೆಂದು ನೋಡಿದರೊಳಗೆ ಕ । ರ್ಕಶವಿಲ್ಲದಾತ್ಮ ತೋರುವನು ॥ ೫೩ ॥
ಸುತ್ತಿನ ನುಡಿಯೇನು ಪ್ರಾಣವಾಯುವ ನಡು । ನೆತ್ತಿಗೇರಿಸಿ ನಿಲಿಸಿದರೆ ॥
ಕತ್ತಲೆ ಕೆಟ್ಟೊಳಗಾತ್ಮ ಬೆಳ್ದಿಂಗಳ । ಪುತ್ಥಳಿಯಂತೆ ತೋರುವನು ॥ ೫೪ ॥

ಕೆಲರಿಗೆ ಪವನಾಭ್ಯಾಸವಿಲ್ಲದೆ ಧ್ಯಾನ । ನಿಲುವುದು ಕೆಲರು ಮಾರುತನಾ ॥
ಗೆಲಿದು ಕಣ್ಮುಚ್ಚಿ ನೋಡಿದರೆ ಮೈಯೊಳಗಾತ್ಮ । ತಳತಳಿಸುತ ತೋರುತಿಹನು ॥ ೫೫ ॥
ಕಾರ್ಮಣತೈಜಸಗಳು ಜರಿವುವು ಕೂಡೆ । ಚರ್ಮದಂಗವು ಲಯವಹುದು ॥
ನಿರ್ಮಲಾತ್ಮನು ಮುಕ್ತಿಗೆಯ್ದುವನೆಂದಾತ್ಮ । ಧರ್ಮವನೊಲಿದು ಪಾಡಿದರು ॥ ೫೬ ॥
ಆಹಾ ಲೇಸುಲೇಸೆಂದದಕಾ ಗುಣ । ಗ್ರಾಹಿಗಳೆಲ್ಲರಿಚ್ಛೈಸಿ ॥
ಹೋಹೋ ಗಾನ ಸಾಕತಿವೇಳೆಯಾಯ್ತೆಂದು । ಸಾಹಿತ್ಯಕಳೆಗೆಳಸಿದರು ॥ ೫೭ ॥

ವ್ಯಾಕರಣದೊಳೊಮ್ಮೆ ತರ್ಕಶಾಸ್ತ್ರದೊಳೊಮ್ಮೆ । ಬೇಕಾದ ನ್ಯಾಸಭಾಷೆಯೊಳು ॥
ಪ್ರಾಕೃತ ಗೀರ್ವಾಣ ದೇಶೀಯಭಾಷೆಯೊ । ಳಾ ಕುಶಲರು ವಚಿಸಿದರು ॥ ೫೮ ॥
ರಸ ಕಾವ್ಯ ನಾಟಕದೊಳಗಲಂಕಾರ ಛಂ । ದಸಿನಲ್ಲಿ ಕಾಮಶಾಸ್ತ್ರದೊಳು ॥
ರಸವಾದದೊಳಗೆ ಕನ್ಯಾವಾದಶಾಸ್ತ್ರದೊ । ಳೊಸೆದು ವಿಚಾರಮಾಡಿದರು ॥ ೫೯ ॥
ಒಂದುಶಬ್ದಕೆ ಹಲವರ್ಥವಾ ಹಲವರ್ಥ । ಕೊಂದುಶಬ್ದವ ನೆಲೆಗೊಳಿಸಿ ॥
ಎಂದುದನೆನ್ನದೆ ಹೊಸಹೊಸ ಪರಿಯ ಸೊ । ಲ್ಲಿಂದ ಸುಗೋಷ್ಠಿಮಾಡಿದರು ॥ ೬೦ ॥
ವರ್ಣಕವಸ್ತುಕವೆಂಬ ಕವಿತ್ವದ । ನಿರ್ಣಯದೊಳು ನೇಮುದಟ್ಟಿ ॥
ಕರ್ಣರಸಾಮೃತವನೆ ಕರೆವುತ ಕವಿ । ತಾರ್ಣವರೆಸೆದರರ್ತಿಯೊಳು ॥ ೬೧ ॥
ಗಣ ಪದ ಸಂಧಿ ಸಮಾಸ ಮುಂತಾದ ಲ । ಕ್ಷಣ ತಪ್ಪದವರು ಲೀಲೆಯೊಳು ॥
ಕ್ಷಣಕೊಂದು ಶತಕ ಘಳಿಗೆಗೊಂದು ಕಾವ್ಯವ । ಮಣಿಮಾಲೆಯೊಲು ರಚಿಸುವರು ॥ ೬೨ ॥
ಎರಡುಘಳಿಗೆಗೆ ಕಿರಿದು ಕಡಮೆಯೊಳು ಪ । ನ್ನೆರಡಂಗಶಾಸ್ತ್ರವ ನೆನೆದು ॥
ಬರೆದೋದಿ ಮುಗಿವ ಯೋಗಿಗಳ ಶಿಷ್ಯರಿಗಿದು । ಅರಿದೆ ಚಮತ್ಕಾರಕವಿತೆ ॥ ೬೩ ॥
ಅಷ್ಟಾವಧಾನ ಗಣ್ಯವೆ ನೂರುಸಾವಿರ । ಶಿಷ್ಟಲಕ್ಷಾವಧಾನಗಳಾ ॥
ದೃಷ್ಟಿಯೆ ತನು ಸುಬುದ್ಧಿಯೆ ಮುಖವಾದಂತೆ । ಸೃಷ್ಟಿಸಿ ತೋರುವರವರು ॥ ೬೪ ॥
ನಾಲ್ವತ್ತೆಂಟುಗಾವುದ ಬಿಟ್ಟ ಪಡೆಯಲ್ಲಿ । ಸಲ್ವ ಪ್ರಪಂಚಬಲ್ಲವನ ॥
ಚೆಲ್ವದರದೊಳು ಬಂದವರಿಗಿಪ್ಪವಧಾನ । ನಿಲ್ವುದದೊಂದು ಸೋಜಿಗವೆ ॥ ೬೫ ॥
ಕಂಠಮಾಲೆಗಳಂತೆ ಹೊಸತಾಗಿ ಬರೆವಷ್ಟು । ಕಂಠಕೆ ಕೃತಿಯ ಪೇಳುವರು ॥
ಕಂಠ ಸಂಕೋಚಿಸದನುಪದಿಪರು ಕಳ । ಕಂಠ ಜಕ್ಕುಲಿಸುವಂದದೊಳು ॥ ೬೬ ॥

ಮುರಿದೊಬ್ಬ ಬಿನದಕೆ ವಿಷವಾಣಿಯಿಂದೊಂದು । ಮರನ ವರ್ಣಿಸಿದರೊಣಗಿತು ॥
ತಿರುಗಿ ತಾನಮೃತವಾಣಿಯೊಳು ವರ್ಣಿಸಿದರಂ । ಕುರಿಸಿ ಪಲ್ಲವಿಸಿತಾ ಕ್ಷಣವೆ ॥ ೬೭ ॥
ಅರಗಿಣಿಗಳನೊಬ್ಬನುಗ್ರವಾಣಿಯೊಳು ಪೇ । ಳ್ದರೆ ಕೋಳಿಯಂತೆ ಕಾದಿದುವು ॥
ಪುರೆಯೆಂದು ಶಾಂತವಾಣಿಯೊಳೊರೆದರೆ ಕೋಪ । ಹರಿದು ಶಾಂತದೊಳಿರ್ದುವಾಗ ॥ ೬೮ ॥

ಬರಡುಮರನ ಫಲವೇರಿಸಿ ಫಲವಾದ । ಮರನ ಬರಡುಮಾಡಿ ತಮ್ಮ ॥
ಅರಸುತನದ ಶಿಕ್ಷೆ ರಕ್ಷೆಯ ಕವಿತೆಯೊ । ಳೊರೆದು ಕಾಣಿಸುತಿರ್ದರವರು ॥ ೭೯ ॥
ಕವಿತೆಯೆಂಬುದು ಕಲ್ಪತರುವದನುಳ್ಳ ಮಾ । ನವಗರಿದಿಲ್ಲವಾ ಕವಿತೆ ॥
ಅವನೀಶಪುತ್ರರಿಗಾಯ್ತೆಂದರವರಿಗೀ । ಭುವನದೊಳಿನ್ನರಿದುಂಟೆ ॥ ೭೦ ॥
ನೆವಕೊಂದು ಬರಿಯ ಪುಸ್ತಕವ ನೋಡುತ ತನ್ನ । ಕವಿತೆಯೊಳೊಂದುವಾಕ್ಯವನು ॥
ವಿವರಿಸುತಿರ್ದನೊರ್ವನು ಮುನ್ನಲೊಬ್ಬರು । ಕಿವಿಯಲಿ ಕೇಳದಚ್ಚರಿಯಾ ॥ ೭೧ ॥
ಹಸನಾಯ್ತು ಕೃತಿಯಿದನಾರು ಪೇಳ್ದರು ತಮ್ಮ । ಉಸುರೆಂದರರಿಯೆ ನಾನೆನುತ ॥
ನಸುನಗುತಿರೆ ಪುಸ್ತಕವ ಸೆಳಕೊಂಡು ಶೋ । ಧಿಸಿ ಮೆಚ್ಚಿ ತಕ್ಕಯಿಸಿದರು ॥ ೭೨ ॥
ನುಡಿದುದೆಲ್ಲಾಗಮ ಭರತಪುತ್ರರು ತುಟಿ । ವಿಡುಕಿದುದೆಲ್ಲ ಚಿತ್ರಾರ್ಥ ॥
ತೊಡಗಿದುದೆಲ್ಲ ಪುರಾಣ ಕಾವ್ಯದ ಪಾಲು । ಗಡಲೆಂದರೇನ ಬಣ್ಣಿಪೆನು ॥ ೭೩ ॥
ಮುಕ್ತಕ ಕುಳಕ ಮುಂತಾದ ಕವಿತ್ವದ । ಯುಕ್ತಿಯೊಳರುಹನ ಪೊಗಳ್ದು ॥
ಮುಕ್ತಿಗಾಮಿಗಳಾತ್ಮಕಲೆಯ ಭೇದಾಭೇದ । ಭಕ್ತಿಯೊಳೊರೆದರು ಮತ್ತೆ ॥ ೭೪ ॥
ಹೊರಗನರಿವುದೆಲ್ಲ ವ್ಯವಹಾರ ತನ್ನೊಳ । ಗರಿವುದು ನಿಶ್ಚಯವೆಂದು ॥
ಹೊರಗಣ ಚಿಂತೆಯ ನಿಲಿಸಿ ತನ್ನಾತ್ಮನ । ತೆರನರಿದಿಂತು ನುಡಿದರು ॥ ೭೫ ॥
ಭೂಮಿಯೊಳಾಕಾಶವನು ತಂದು ಹೂಳಿದಂ । ತೀ ಮೈಯೊಳಾತ್ಮ ತುಂಬಿಹುದು ॥
ಭೂಮಿಗಚ್ಚರಿಯಲ್ಲವೆಯೆಂದರಾ ಮೋಕ್ಷ । ಗಾಮಿಗಳಧ್ಯಾತ್ಮವರಿದು ॥ ೭೬ ॥
ಎದ್ದ ಕಿಚ್ಚಿಂದ ಬೇವುದು ಮನೆ ಮನೆಯೊಳ । ಗಿದ್ದ ಬೆಂದಪುದೆ ಆಕಾಶಾ ॥
ಹೊದ್ದಿದ ಬಾಧೆಯೆಲ್ಲವು ಮೈಗೆ ಮೈಯೊಳ । ಗಿದ್ದಾತ್ಮಗುಂಟೆ ಬಾಧೆಗಳು ॥ ೭೭ ॥
ಹಲವುಬಣ್ಣದ ಮುಗಿಲಿದ್ದರೇನವರೊಳು । ಕಲಸದೆ ಗಗನವಿಪ್ಪಂತೆ ॥
ಒಲುಮೆ ಮುನಿಸು ಕಾಮ ಲೋಭ ಮುಂತಾದದು । ಮಲವಿದ್ದು ನಿರ್ಮಲನಾತ್ಮ ॥ ೭೮ ॥
ಪಂಚೇಂದ್ರಿಯವಿಲ್ಲವಾತ್ಮಗೆ ಸುಖವೆ ಪ । ಳಂಚಿ ಸರ್ವಾಂಗತುಂಬಿಹುದು ॥
ಪಂಚವರ್ಣಗಳಿಲ್ಲ ಪ್ರಭೆಯೊಳೊಂದಿಹುದದು । ತಾಂ ಚಿತ್ರವೆಂದರಾ ನೃಪರು ॥ ೭೯ ॥
ರಸವಿಲ್ಲ ಗಂಧವಿಲ್ಲೊಡಲೊಳಿರ್ದೊಡಲಿನ । ಬೆಸುಗೆಯಿಲ್ಲಾತ್ಮ ನೋಡಿದರೆ ॥
ಸುಸುಖ ಸುಜ್ಞಾನ ಸುಪ್ರಭೆಗೂಡಿ ತೋರ್ಪನಾ । ಗಸ ತಾನೆ ಪುರುಷನಾದಂತೆ ॥ ೮೦ ॥
ಮನವಿಲ್ಲ ಮಾತಿಲ್ಲ ಮೈಯಿಲ್ಲವಾತ್ಮಗೆ । ಮುನಿಸು ಮೋಹ ಸ್ನೇಹವಿಲ್ಲ ॥
ಜನನ ಮರಣ ರೋಗ ಜರೆ ಮೊದಲಾದುವು । ತನುಮೂರ ತಟ್ಟಿರುತಿಹುವು ॥ ೮೧ ॥
ಬೋಧಾವರಣ ಮುಂತಾದೆಂಟು ಕರ್ಮವಿ । ರೋಧಿಗಳೆರಡುಮೈಯಾಗಿ ॥
ಬೋಧವಮುಂತಾದೆಂಟುಗುಣಭರಿತಾತ್ಮನ । ಬಾಧೆಬಡಿಸಿ ಕಾಡುತಿಹುವು ॥ ೮೨ ॥

ಕೂರ್ಮೆ ಮುನಿಸು ಮೋಹ ಭಾವಕರ್ಮಗಳಿವು । ಕರ್ಮವೆಂಟವು ದ್ರವ್ಯಕರ್ಮಾ ॥
ಚರ್ಮದಾ ತನುವು ನೋಕರ್ಮವೆನಿಪುದಿಂತು । ಕರ್ಮಕಾಂಡಗಳಿವು ಮೂರು ॥ ೮೩ ॥
ಭಾವಕರ್ಮಗಳಿಂದ ದ್ರವ್ಯಕರ್ಮವ ಕಟ್ಟಿ । ಜೀವ ನೋಕರ್ಮವ ತಾಳಿ ॥
ಸಾವುತ ಹುಟ್ಟುತ ಹೆಚ್ಚುತ ಕುಂದುತ । ಧಾವತಿಬಡುತಿಹನಿಂತು ॥ ೮೪ ॥
ಬಹುರೂಪಕಾರನೊಂದೊಂದು ಜೋಹವ ತೊಟ್ಟು । ಬಹುಪರಿಯೊಳಗಾಡುವಂತೆ ॥
ಬಹುವಿಧವಾದ ಪೈಜೋಹವ ತೊಟ್ಟಾತ್ಮ । ವಿಹರಿಸುತಿಹನು ಲೋಕದೊಳು ॥ ೮೫ ॥
ಹಿಡಿದ ಪೈಜೋಹವ ಬಿಡುವನು ಮತ್ತೊಂದ । ತೊಡುವನದನು ಕೂಡೆ ಬಿಡುವಾ ॥
ಪಿಡಿದು ಬಿಡುತಲೀ ಸಂಸಾರನಾಟಕವನು । ನಡೆಯಿಸುತಿಹನಾತ್ಮನಿಂತು ॥ ೮೬ ॥
ಅರಸನಾಗುವನು ಆಳಾಗುವನೊಮ್ಮೊಮ್ಮೆ । ಕಿರಿಕನು ಧನಿಕನಾಗುವನು ॥
ಪುರುಷನಾಗುವನು ಸ್ತ್ರೀಯಾಗುವನಿದು ಕರ್ಮ । ಚರಿತವಲ್ಲಾಯೆಂದರವರು ॥ ೮೭ ॥
ನರನಾಗಿ ಸುರನಾಗಿ ಖಗವಾಗಿ ಮೃಗವಾಗಿ । ಮರನಾಗಿ ನಾರಕನಾಗಿ ॥
ತಿರುಗುತಿಹನು ಭವಮಾಲೆಯೊಳಾತ್ಮನು । ಪರಮಾತ್ಮಕಲೆಯನರಿಯದೆ ॥ ೮೮ ॥
ಅಂಗ ನಾನೆಂಬವ ಬಹಿರಾತ್ಮನಾತ್ಮ ಬೇ । ರಂಗ ಬೇರೆನಲಂತರಾತ್ಮಾ ॥
ಅಂಗಮೂರಳಿದವ ಪರಮಾತ್ಮನಾತ್ಮಯೋ । ಗಾಂಗಿ ತಾನು ಪರಮಾತ್ಮಾ ॥ ೮೯ ॥
ಆತ್ಮತತ್ತ್ವವ ತಿಳಿವಾಗಂತರಾತ್ಮನು । ಆತ್ಮನ ಧ್ಯಾನಿಸುವಾಗ ॥
ಆತ್ಮತಾನೆ ಪರಮಾತ್ಮನೆಂಬುದು ಪರ । ಮಾತ್ಮಜಿನನ ದಿವ್ಯವಾಕ್ಯಾ ॥ ೯೦ ॥

ಕರ್ಮದೊಳಿರ್ದ ನಿರ್ಮಲನಾತ್ಮನಾ ಸೂರ್ಯ । ಪೆರ್ಮೋಡದೊಡಲೊಳಿಪ್ಪಂತೆ ॥
ನಿರ್ಮಲನೆಂದೊಲ್ದು ನಿಚ್ಚ ಧ್ಯಾನಿಸಿದರೆ । ಕರ್ಮ ಹರಿದು ಮುಕ್ತಿಯಹುದು ॥ ೯೧ ॥
ಶುದ್ಧನೆಂಬುದು ನಿಶ್ಚಯಾರ್ಥವಾತ್ಮನು ಕರ್ಮ । ಬದ್ಧನೆಂಬುದು ವ್ಯವಹಾರಾ ॥
ಬದ್ಧನೆಂದೊಡಬಡುವುದು ಕೇಳ್ವಪೇಳ್ವಾಗ । ಶುದ್ಧನೆಂಬುದು ಧ್ಯಾನಿಪಾಗ ॥ ೯೨ ॥
ಶುದ್ಧನೆಂದಾತ್ಮನ ನಿಚ್ಚ ಧ್ಯಾನಿಸಿದರೆ । ಶುದ್ಧರಾಗರೆ ಕರ್ಮವಳಿದು ॥
ಸಿದ್ಧನೆಂದಾತ್ಮನ ನೋಡುವರೆಲ್ಲರು । ಸಿದ್ಧರಾಗುವುದಾವ ಗಹನಾ ॥ ೯೩ ॥
ಸಿದ್ಧಬಿಂಬವ ಜಿನಬಿಂಬವ ಶಿಲೆಯೊಳ । ಗುದ್ಧರಿಪುದು ಭೇದಭಕ್ತಿ ॥
ಶುದ್ಧಾತ್ಮನೊಳಗಿಡೆ ಭೇದವಿಲ್ಲದ ಭಕ್ತಿ । ಸಿದ್ಧಪದವಿಗಿದು ಯುಕ್ತಿ ॥ ೯೪ ॥
ಭೇದಾಭೇದರತ್ನತ್ರಯವೆಂದರೆ । ಭೇದಾಭೇದಭಕ್ತಿಗಳು ॥
ಭೇದಾಭೇದಭಕ್ತಿಗಳಿಂದ ಕರ್ಮವ । ಭೇದಿಸಿದರೆ ಮುಕ್ತಿಯರಿದೆ ॥ ೯೫ ॥
ಯುಕ್ತಿಯರಿದು ಧ್ಯಾನದಭ್ಯಾಸದೊಳು ಭೇದ । ಭಕ್ತಿಯ ಮಾಡಿ ಧ್ಯಾನದೊಳು ॥
ಶಕ್ತನಾದವನು ಮತ್ತದ ಬಿಟ್ಟು ನಿರ್ಭೇದ । ಭಕ್ತಿಯೊಳಿರೆ ಮುಕ್ತಿಯರಿದೆ ॥ ೯೬ ॥

ಸ್ಫಟಿಕದ ಪ್ರತಿಮೆಯ ನೋಡಿ ನಾನಿಂತೆಂದು । ದಿಟದಿ ಕಣ್ಮುಚ್ಚಿ ನೋಡಿದರೆ ॥
ಪುಟವಿಟ್ಟ ಬೆಳುದಿಂಗಳ ಬೊಂಬೆಯೊಲು ದೇಹ । ಘಟ ತುಂಬಿ ತೋರುವನಾತ್ಮಾ ॥ ೯೭ ॥
ಅಚ್ಚ ಬೆಳ್ದಿಂಗಳೊಳಡಗಿದಂತಿಹುದೆದೆ । ಮೆಚ್ಚಿ ಪಾಲ್ಗಡಲ ಪೊಕ್ಕಂತೆ ॥
ಎಚ್ಚತ್ತು ಸಿದ್ಧರಾಶಿಯೊಳೈಕ್ಯವಾದಂತೆ । ನಿಚ್ಚಲೊಪ್ಪಿಹುದಾತ್ಮಯೋಗಾ ॥ ೯೮ ॥
ಜರಿವುತಿಹುದು ಕರ್ಮ ನೆರೆವುತಿಹುದು ಪ್ರಭೆ । ವರಸುಖ ಸುಜ್ಞಾನವೆರಡು ॥
ಪೊರೆಯೇರುತಿಹುವು ತನ್ನಾತ್ಮನ ತಾ ಕಾಣ್ಬ । ಸಿರಿಯನದೇನೆನ್ನಬಹುದು ॥ ೯೯ ॥
ಧ್ಯಾನಾಗ್ನಿಯಿಂದ ತೈಜಸಕಾರ್ಮಣಂಗಳ । ನೇನುಳಿಯದೆ ಭಸ್ಮಮಾಡಿ ॥
ತಾನಾತ್ಮಸಿದ್ಧಿಯ ಪಡೆಯಬೇಕದರಿಂದ । ಧ್ಯಾನವೆ ಮುಖ್ಯ ಭವ್ಯರಿಗೆ ॥ ೧೦೦ ॥
ಗೃಹವಾಸಿಗಳು ಯೋಗಿಗಳು ಧರ್ಮಧ್ಯಾನದ । ಮಹಿಮೆಯೊಳಾತ್ಮನ ನೋಡಿ ॥
ದಹಿಸುವರುಗ್ರಕರ್ಮವನಿದು ಸಮ್ಮತ । ವಹುದೊ ಅಲ್ಲವೊ ಎಂದರವರು ॥ ೧೦೧ ॥
ಅಹುದಹುದಾತ್ಮನ ಧರ್ಮ ಸುಧ್ಯಾನದಿ । ಗೃಹಿಯು ಯೋಗಿಗಳು ಕಾಣುವರು ॥
ಮಹಿತಯೋಗೀಂದ್ರಗಲ್ಲದೆ ಶುಕ್ಲಸುಧ್ಯಾನ । ಗೃಹಿಗಿಲ್ಲವೆಂದರಗ್ರಜರು ॥ ೧೦೨ ॥
ಘಟದ ಪಾಲಂತೆ ತೋರುವನಾತ್ಮ ಧರ್ಮಕೆ । ಸ್ಫಟಿಕಭಾಜನದ ಪಾಲಂತೆ ॥
ಸ್ಫುಟವಾಗಿ ಶುಕ್ಲಕೆ ತೋರುವನಿಷ್ಟೆ ಪ । ಲ್ಲಟವೆಂದರೆರಡುಧ್ಯಾನದೊಳು ॥ ೧೦೩ ॥
ಯುವರಾಜನಂತಿಹುದಾ ಧರ್ಮ ಶುಕ್ಲ ತಾ । ನವನಿಯೊಳಧಿರಾಜನಂತೆ ॥
ಯುವರಾಜನಧಿರಾಜನಪ್ಪಂತೆ ಧರ್ಮವೊ । ಪ್ಪವ ಶುಕ್ಲವಹುದಾಗ ಮುಕ್ತಿ ॥ ೧೦೪ ॥
ಆದ್ಯರ ಮತವಿದೆಂದವರಾಡುವಾಗೊಂದು । ಚೋದ್ಯದ ವಾರ್ತೆ ಬರುತದೆ ॥
ವೇದ್ಯವಾಗೀ ವೇಳೆಗಿಲ್ಲಿ ನಿಂದಿರಲಿದು । ವಿದ್ಯಾಗೋಷ್ಠಿಯ ಸಂಧಿ ॥ ೧೦೫ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೬ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೭ ॥
ವಿದ್ಯಾರೂಪನೆ ವಿಕ್ರಮರೂಪನೆ । ಸದ್ಯೋಜಾತನೆ ಶಾಂತಾ ॥
ಚೋದ್ಯಪುರುಷನೆ ಚೊಕ್ಕನೆ ಜಯ ಭವರೋಗ । ವೈದ್ಯಾ ಚಿದಂಬರಪುರುಷಾ ॥ ೧೦೮ ॥

ವಿದ್ಯಾಗೋಷ್ಠಿ ಸಂಧಿ ಸಂಪೂರ್ಣಂ



# ವಿರಕ್ತಿಸಂಧಿ.

ಶ್ರೀಕರ ಬೋಧರತ್ನಾಕರ ದಿವ್ಯಗು । ಣಾಕರ ವಾಚಾಮಗಮ್ಯಾ ॥
ಲೋಕತ್ರಯಾಧಿಪ ಮತಿದೋರು ಸೂರ್ಯಪ್ರ । ಶಾಕಾ ನಿರಂಜನಸಿದ್ಧಾ ॥ ೧ ॥

ಹಸ್ತಿನಪುರಪತಿ ಮೇಘೇಶ್ವರನು ಪ್ರ । ಶಸ್ತದೀಕ್ಷೆಯನಾಂತನೆಂದು ॥
ಪ್ರಸ್ತುತವಾರ್ತೆಯು ಸಾಹಿತ್ಯಗೋಷ್ಠಿಯ । ಪ್ರಸ್ತಾವದೊಳು ಬಂದುದವರ್ಗೆ ॥ ೨ ॥

ನುಡಿವ ಪ್ರಸಂಗವ ಬಿಟ್ಟೆಂತುಟೆಂತುಟೆಂ । ದೊಡನೊಡನದನೆ ಕೇಳಿದರು ॥
ಪೊಡವಿಯನಾರ್ಗೆ ಕೊಟ್ಟನು ಮಗಗಿತ್ತನೊ । ಒಡಹುಟ್ಟಿದರಿಗೇನನಿತ್ತಾ ॥ ೩ ॥

ತನ್ನಿಂದ ಕಿರಿಯನ ವಿಜಯರಾಜನ ಕರೆ । ದಿನ್ನು ನೀನಿಳೆಯನಾಳೆಂದಾ ॥
ನಿನ್ನನಗಲಿ ಬಾಳ್ವ ಸಿರಿಯು ಸುಡಣ್ಣಾಜಿ । ನಿನ್ನೊಡನೆಯ್ದುವೆನೆಂದಾ ॥ ೪ ॥

ಅವನ ಕಿರಿಯನ ಜಯಂತರಾಜನ ಕರೆ । ದವನಿಯನಾಳ್ತಮ್ಮಯೆಂದಾ ॥
ನಿವಗಲ್ಲದಿಳೆ ನನಗೊಳ್ಳಿತೆ ನಿಮ್ಮ ಮಾ । ರ್ಗವೆ ಮಾರ್ಗ ನನಗೆಂದನವನು ॥ ೫ ॥

ಅನುಜರ ತಾನೊಡಬಡಿಸಲಾರದೆ ತನ್ನ । ತನುಜಗನಂತವೀರ್ಯನಿಗೆ ॥
ವಿನುತಪಟ್ಟವ ಕಟ್ಟಿ ತಮ್ಮಂದಿರೊಡಗೂಡಿ । ಜಿನದೀಕ್ಷೆವಡೆದನಾ ನೃಪತಿ ॥ ೬ ॥

ಶಿಶುವಿಗೆ ಪಟ್ಟವೆಂದಿಳೆಯು ಪ್ರಧಾನರ । ವಶಮಾಡಿ ಹೋದನಾ ನೃಪತಿ ॥
ಶಿಶುವಲ್ಲಾದರೆ ಕೂಡೆ ದೀಕ್ಷೆಗೆಯ್ದುವನಲ್ಲ । ದಶುಚಿರಾಜ್ಯದೊಳವನಿಹನೆ ॥ ೭ ॥

ಇಂತೆಂಬ ಸುದ್ದಿಯು ಕೇಳ್ದವರೆಲ್ಲರೋ । ರಂತೆ ವಿಸ್ಮಯಚಿತ್ತರಾಗಿ ॥
ಮುಂತೆ ಮೂಗಿನ ಮೇಲೆ ಬೆರಳಿಟ್ಟು ಜಿನಜಿನ । ನೋಂತರೆಂದೊಲೆದರು ಶಿರವಾ ॥ ೮ ॥

ಎಲ್ಲರ್ಗೆ ಪಿರಿಯಾತ ರವಿಕೀರ್ತಿರಾಜನಂ । ತಲ್ಲವೆ ಮತ್ತಾವುದೆಂದಾ ॥
ಬಲ್ಲವಿಕೆಯ ಫಲವಾವುದೆಂದರೆ ಮೋಕ್ಷ । ದಲ್ಲಿಗುಜ್ಜುಗಿಪುದೊಂದೆಂದಾ ॥ ೯ ॥

ಅರಿವುದರಿದು ಪರಮಾತ್ಮತತ್ತ್ವವನೊಮ್ಮೆ । ಯರಿದರು ನಂಬುವುದರಿದು ॥
ಅರಿದು ನಂಬಿದರು ಸಂಯಮಕಾಗಿ ಸರ್ವವ । ತೊರೆದರವರೆ ಧನ್ಯರೆಂದಾ ॥ ೧೦ ॥

ಮೇಘೇಶ್ವರನು ರಾಜ್ಯವನ್ನಾಳ್ದು ಕಂಡುಂಡು । ಲಾಘವವೆಂದದ ಬಿಡಲಿ ॥
ನೋಘವೆ ವಿಜಯಜಯಂತರು ನೃಪಲಕ್ಷ್ಮಿ । ಮೋಘದೊಡ್ಡೆಂದುದು ಹೆಚ್ಚು ॥ ೧೧ ॥

ಪ್ರಾಯಶಕ್ತಿಯು ತನುಸುಖಕಾಗಿ ಕೆಡಿಸದೆ । ಒಯ್ಯಾರದಿಂದಾತ್ಮಸಶಕೆ ॥
ಕಾಯುವ ತಪಸಿಗೊಡ್ಡಿದರವರೆ ಮಹಾ । ರಾಯರೆಂದನು ಮನಮೆಚ್ಚಿ ॥ ೧೨ ॥

ಚಕ್ರವರ್ತಿಯ ಮಕ್ಕಳೆಂದರೆ ನಾವೆಲ್ಲ । ಚಕ್ರವರ್ತಿಗಳೆ ಭೂಮಿಪರು ॥
ಚಕ್ರಿಯನೆರಗಿಸಿಕೊಂಡರು ಸುಜ್ಞಾನ । ಚಕ್ರವರ್ತಿಗಳೆಂದನವನು ॥ ೧೩ ॥

ಕುನಿದಿಂದುತನಕ ನಮ್ಮಪ್ಪಾಜಿಗೆರಗಿ ಮೇ । ದಿನಿವಡೆದಿರ್ದರಿಂದೆಮ್ಮ ॥
ಜನಕನ ತವಗೆರಗಿಸಿಕೊಂಡರವರಹೊ । ಜಿನದೀಕ್ಷೆ ಸದರವೆಯೆಂದಾ ॥ ೧೪ ॥

ನಮ್ಮಯ್ಯನೆರಗುವುದೇನು ದೊಡ್ಡಿತು ಪರ । ಬೊಮ್ಮವಿಡಿದ ಯೋಗಿಗಳಿಗೆ ॥
ಘಮ್ಮನೆ ಮೂಲೋಕವೆರಗುವುದಳಿಗಳು । ಕಮ್ಮಲರ್ಗೆರಗುವಂದದೊಳು ॥ ೧೫ ॥

ಸುಜಯಾತ್ಮ ಕೇಳು ಸುಕಾಂತಾತ್ಮ ಕೇಳರಿ । ವಿಜಯಾತ್ಮ ಮುಂತಾದರೆಲ್ಲ ॥
ನಿಜದಿ ಲಾಲಿಸಿರಣ್ಣ ದೀಕ್ಷೆಗೆಣೆಯ ಲಾಭ । ತ್ರಿಜಗದೊಳಿಲ್ಲೆಂದನವನು ॥ ೧೬ ॥

ಶುಕ್ಲಸುಧ್ಯಾನಕೆ ಸಹಕಾರಿ ದೀಕ್ಷೆಯು । ಶುಕ್ಲ ಮುಕ್ತಿಗೆ ಸಹಕಾರಿ ॥
ಶುಕ್ಲದಿ ಕರ್ಮವಳಿದು ಮುಕ್ತಿಗೆಯ್ದದೆ । ವಿಕ್ಲಬರಿಹರೆಂದನವನು ॥ ೧೭ ॥

ಆ ವಚನವ ಕೇಳುತೊಡನಿರ್ದರೆಲ್ಲರು । ತಾವು ಮತ್ತದನೆ ಮೆಚ್ಚಿದರು ॥
ನಾವು ದೀಕ್ಷೆಯ ಕೊಂಬವೆಯೆಂದು ತವ್ಮೊಳು । ತಾವು ಯೋಚನೆಯ ಮಾಡಿದರು ॥ ೧೮ ॥

ಪ್ರಾಯ ತಗ್ಗದ ಮುನ್ನ ಕಾಯ ಜಗ್ಗದ ಮುನ್ನ । ಸ್ತ್ರೀಯರು ಮಕ್ಕಳೆಂದೆಂಬ ॥
ಮಾಯೆ ಮುತ್ತದ ಮುನ್ನಯೆಚ್ಚರಬೇಕೆಂದು । ಪಾಯವ ನೋಡಿದರವರು ॥ ೧೯ ॥

ಕಣ್ಣರಿದಪ್ಪಾಜಿ ನಮಗೆಯಿನ್ನೊಂದೊಂದು । ಹೆಣ್ಣ ಸಂಬಂಧಮಾಡುವನು ॥
ಹೆಣ್ಣಿಗೆ ಸಿಕ್ಕಿ ಬಾಳುವ ಬಾಳು ನೊಣ ಹಾರಿ । ಯೆಣ್ಣೆಯೊಳಗೆ ಬಿದ್ದ ರೀತಿ ॥ ೨೦ ॥

ಹೆಣ್ಣ ಹಿಡಿದ ಮೇಲೆ ಹೊನ್ನ ಹಿಡಿಯಬೇಕು । ಮಣ್ಣ ಹಿಡಿಯಬೇಕು ಸಹಜಾ ॥
ಹೆಣ್ಣು ಹೊನ್ನು ಮಣ್ಣವಿಡಿದಾತ್ಮರೆಲ್ಲರು । ಮಣ್ಣವಿಡಿದ ಲೋಹದಂತೆ ॥ ೨೧ ॥

ಹೆಣ್ಣ ಹಿಡಿದ ಮೇಲೆ ಹೊನ್ನು ಮಣ್ಣಿಗೆ ನಮ । ಗಣ್ಣ ಚಿಂತಿಸಬೇಡವುಂಟು ॥
ಬಣ್ಣಿಸಲುಂಟಾದರೇನಾತ್ಮಹಿತವಲ್ಲ । ಬಣ್ಣಗೆಡಿಪ ಭವಪಾಶಾ ॥ ೨೨ ॥

ಸಿರಿಯಿದ್ದು ತೊರೆವುದು ಹೆಚ್ಚು ಜವ್ವನದಲ್ಲಿ । ವರದೀಕ್ಷೆವಡೆವುದು ಹೆಚ್ಚು ॥
ಪರಮಾತ್ಮತತ್ತ್ವವನರಿವುದು ಹೆಚ್ಚಿವು । ದೊರೆಕೊಂಡರೆಮಗರಿದುಂಟೆ ॥ ೨೩ ॥

ಕುಲ ಬಲ ಸಿರಿ ಸೊಬಗಿದ್ದರೆಲ್ಲವ ಬಿಟ್ಟು । ಗೆಲವಾಂತು ತಪಸುಮಾಡಿದರೆ ॥
ಚೆಲುವೆ ಪತಿವ್ರತೆಯಾದಂತೆ ಹೆಚ್ಚಿನ । ಫಲವಹುದೆಂದೆಣಿಸಿದರು ॥ ೨೪ ॥

ಹೆಣ್ಣ ಸೋಂಕದ ಮನ ಪುಟವೇರುತಿಹುದದು । ಹೆಣ್ಣ ತೋಳ್ವಲೆಗೆ ಬಿದ್ದಾಗ ॥
ಪೊಣ್ಣಪೊಣ್ಣನೆ ಹಾರುವೆರಳೆ ಮೋಸದಿ ಕಾಲು । ಕಣ್ಣಿಗೆ ಸಿಲುಕಿದಂತಹುದು ॥ ೨೫ ॥

ಹೆಣ್ಣಾನೆಗಾಟಿಸಿ ಹಿರಿಯುಕಪ್ಪಿನೊಳಾನೆ । ಕಣ್ಣುಗಾಣದೆ ಬೀಳುವಂತೆ ॥
ಹೆಣ್ಣಿಗೆ ಮೋಹಿಸಿ ಭವಕೆ ಬೀಳುವರೆಲ್ಲ । ಕಣ್ಣಿದ್ದು ಕುರುಡರೇನಲ್ತೆ ॥ ೨೬ ॥

ಗಾಣದ ತುದಿಯ ಮಾಂಸಕೆ ತುಡುಕಿದ ಮೀನು । ಗೋಣನಿರಿಯಿಸಿಕೊಂಬಂತೆ ॥
ಜಾಣೆಯರಿಗೆ ಸೋತು ಜವಗೊಳಗಹುದೊಂದು । ಜಾಣತನವೆಯೆಂದರವರು ॥ ೨೭ ॥

ಮೊದಲು ಹೆಂಗಳ ಸಂಗವೆಂಬುದೆ ಭಾರ ಮ । ತ್ತದರಲ್ಲಿ ಸುತರು ಹುಟ್ಟಿದರೆ ॥
ಅದು ಮುಂದೆ ಬಲುಭಾರವೆಂದು ಸಂಸಾರಕೆ । ಬೆದರಿದರವರು ಬೇಗದೊಳು ॥ ೨೮ ॥

ಕಂಜಾಕ್ಷಿ ಕಾಲ ಸಂಕಲೆ ಮಕ್ಕಳಾದರೆ । ಗುಂಜಿನ ಕೊರಳ ಸಂಕಲೆಯು ॥
ಜಂಜಿರಿಸಂಕಲೆಯೊಳಗಾರು ಬಾಳ್ವರೆಂ । ದಂಜಿದರವರು ದಂದುಗಕೆ ॥ ೨೯ ॥

ಮುದ್ದಿಸುತಿಹರು ಮಕ್ಕಳನವು ತೊಡೆಯ ಮೇ । ಲಿದ್ದಂತೆ ಮಲವ ಬಿಡುವುವು ॥
ಎದ್ದು ವಸ್ತ್ರವ ಹಾಕಿ ಹೇಸುತಿಹರು ಛೀ ಛೀ । ದೊಡ್ಡೆಗರೆನೆ ನಕ್ಕರವರು ॥ ೩೦ ॥

ಮುದ್ದಿಗೆ ಕೂಡಿಕೊಂಡುಣುತಿಹರೊಡನುಣು । ತಿದ್ದಾಗ ಬಿಡುವುವು ಮಲವಾ ॥
ಮುದ್ದಿಗಪ್ಪುದು ಮುಟ್ಟು ಘಡ ಶಿಶುಮೋಹದೊ । ಳದ್ದಿದವರ ಬಾಳು ಭ್ರಾಂತಿ ॥ ೩೧ ॥

ನೀರೆಗೆ ರೋಗ ಬಂದಾಗೊಮ್ಮೆ ಮೈಯೆಲ್ಲ । ನಾರುತಿಹುದು ನಲ್ಲನಾಗ ॥
ಮೋರೆಯನತ್ತಿತ್ತ ತೆಗೆಯುತಿಹನು ಬಣ್ಣ । ಗಾರಿಕೆಯಲ್ಲವೆ ಮೋಹಾ ॥ ೩೨ ॥

ಬಾಣತಿ ಬಸುರಿ ಮುಟ್ಟಲತಿಯಾದಲ್ಲಿ । ಶೋಣಿತ ಶುಕ್ಲ ದುರ್ಮಲವಾ ॥
ಕಾಣುತ ಹೊದಕುಳಿಗೊಳುತಿಹರದರಲ್ಲಿ । ಕೋಣಗಳೊದೆದಾಡುವಂತೆ ॥ ೩೩ ॥

ಉಚ್ಚೆಯ ಕುಣಿಗೆ ಮೋಹಿಸಿ ಮುಕ್ತಿಗಾಣದೆ । ಹುಚ್ಚರು ಬಾಳುವರೈಸೆ ॥
ಸಚ್ಚರಿತರು ನಾವು ಸಿಕ್ಕಬಹುದೆಯೆಂದು । ಯೆಚ್ಚತ್ತರವರು ಬೇಗದೊಳು ॥ ೩೪ ॥

ಸುಖಕೆ ಸ್ತ್ರೀಪುರುಷರಿಬ್ಬರು ಸೋಂಕಿ ಬಸುರಾದ । ರಖಿಳರು ನೆರೆದು ರಚ್ಚೆಯೊಳು ॥
ಮುಖಬಾಡಿ ಮುಲುಕುತ ನೊರೆಯಿಟ್ಟು ಹೆರುವುದು । ಸುಖವೆ ಛೀಛೀಯೆಂದರವರು॥ ೩೫ ॥

ಬೊಟ್ಟೆನನಿತು ಸುಖಕಾಗಿ ದುಃಖವನೊಂದು । ಬೆಟ್ಟದನಿತನುಂಬರಕಟಾ ॥
ಬಿಟ್ಟರೆ ವಿಷಯುವ ಸುಖ ಬೆಟ್ಟದನಿತೊಂದು । ಬೊಟ್ಟೆನಷ್ಟಹುದು ಭವಾಬ್ಧಿ ॥ ೩೬ ॥

ಸ್ವರ್ಗದ ದಿವ್ಯದೇಹದ ವನಿತೆಯರ ಸಂ । ಸರ್ಗದಿ ತಣಿದುದಿಲ್ಲಾತ್ಮಾ ॥
ದುರ್ಗಂಧದೇಹದ ಮನುಜಕಾಂತೆಯರುಪ । ಸರ್ಗದೊಳಿನ್ನು ತಣಿವನೆ ॥ ೩೭ ॥

ಸುರಲೋಕ ನರಲೋಕ ನಾಗಲೋಕದ ಪೆಣ್ಣ । ತಿರಿಯಂಚಗತಿಯ ಪೆಣ್ಣುಗಳಾ ॥
ತಿರುಗಿತಿರುಗಿ ಭವದೊಳಗೆ ಹಲವುಬಾರಿ । ನೆರೆದು ತಣಿದನೆ ನಮ್ಮಾತ್ಮಾ ॥ ೩೮ ॥

ಬಾಯಾರಿದವರುಪ್ಪುನೀರ್ಗುಡಿಯಲು ಮತ್ತೆ । ಬಾಯಾರು ಹೆಚ್ಚುವಂದದೊಳು ॥
ಸ್ತ್ರೀಯರ ನೆರೆದರೆ ತೃಪ್ತಿಯಾಗದು ಮತ್ತು । ಸ್ತ್ರೀಯಾಶೆಯೆ ಹೆಚ್ಚುತಿಹುದು ॥ ೩೯ ॥

ಕಿಚ್ಚು ನೀರಿಂದ ನಂದುವುದದು ನೆಯ್ಯಿಂದ । ಹೆಚ್ಚುವುದಂತೆ ಕಾಮಾಗ್ನಿ ॥
ಸಚ್ಚಿದಾನಂದಾತ್ಮರಸದಿ ನಂದುವುದದು । ಹೆಚ್ಚುವುದಬಲೆಯರಿಂದ ॥ ೪೦ ॥

ಕಾಮಾಗ್ನಿಯೊಂದಲ್ಲ ಪಂಚೇಂದ್ರಿಯವೆಂಬ । ನಾಮದೊಳೆಸೆವ ಪಂಚಾಗ್ನಿ ॥
ಪ್ರೇಮವಸ್ತುವನಿತ್ತರುಬ್ಬುವುವಾತ್ಮಾ । ರಾಮನಾದಾಗ ತಗ್ಗುವುವು ॥ ೪೧ ॥

ಸ್ನಾನ ಭೋಜನ ಗಂಧ ಪುಷ್ಪ ವಿಭೂಷಣ । ಪಾನ ದುಕೂಲ ತಾಂಬೂಲಾ ॥
ಗಾನ ಮುಂತಾದುವಾತ್ಮನ ತಣಿಸವು ತನ್ನ । ಧ್ಯಾನವೊಂದೆ ತಣಿಸುವುದು ॥ ೪೨ ॥

ಇಂದಲ್ಪಸುಖಕಾಶೆವಾಡಲೀಯದು ಧ್ಯಾನ । ಮುಂದೆ ಮುಕ್ತಿಯನೀವುದದಕೆ ॥
ದಂದುಗವಳಿದು ದೀಕ್ಷೆಯನಾನಬೇಕೇಳಿ । ರೆಂದೆಲ್ಲರೊಪ್ಪಿ ನುಡಿದರು ॥ ೪೩ ॥

ಕೈಲಾಸಗಿರಿಗೆ ಹೋಗುವವಲ್ಲಿ ಮಂದರ । ಶೈಲದಂತೆಸೆವಾದಿಜಿನನ ॥
ಕೈಲೇಸಿನಿಂದ ದೀಕ್ಷೆಯ ಕೊಂಬವೆನುತಾಗ । ವೈಲಾಗಿನಿಂದೆದ್ದರವರು ॥ ೪೪ ॥

ಅಪ್ಪಾಜಿಗರುಹಿ ದೀಕ್ಷೆಗೆ ಕಳುಹಿಸಿಕೊಂಡು । ಬಪ್ಪೆವೆಂದರು ಕೆಲರಲ್ಲಿ ॥
ಅಪ್ಪಾಜಿಯರಿದರೆ ನಮ್ಮ ದೀಕ್ಷೆಯ ಕಾರ್ಯ । ತಪ್ಪುವುದೆಂದರು ಕೆಲರು ॥ ೪೫ ॥

ಅಪ್ಪಾಜಿಯರನೊಮ್ಮೆ ಭಾವಿಸಿ ಬೀಳ್ಕೊಡ । ಲಪ್ಪುದೆಮ್ಮಯ ತಾಯಿಗಳನು ॥
ಒಪ್ಪುಗೊಳಿಸಲರಿದವರಂದರೆ ಕಾರ್ಯ । ತಪ್ಪುವುದೆಂದರು ಕೆಲರು ॥ ೪೬ ॥

ತಾಯಿಗಳೊಡನೆ ಹೇಳಿದರೆ ಮಕ್ಕಳಿರಾ ಲೇ । ಸಾಯಿತು ಹೋಗಿಯೆಂದಪರೆ ॥
ಖೋಯೆಂದು ಬಂದೆಮ್ಮ ಕೊರಳ ತಕ್ಕಿಸಿಕೊಂಡು । ಬಾಯುಳಿದುರೆ ಹಲುಬುವರು ॥ ೪೭ ॥

ಒಡವೆಯನೊಪ್ಪಿಸಬೇಕೊ ಮಕ್ಕಳ ಕೈಯ । ಲೆಡೆಗೊಟ್ಟು ಬರಬೇಕೊ ನಮ್ಮ ॥
ಮಡದಿಯರನು ತೋರಿ ಸಲಹೆಂದು ಬರಬೇಕೊ । ತೊಡಕೇನು ನಮಗಯ್ಯನೊಡನೆ॥ ೪೮ ॥

ನಮ್ಮಿಂದ ತೊಡಕಿಲ್ಲದಿರೆ ಮಾಣಲವರಿಗಿ । ನ್ನೆಮ್ಮ ಪೆತ್ತವರ ಬಾಳಿಕೆಗೆ ॥
ನಮ್ಮಿಂದ ಮುಂದೆಂತುಟೆಂದು ಚಿಂತಿಸಬೇಕೊ । ಇಮ್ಮೆಯ್ಯ ಸಿರಿವಂತರವರು ॥ ೪೯ ॥

ಅವರ ಹಂಗೆಮಗಿಲ್ಲ ನಮ್ಮ ಹಂಗವರ್ಗಿಲ್ಲ । ಅವರಿಗವರು ನಾವು ನಮಗೆ ॥
ಭವಮಾಲೆಯೊಳು ನೋಡಲಾರಿಗಾರುಂಟೆಂದು । ತವತವಗೆಲ್ಲರಾಡಿದರು ॥ ೫೦ ॥

ಮಗನಯ್ಯನಾಗುವನಯ್ಯನಾ ಮಗನಿಗೆ । ಮಗನಹನೊಂದುಜನ್ಮದೊಳು ॥
ಮಗಳು ತಾಯಾಗುವಳಾ ತಾಯಿ ಮಗಳಿಗೆ । ಮಗಳಹಳೊಂದು ಜನ್ಮದೊಳು ॥ ೫೧ ॥

ಅಣ್ಣನೆ ತಮ್ಮನಾಗುವನೊಮ್ಮೆ ತಮ್ಮನೆ । ಅಣ್ಣನಾಗುವನೊಂದುಭವಕೆ ॥
ಹೆಣ್ಣೊಮ್ಮೆ ಗಂಡು ಗಂಡೊಮ್ಮೆ ಹೆಣ್ಣಹುದಿದು । ಅಣ್ಣ ನೀವರಿಯದ ತೆರನೆ ॥ ೫೨ ॥

ಪಗೆಯೊಮ್ಮೆ ಕೆಳೆಯನಾಗುವನೊಮ್ಮೆ ಕೆಳೆಯನೆ । ಪಗೆಯನಾಗುವನದರಿಂದ ॥
ಪಗರಣದಂತಿರ್ದ ಭವಡೊಳಿನ್ನಾರಾರ । ಬಗೆದೆಣಿಸುವೆವೆಂದರವರು ॥ ೫೩ ॥

ತಾಯುದರದಿ ತಂದ[illegible]ನು ನಮಗೆರವಿನ್ನು । ತಾಯಿತಂದೆಗಳ ಮಾತೇನು ॥
ನ್ಯಾಯವಿದೇಳಿ ದೀಕ್ಷೆಗೆ ನಮೋ ಹಂಸನಾ । ಥಾಯಯೆಂದೊಡನೆದ್ದರವರು ॥ ೫೪ ॥

ಊಳಿಗದವರು ಜಾರಿದರೆ ತಂದೆಗೆ ಹೋಗಿ । ಹೇಳುವರೆಂದು ತಮ್ಮೊಳಗೆ ॥
ಆಲೋಚಿಸಿಕೊಂಡು ಹಲವುತಂತ್ರಗಳಿಂದ । ಚಾಳೈಸಿಕೊಂಡೊಯ್ದರವರಾ ॥ ೫೫ ॥

ಕಡುಗಲಿಗಳು ಕದನಕೆ ಬೆಸನನು ಬೇಡ । ಲೊಡೆಯುನಿದ್ದೆಡೆಗೆ ಪೋಪಂತೆ ॥
ಕೊಡು ಸ್ವಾಮಿ ದೀಕ್ಷೆಯ ಜವನನಟ್ಟುವೆವೆಂದು । ನುಡಿಯುಲೆಯ್ದಿದರಜ್ಜನೆಡೆಗೆ ॥ ೫೬ ॥

ಅರಿಕರ್ಮಗಳ ಸುಡುವೆವು ಮೋಕ್ಷದುರ್ಗಕೆ । ಹರಿದಾಳಿವಿಡುವೆವೀ ಭಾಷೆ ॥
ಅರುಹ ನಿನ್ನರಿಕೆಯೆಂದಾ ಪಾಡುಪಂಥವ । ಬರೆಯಿಸಲೆಯ್ದಿದರವರು ॥ ೫೭ ॥

ಪ್ರಜೆಗಳು ಕಂಡು ಕೈಮುಗಿದು ದೇವರಿದೆತ್ತ । ಬಿಜಯಂಗೆಯ್ವಿರೆಂದೆನಲು ॥
ರಜತಾದ್ರಿಗರುಹನ ಕಾಣಲೆಯ್ದುವೆವೆಂದು । ವಿಜಿತರಂದುಸುರುತೆಯ್ದಿದರು ॥ ೫೮ ॥

ಪಾದಮಾರ್ಗದೊಳೇಕೆ ಚಿತ್ತಯಿಸುವಿರೆಂದ । ರಾದಿನಾಥನ ಕಾಣ್ಬ ತನಕ ॥
ಹಾದಿಯೊಳಿಂತೊಂದು ನಿಯಮುಸುವ್ರತ ನಮ । ಗಾದುದೆನುತ ತೆರಳಿದರು ॥ ೫೯ ॥

ಇಂದೆಮ್ಮ ಸ್ವಾಮಿಯ ಸುಕುಮಾರಕರು ತೀರ್ಥ । ವಂದನೆಗಡಿಯಿಟ್ಟರೆನುತ ॥
ಮುಂದೆ ಪರಿದು ಪ್ರಜೆಗಳು ಪುರಪುರತಪ್ಪ । ದಂದೊಸಗೆಯ ಮಾಡಿಸಿದರು ॥ ೬೦ ॥

ಅಲ್ಲಲ್ಲಿ ಗುಡಿತೋರಣಂಗಟ್ಟಿಯಿದಿರ್ಗೊಳ । ಲಲ್ಲಲ್ಲಿ ನಿಂದು ವಿಶ್ರಮಿಸಿ ॥
ಎಲ್ಲರರ್ತಿಯ ನೂಂಕಿ ಸಲಿಸುತ ಬಂದರು । ಬೆಳ್ಳಿವೆಟ್ಟಕೆ ಮುಟ್ಟಮುಟ್ಟ ॥ ೬೧ ॥

ಅನುಜರುಗೂಡಿ ಮೇಘೇಶ್ವರ ಮುನಿಯಾದ । ನೆನಲೆದ್ದು ಕೈಲಾಸಗಿರಿಯ ॥
ಸನಿಹಕೆ ಬಂದರೆಂಬಲ್ಲಿಗೆ ಭರತನಂ । ದನರ **ವಿರಕ್ತಿಯ ಸಂಧಿ** ॥ ೬೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೬೩ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೬೪ ॥

ಸುಜ್ಞಾನರೂಪನೆ ಸುಜ್ಞಾನಕಾಯನೆ । ಸುಜ್ಞಾನಶೃಂಗಾರಹಾರಾ ॥
ಸುಜ್ಞಾನಸೂರ್ಯ ನನ್ನಂತರಂಗದೊಳಿರು । ಪ್ರಜ್ಞಾ ಚಿದಂಬರಪುರುಷಾ ॥ ೬೫ ॥

ವಿರಕ್ತಿಸಂಧಿ ಸಂಪೂರ್ಣಂ



## ಸಮವಸರಣಸಂಧಿ.

ದುರಿತಗೋಧೂಮಘರಟ್ಟ ಸುಚ್ಯುತಕಿಟ್ಟ । ವರಹೇಮನಿಭ ಶುದ್ಧವಸ್ತು ॥
ಕರುಣಿಸು ಮತಿಯ ರತ್ನಾಕರಸಿದ್ಧನ । ಗುರುವೆ ನಿರಂಜನಸಿದ್ಧಾ ॥ ೧ ॥

ಬೆಳುಮುಗಿಲೊಡ್ಡಿ ಬೇರೂರಿ ಭೂಮಿಯೊಳುಬ್ಬಿ । ಬೆಳೆದು ಬೆಳ್ವೆಟ್ಟವಾದಂತೆ ॥
ತಳತಳಿಸುವ ಬೆಳುವೆಳಗಿಂದ ರಜತಾದ್ರಿ । ಹೊಳೆದುದಾ ಕುವರರ ಮುಂದೆ ॥ ೨ ॥

ಚಂದ್ರಮಂಡಲಗಳು ಹಲವೊಂದುಗೂಡಿ ಗಿ । ರೀಂದ್ರನಾದಂತೊಪ್ಪುತಿದಕೊ ॥
ಚಂದ್ರಗಿರಿಯೊ ಇದು ರಜತಗಿರಿಯೊಯೆಂದು । ಇಂದ್ರವೈಭವರು ನೋಡಿದರು ॥ ೩ ॥

ಹಾಲ ಸಮುದ್ರ ಬಲಿದು ಬೆಟ್ಟವಾದಂತೆ । ಸೋಲಿಸುತಿದಕೊ ಚಿತ್ತವನು ॥
ಹಾಲ ಬೆಟ್ಟವೊ ಇದು ಬೆಳ್ಳಿಯ ಬೆಟ್ಟವೊ । ಹಾ ಲೇಸುಲೇಸೆಂದರವರು ॥ ೪ ॥

ಆದಿಜಿನನ ಕೀರ್ತಿ ಮೂರ್ತಿವಡೆದು ಗಿರಿ । ಯಾದುದೊ ಭವ್ಯರ ಪುಣ್ಯಾ ॥
ಈ ದಿವ್ಯಗಿರಿಯಾಯ್ತೊ ಜಿನಜಿನಯೆನುತ ಬಂ । ದಾ ದೇವಗಿರಿಯ ಸಾರಿದರು ॥ ೫ ॥

ಚಿನ್ನದ ಬೆಟ್ಟಗಳೈದುಂಟು ರಜತಾದ್ರಿ । ಯಿನ್ನವು ನೂರೆಪ್ಪತ್ತುಂಟು ॥
ನಿನ್ನಂತೆ ಸಮವಸರಣವನಾಂತವೆಯೆಂದು । ಬಿನ್ನಣಿಸಿದರಾ ಗಿರಿಯನು ॥ ೬ ॥

ಸಿದ್ಧಲೋಕಕೆ ಪೋಪರಿದು ತಾನೆ ಸೂಚನೆ । ಸಿದ್ಧಶಿಲೆಯೊಲಿದೆ ಶೈಲಾ ॥
ಸಿದ್ಧಂ ನಮೋಯೆಂದು ಹಬ್ಬುಗೆವಿಡಿದದ । ರುದ್ದವನೇರಿದರವರು ॥ ೭ ॥

ಅಂಚೆಗಳಿಂಗಡಲೊಳು ಹರಿವಂತೆಳೆ । ಮಿಂಚೇರುವಂತೆ ಬೆಳ್ಮುಗಿಲಾ ॥
ಹಿಂಚುಮುಂಚಾಗದೆ ತಮ್ಮೊಳೊರ್ವರು ಹರಿ । ಹಂಚಾಗದೇರಿದರವರು ॥ ೮ ॥

ಕಾಸೆಯ ಮೇಲುಡೆಸುತ್ತಿದ ಹಚ್ಚಡ । ಬೀಸುವ ತೋಳ್ತಿಗೆದಂಗಿ ॥
ಸೂಸುವ ಗಾಳಿಗೆ ಮೈಗೊಡುತವರು ಕೈ । ಲಾಸಪರ್ವತವ ಹತ್ತಿದರು ॥ ೯ ॥

ತಾರಾದ್ರಿಯಗ್ರಕೆ ಹತ್ತಿಬರುತ ಬರು । ತೋರಂತೆ ತಾನೊಂದ ನೆನೆದು ॥
ನೀರಂಜಯರಾಜ ರವಿಕೀರ್ತಿರಾಜನ । ಸಾರಲೆಯ್ತಂದಿಂತು ನುಡಿದಾ ॥ ೧೦ ॥

ದೇವರಂದೊಮ್ಮೆ ನೀವಪ್ಪಾಜಿಯೊಡನೆಯ್ದಿ । ದೇವನ ಕಂಡಿದ್ದಿರಲ್ತೆ ॥
ದೇವನೋಲಗದಂದವೆಂತಿಹುದದನಿಂದು । ನೀವೆಮಗುಸುರಬೇಕೆಂದಾ ॥ ೧೧ ॥

ಊರ ನೋಡುವೆನೆಂದು ಹೊರಗೇರಿಗೆಯ್ತಂದು । ಊರೆಂತುಟಿಹುದೊಯೆಂಬಂತೆ ॥
ದೂರವೆ ನೀವಿಂದು ಕಾಣ್ಬಿರಿ ಬನ್ನಿರೈ । ದಾರಿಯ ಮಾತೇತಕೆಂದಾ ॥ ೧೨ ॥

ಆಗಲಿನ್ನದಕೇನು ನಮಗೊಂದಿನಿಸು ಹೊತ್ತು । ಹೋಗಲಿ ಹಾದಿಯೊಳೀಗ ॥
ಶ್ರೀಗುರುವಿನ ಪುಣ್ಯಕಥನವ ನುಡಿದಾಡ । ಲಾಗದೆ ಚಿತ್ತಯಿಸೆಂದಾ ॥ ೧೩ ॥
ಆದರೆ ವೀರಂಜಯನೆ ಕೇಳು ಮುನ್ನ ನಾ । ನಾದಿನಾಥನ ಕಂಡೆನಹುದು ॥
ಆ ದೇವನಿರವೆಂಬುದಾ ಸಭೆಯೆಂಬುದು । ಮೇದಿನಿಗತಿಚೋದ್ಯವಣ್ಣಾ ॥ ೧೪ ॥
ಜಿನಸಭೆ ಜಿನವಾಸ ಸಮವಸರಣವೆಂದು । ಜಿನಪುರವೆಂದರೇಕಾರ್ಥಾ ॥
ಜಿನನಿಹ ಸುಕ್ಷೇತ್ರದಾ ಪೆಸರಿನ್ನದ । ರನುವ ಲಾಲಿಸು ಮೋಕ್ಷರಸಿಕಾ ॥ ೧೫ ॥
ಗಿರಿಯು ಮುಟ್ಟದೆ ಗಿರಿಯಿಂದ ಮೇಲೈದುಸಾ । ವಿರಮಾರ ಬಿಟ್ಟು ಬಾನದೊಳು ॥
ಇರುತಿಹುದಾತನ ಸಭೆಯೆಂದರೇನೆಂದು । ವಿರಚಿಸಬಹುದು ಕೇಳನುಜಾ ॥ ೧೬ ॥
ಆಧಾರ ತನಗಿನಿಸಿಲ್ಲದೆ ಮೂಜಗ । ದಾಧಾರನರಮನೆಯಿಹುದು ॥
ಈ ಧರೆಗತಿಚೋದ್ಯವಲ್ಲವೆ ಪೇಳದು । ಸಾಧಾರಣವೆನ್ನಬಹುದೆ ॥ ೧೭ ॥
ಆವ ಹಂಗನು ಹೊದ್ದದವನಾವನೆಂದರಾ । ದೇವನೊಬ್ಬನೆ ಲಾಲಿಸವನ ॥
ಆವಾಸಕದ್ರಿಭೂಮಿಗಳ ಹಂಗಿಲ್ಲ ತಾ । ನಾವಾಸವನು ಹೊದ್ದದಿಹನು ॥ ೧೮ ॥
ಇಂದ್ರನಾಜ್ಞೆಯೊಳು ಕುಬೇರನೊಡ್ಡಿದನದ । ಕಿಂದ್ರನೀಲದ ನೆಲಗಟ್ಟಾ ॥
ಚಂದ್ರಮಂಡಲದಂತೆ ವೃತ್ತ ಮತ್ತದು ದಿವ । ಸೇಂದ್ರಯೋಜನದ ವಿಸ್ತಾರಾ ॥ ೧೯ ॥
ನೋಟಕೆ ತೆರಪು ಪನ್ನೆರಡುಗಾವುದವಹು । ದಾಟಿಸಿ ಬಂದಷ್ಟು ಜನಕೆ ॥
ಪಾಟಿಸಿ ತೆರಪನಿತ್ತೊಳಕೊಂಬುದದು ಶತ । ಕೋಟಿಯೋಜನಕೆ ಹೆಚ್ಚಾಗಿ ॥ ೨೦ ॥
ಬಂದಷ್ಟು ಮಳೆಹೊಳೆಗಳ ನೀರನೊಳಕೊಂಡು । ಮುಂದೊತ್ತಿ ಬಾರದಬ್ಧಿವೊಲು ॥
ಬಂದಷ್ಟು ಜನಗಳನೊಳಕೊಂಡು ತಾನಿಹು । ದೆಂದಿನಂತಳತೆಯೊಳಡಗಿ ॥ ೨೧ ॥
ಹರಿನೀಲತಳವಹುದದರ ಮೇಲಣ ಕೋಟೆ । ಕರುವಾಡ ಬಸದಿ ಮುಂತಾದ ॥
ವಿರಚನೆಗಳು ಹೇಮನವರತ್ನಮಯವಾಗಿ । ಬೆರಕೆವಣ್ಣದೊಳೊಪ್ಪುತಿಹುವು ॥ ೨೨ ॥
ಇಂದ್ರಗೋಪದ ಪಟ್ಟೆಯಿಂದಾದ ಕ್ಷೇತ್ರವೊ । ಇಂದ್ರಚಾಪದೊಳಾದ ಧರೆಯೊ ॥
ಚಂದ್ರಾರ್ಕಕೋಟಿಪ್ರಕಾಶನ ಪ್ರಥಮಜಿ । ನೇಂದ್ರನ ನಗರಿ ರಾಜಿಪುದು ॥ ೨೩ ॥
ಅಂಬರವೆಂಬ ಸಮುದ್ರದೊಳೊಂದು ಕ । ದಂಬವರ್ಣದ ಮಹಾಕಮಲಾ ॥
ಇಂಬುಗೊಂಡಲರ್ದು ತಾನಿಪ್ಪುದಿದಚ್ಚರಿ । ಯೆಂಬಂತೆ ತೋರಿಹುದನುಜಾ ॥ ೨೪ ॥
ಪುಂಡಿಸಿ ತನ್ನ ಬೆಳಗು ಪತ್ತುದೆಸೆಗೆಡೆ । ಗೊಂಡಿರಲದರ ಮಧ್ಯದೊಳು ॥
ಕಂಡರಿದೊಂದು ಕದಂಬಕಾಂತಿಯ ಸೂರ್ಯ । ಮಂಡಲವೆನೆ ಮೆರೆದಿಹುದು ॥ ೨೫ ॥
ಉರಿಯುಳಿದಿನಬಿಂಬ ಹೆಚ್ಚುಕುಂದಿನ ಮಾತು । ಪೊರೆಯದ ವಿಧುಬಿಂಬದಂತೆ ॥
ಗಿರಿರಾಜ ನೋಡುವ ಕನ್ನಡಿಯಂತಾದಿ । ಪುರುಷನ ಪುರವಿಹುದನುಜಾ ॥ ೨೬ ॥

ಪೊಡವಿಯಾಗಸತುಂಬಿ ತನ್ನ ನಿರ್ಮಲಕಾಂತಿ । ಮುಡುಗಟ್ಟಲಾ ಸಮುದ್ರದೊಳು ॥
ನಡೆಯದೆ ನಿಂದೊಂದು ನವರತ್ನರಚನೆಯು । ಹಡಗಿನಂತಿಹುದನುಜಾತಾ ॥ ೨೭ ॥
ನಡೆವಾಗ ನಡೆವುದಂಬರದೊಳು ಪ್ರಭೆಯೆಂಬ । ಕಡಲೊಳು ಹಡಗಿನಂದದೊಳು ॥
ನಡೆಯದಿರೆಂದರೆ ನಿಲ್ವುದಾ ಸ್ವಾಮಿ ಪೇ । ಳ್ದೆಡೆಯೊಳು ಹಡಗಿನಂದದೊಳು ॥ ೨೮ ॥
ಸುಕೃತಿಗಳಿದ್ದೆಡೆಗರುಹನೆಯ್ದಿಪ್ಪದರದು । ಸುಕೃತದಂತೊಡನೆಯ್ದುತಿಹುದು ॥
ಪ್ರಕೃತಿಯಿಂಸೊಕನಿತ್ತ ತಾರಾದ್ರಿಗೆಯ್ದಲು । ವಿಕೃತಿಯಾಗದೆ ಕೂಡೆ ಬಹುದು ॥ ೨೯ ॥
ನೋಡೊಂದು ಚಿತ್ರವ ವಾಹನಗಳನೆಡೆ । ಯಾಡಿಸುವಂತೊಂದು ಪುರವಾ ॥
ಕೂಡೊಡನೆಯ್ದಿಸುತಿರುತಿಹನರುಹನ । ಗಾಡಿ ಸಾಮಾನ್ಯವೆ ತಮ್ಮಾ ॥ ೩೦ ॥
ಕಟ್ಟಿದ ನಾಲ್ಕುದಿಕ್ಕಿನ ರತ್ನಸೋಪಾನ । ದೊಟ್ಟೆ ನಿಂದಾ ಜಿನನಗರಾ ॥
ಬೆಟ್ಟದ ಮೇಲೊಂದು ನವರತ್ನಮಯವಾದ । ಬೆಟ್ಟ ನಿಂದಂತೊಪ್ಪುತಿಹುದು ॥ ೩೧ ॥

ಮಿಗೆ ನವರತ್ನದೊಳೊಂದು ಮಾಣಿಕದೊಳೊಂ । ದೊಗುಮಿಗೆ ಮಿಸುನಿಯೊಳಯ್ದು ॥
ಗಗನಸುಸ್ಫಟಿಕವೊಳಿರಡಿಂತು ದೇವನ । ನಗರಿಗೊಂಭತ್ತುಕೋಟೆಗಳು ॥ ೩೨ ॥
ಮೊದಲೊಂದು ನವರತ್ನ ಮುಂದೆರಡಪರಂಜಿ । ಯದು ಪದ್ಮರಾಗ ಮುಂದಣದು ॥
ತದನಂತರ ಮೂರು ಮಿಸುನಿಯೆರಡು ಗಗ । ನದ ಪಳುಕಿನ ಕೋಟೆಯನುಜಾ ॥ ೩೩ ॥
ಸಾಲೆ ನಾಲ್ಕೆಂಟರು ವೇದಿಯಯ್ದೆಂಬರು । ಸಾಲೆಗೆ ತೆನೆ ವೇದಿಗಿಲ್ಲ ॥
ಸಾಲೆವೇದಿಗಳೆನ್ನದೊಂಭತ್ತುಕೋಟೆಯೆಂ । ಬಾಲಾಪವಡಕದ ಮಾತು ॥ ೩೪ ॥
ನಾಲ್ದೆಸೆಮೊಗಕೆ ಕಣ್ದೆರೆದ ಬಾಗಿಲುಗಳು । ನಾಲ್ದೆಸೆಯೊಳು ರಾಜವೀಥಿ ॥
ನಾಲ್ದೆಸೆಯೊಳಗೆ ಮಾನಸ್ತಂಭಗಳು ನಿಂದು । ಮೇಲ್ದೆಸೆಗಳ ಮುಟ್ಟುತಿಹುವು ॥ ೩೫ ॥
ಎಂಟುಕೋಟೆಯ ಬಾಗಿಲೊಳು ದ್ವಾರಪಾಲಕ । ರುಂಟು ಮುಂದೊಂದರೊಳಿಲ್ಲ ॥
ಎಂಟುಭೂಮಿಗಳಾದವೊಂಭತ್ತುಕೋಟೆಯೊ । ಳುಂಟಾದ ವಸ್ತುವ ಕೇಳು ॥ ೩೬ ॥
ಮೊದಲ ಸುತ್ತಿನೊಳು ಹೊನ್ನುಪ್ಪರಿಗೆಗಳು ರ । ನ್ನದ ಬಸದಿಗಳು ತುಂಬಿಹುವು ॥
ಅದರ ಮುಂದುತ್ತಮತೀರ್ಥಗಂಧೋದಕ । ನದಿಯಾಗಿ ಹರಿದು ಸುತ್ತಿಹುದು ॥ ೩೭ ॥
ಹೃದ್ಯವಾಸನೆಯುಳ್ಳ ಪೂದೋಟವಿಹುದನ । ವದ್ಯ ಮೂರನೆಯ ಸುತ್ತಿನೊಳು ॥
ಉದ್ಯಾನವನಚೈತ್ಯತರುಗಳಿಹುವು ನಿರ । ವದ್ಯ ನಾಲ್ಕನೆಯ ಸುತ್ತಿನೊಳು ॥ ೩೮ ॥
ಕರಿಹರಿವೃಷಭ ಮುಂತಾದ ಟೆಕ್ಕೆಯಗಳು । ನೆರೆದುವಯ್ದನೆಯ ಭೂಮಿಯೊಳು ॥
ಸುರಭೂಜಸಿದ್ಧವೃಕ್ಷಗಳಿಂದ ಕಣ್ಗೆ ಸಿಂ । ಗರಿಸಿಹುದಾರನೆಯುರ್ವಿ ॥ ೩೯ ॥
ಜಿನಗೀತವಾದ್ಯನೃತ್ಯಗಳಿಂದ ಮೆರೆವುದೇ । ಳನೆಯುರ್ವಿಯದರಿಂದ ಮುಂದೆ ॥
ಮುನಿಗಳು ನರಸುರರೊಳಗಾದ ಭವ್ಯರೆಂ । ಟನೆಯ ಭೂಮಿಯೊಳೊಪ್ಪುತಿಹರು ॥ ೪೦ ॥

ದ್ವಾರಪಾಲಕರಿಲ್ಲದೊಂಭತ್ತನೆಯ ಪ್ರಾ । ಕಾರದೊಳಗೆ ಮೂರುಪೀಠಾ ॥
ರಾರಾಜಿಸುತ್ತಿಹುವದರ ಶೋಭೆಯ ಕೇಳು । ವೀರಂಜಯ ಮನಮುಟ್ಟ ॥ ೪೧ ॥
ಒಂದು ವೈಡೂರ್ಯ ಮತ್ತೊಂದಪರಂಜಿ ಮೇ । ಲೊಂದು ನಾನಾರತ್ನರಚನೆ ॥
ಒಂದರ ಮೇಲೊಂದು ನಿಂದು ರತ್ನತ್ರಯ । ದಂದದೊಳಿಹುವು ವಿಚಿತ್ರಾ ॥ ೪೨ ॥
ಮೇಲಣ ಪೀಠದ ಮೇಲೆ ನಾನಾರತ್ನ । ಕೀಲಿತ ನಾಲ್ಕು ಸಿಂಹಗಳು ॥
ಆಲಿದೆರೆದು ಬಾಲವೆತ್ತಿ ಕೇಸರಜಟಾ । ಜಾಲವ ಕೆದರಿಕೊಂಡಿಹುವು ॥ ೪೩ ॥
ಮೂಡ ಪಡುವ ತೆಂಕ ಬಡಗಲೊಂದೊಂದವು । ನೋಡುತಿಹುವು ಮೋರೆಯೆತ್ತಿ ॥
ಮಾಡಿದ ಮಾಟದ ಸಿಂಹವಲ್ಲಿವು ಜೀವ । ಗೂಡಿದ ಸಿಂಹವೆಂಬಂತೆ ॥ ೪೪ ॥
ಆ ಸಿಂಹಗಳ ಮೇಲೆ ಮಿಸುನಿದಾವರೆಯೊಂದು । ಸಾಸಿರೆಸಳ ಸುತ್ತ ಕೆದರಿ ॥
ಕೇಸರ ಕರ್ಣಿಕೆ ನೆಗೆದು ಸುಗಂಧವ । ಸೂಸುತಿಹುದು ಪತ್ತುದೆಸೆಗೆ ॥ ೪೫ ॥
ಪದ್ಮಕರ್ಣಿಕೆಯಿಂದ ಮೇಲೆ ನಾಲ್ಬೆರಳಷ್ಟು । ಪದ್ಮವ ಬಿಟ್ಟಂಬರದೊಳು ॥
ಪದ್ಮಾಸನದೊಳೊಪ್ಪಿಹನಾದಿದೇವನು । ಪದ್ಮರಾಗಾಂಘ್ರಿಪಲ್ಲವನು ॥ ೪೬ ॥
ಎಳೆನೇಸರೆರಡುಕೋಟಿಗಳೊಂದುಗೂಡಿದಂ । ತಳವಟ್ಟ ದೇಹಕಾಂತಿಯೊಳು ॥
ತಳತಳಿಸುತ ದಗದಗಿಸುತ ಕಾಂತಿಯ । ಜಳಧಿಯೊಳಿಹನಾದಿಜಿನನು ॥ ೪೭ ॥
ಮೂಲೋಕಕೀತನೊಬ್ಬನೆ ದೇವನೆಂಬುದ । ಮೂಲೋಕಕರಿಕೆಮಾಳ್ಪಂತೆ ॥
ಮೇಲುಮುತ್ತಿನ ಮೂರುಸತ್ತಿಗೆನೆಳಲೊಳ । ಗೋಲಗಗೊಟ್ಟೊಪ್ಪುತಿಹನು ॥ ೪೮ ॥
ಢಾಳಿಸುವರುವತ್ತನಾಲ್ಕುಚಾಮರಗಳ । ಢಾಳದೊಳೆಸೆವನೆಂತೆನಲು ॥
ಹಾಲ ಸಮುದ್ರದ ತೆರೆಮಾಲೆಯೊಡ್ಡಿನೊ । ಳೋಲಗಗೊಟ್ಟನೆಂಬಂತೆ ॥ ೪೯ ॥
ಕಂಡು ಜಿನೇಂದ್ರನ ಸ್ಥಿರರೂಪುವಡೆದಿರ್ದಾ । ಖಂಡಲಚಾಪವೆಂಬಂತೆ ॥
ಕಂಡೆನೊಪ್ಪಿಹುದೊಂದು ಭಾಮಂಡಲ ಪರಿ । ಮಂಡಲಗೊಂಡಾದಿಜಿನಗೆ ॥ ೫೦ ॥
ಶೋಕವಿಲ್ಲರುಹನ ಕಂಡರೆಂಬುದನು ತ । ನ್ನಾಕಾರದಿಂದ ಪೇಳ್ವಂತೆ ॥
ಬೇಕಾದ ನವರತ್ನಮಯವಾಗಿ ಕೆಲದೊಳ । ಶೋಕೆಯ ತರುವೊಪ್ಪುತಿಹುದು ॥ ೫೧ ॥
ಆಕಾಶದೊಳು ನಿಂದು ದಿವಿಜರು ವೃಷಭಪ । ತಾಕನೆ ಜಯಜಯಯೆನುತ ॥
ನಾಕಲೋಕದ ಪುಷ್ಪಗಳ ಮಳೆಗರೆವರು । ಲೋಕನಾಥನ ಮಸ್ತಕದೊಳು ॥ ೫೨ ॥
ದಿಮಿದಿಮಿ ದಿಂದಿಮಿ ದಂಧಣ ಧಣದಿಮಿ । ದಿಮಿಕು ಭುಂ ಭೂಂ ಭು ಭೂಯೆಂದು ॥
ಸಮವಸರಣದೊಳು ಪಟಹಶಂಖಗಳಾದಿ । ಯಮರವಾದ್ಯಗಳು ಘೂರ್ಣಿಪುವು ॥ ೫೩ ॥
ನವ್ಯಮಧುರಮೃದುಗಂಭೀರದೊಡಗೂಡಿ । ಭವ್ಯಲೋಕಕೆ ಹಿತವಾಗಿ ॥
ದಿವ್ಯವಾಣೀಶನ ಮುಖಪದ್ಮದೊಳು ನಿಚ್ಚ । ದಿವ್ಯನಿನಾದ ಪುಟ್ಟುವುದು ॥ ೫೪ ॥

ಪೂಮಳೆ ಕಂಕೇಲಿತರು ಮೂರುಸತ್ತಿಗೆ । ಚಾಮರ ದಿವ್ಯನಿನಾದಾ ॥
ಭಾಮಂಡಲ ಭೇರಿ ಸಿಂಹಾಸನವಿವು । ಸ್ವಾಮಿಗೆಂಟಧಿಕಚಿಹ್ನಗಳು ॥ ೫೫ ॥

ಸುಖಿ ಲಾಲಿಸಿನ್ನೊಂದುಚಿತ್ರವ ಜಿನನೇಕ । ಮುಖನಹುದಂತಾಗಿ ಮತ್ತೆ ॥
ನಿಖಿಳರು ನಿಂದು ನಾಲ್ದೆಸೆಯೊಳೀಕ್ಷಿಸೆ ಚತು । ರ್ಮುಖನಾಗಿ ತಾನೊಪ್ಪುತಿಹನು ॥ ೫೬ ॥
ಹತ್ತು ಸಹಜಗಳು ಘಾತಿವಿಜಯದಿಂದ । ಹತ್ತಾದುವರುಹಗೆ ಸುರರ ॥
ಬಿತ್ತರದೊಳು ಪದಿನಾಲ್ಕಾದುವಿಂತು ಮೂ । ವತ್ತುನಾಲ್ಕತಿಶಯವಿಹುವು ॥ ೫೭ ॥
ಎಂಟನೆಯುರ್ವಿಯೊಂಭತ್ತನೆಯುರ್ವಿಯೆಂ । ದುಂಟಾದ ಭೂಮಿಗಳೆರಡಾ ॥
ಗಂಟಕ್ಕಿ ಕೆಲಬರೊಂದನೆ ಮಾಡಿ ಲಕ್ಷ್ಮೀ । ಮಂಟಪವೆಂದು ನುಡಿವರು ॥ ೫೮ ॥
ಎಂಟನೆಯುರ್ವರೆ ಹೊರಗಣ ಲಕ್ಷ್ಮಿಯು । ಮಂಟಪನೆಂದು ನುಡಿವರು ॥
ನಾಂಟಿದ ನವಮೋರ್ವಿಯೊಳಗಣ ಲಕ್ಷ್ಮಿಯು । ಮಂಟಪವೆಂಬರು ಕೆಲರು ॥ ೫೯ ॥
ಶ್ರೀಮುನಿಗಳು ಮೊದಲಾದ ಪನ್ನೆರಡಂಗ । ದಾ ಮಹಾಗಣದ ಸಂಪದವು ॥
ಸ್ವಾಮಿಯಿದ್ದುದರಿಂದಲಾ ಲಕ್ಷ್ಮೀಮಂಟಪ । ಶ್ರೀಮಂಟಪವೆನ್ನಬಹುದು ॥ ೬೦ ॥
ಕುಟಿಲವ ಕಳೆದಪರಂಜಿಯ ಕಂಭ ಸಂ । ಘಟನವರತ್ನದ ಶಿಖರಾ ॥
ಘಟಿತಮಾಣಿಕ್ಯದ ಕಲಶಗಳಿರೆ ಗಂಧ । ಕುಟಿಯೆಂಬರೊಪ್ಪೆ ಮತ್ತದನು ॥ ೬೧ ॥
ಸಿಂಧುರಾರಿಗಳ ಮೇಲೆಸೆವ ತಾವರೆಯ ಸು । ಗಂಧ ಪೂಮಳೆಯ ಸುಗಂಧಾ ॥
ಬಂಧುರಜಿನದೇಹಗಂಧ ತುಂಬಿಹುದಾಗಿ । ಗಂಧಕುಟಿಯದೆನ್ನಬಹುದು ॥ ೬೨ ॥
ಗಣಭೂಮಿಯೆಂದರೆಂಟನೆಯುರ್ವಿ ಸುತ್ತವಂ । ಕಣವಲ್ಲಿ ಪನ್ನೆರಡಿಹುವು ॥
ಗಣಧರರಾದಿಯಾಗೀರಾರುವಿಧಭವ್ಯ । ಗಣಬಳಸಿಹುದವರೊಳಗೆ ॥ ೬೩ ॥
ಯತಿಗಳಮರಿಯರಜ್ಜಿಕೆಯರು ನಕ್ಷತ್ರ । ಸತಿಭೂತನಾಗಕನ್ನೆಯರು ॥
ವಿತತಭವನಭೂತನಕ್ಷತ್ರರಮರರಾ । ಯತನರರಿಹರುಂಟು ಸಿಂಹಾ ॥ ೬೪ ॥
ಪೂರ್ವಾಭಿಮುಖವಾಗಿ ದೇವನಿಹನು ಗಣ । ಪರ್ವಿ ಪ್ರದಕ್ಷಿಣವಾಗಿ ॥
ಸರ್ವವು ಜಿನನನೋಲೈಸುತಿಹುದು ಋಷಿ । ಪೂರ್ವ ಸಿಂಹವೆ ಕಡೆಯಾಗಿ ॥ ೬೫ ॥

ಗಣಭೇದದಿಂದ ಪನ್ನೆರಡಂಗವಾಗಿನ್ನು । ಗುಣದಿಂದ ಪದಿಮೂರಾಗಿಹುದು ॥
ಎಣಿಸಿ ಪೇಳುವೆನಾದಿನಾಥನೋಲಗದ ಕ । ಟ್ಟಣೆಯ ಕೇಳಾಸನ್ನಭವ್ಯಾ ॥ ೬೬ ॥
ದೊರೆಗೆ ಪ್ರಧಾನಿಗಳಿಪ್ಪಂತೆ ಮೂಲೋಕ । ದೆರೆಯನ ಸನ್ನಿಧಿಯಲ್ಲಿ ॥
ಪರಮಮುನಿಗಳುಯೆಂಭತ್ತನಾಲ್ವರು ಗಣ । ಧರರೆಂಬ ಗಮಕದೊಳಿಹರು ॥ ೬೭ ॥
ಕೇಳೆಲೆ ಕಿರಿಯ ಸಿದ್ಧಾಂತಸಾಗರವನೀ । ರೇಳುಪೂರ್ವೆಯ ತಾಳಿದವರು ॥
ಓಲಗದೊಳಗೆಸೆವರು ನಾಲ್ಕುಸಾವಿರ । ದೇಳುನೂರೈವತ್ತು ಮಂದಿ ॥ ೬೮ ॥

ನಾಲ್ಕುತತ್ತ್ವವ ಪಿಡಿ ಮೂರುತತ್ತ್ವಗಳಲ್ಲಿ । ಸಿಲ್ಕದಿರೆಂಬ ಶಿಕ್ಷಕರು ॥
ನಾಲ್ಕು ಸಾವಿರದ ನೂರೈವತ್ತುಯೆಂಬೊಂದು । ನಿಲ್ಕೆಯೊಳಿಹರಲ್ಲಿ ಕೇಳು ॥ ೧೯ ॥
ಉತ್ತಮಾತ್ಮಧ್ಯಾನವಿಲ್ಲಸಲ್ಲೆಂಬರ । ನತ್ತಿತ್ತ ಮಾಳ್ಪ ವಾದಿಗಳು ॥
ಎತ್ತಿ ಪನ್ನೆರಡುಸಾವಿರದೇಳನೂರೈ । ವತ್ತೆಂಬ ಗಣನೆಯೊಳಿಹರು ॥ ೨೦ ॥
ಅಣಿಮೆ ಮಹಿಮೆ ಮೊದಲಾದ ವಿಕ್ರಿಯೆಗಳ । ಕ್ಷಣಕೊಂದು ತೋರುವಗ್ಗಳರು ॥
ಗಣಿಸಲಿಪ್ಪತ್ತಾರುಸಾಸಿರವೆಂಬೊಂದು । ಗಣನೆಯೊಳಿರುತಿಹರಲ್ಲಿ ॥ ೨೧ ॥
ಯುವರಾಜ ಕೇಳು ಕೇಳ್ದರೆ ಹಿಂದುಮುಂದಣ । ಭವವ ಕಂಡಂತೆ ಸೊಲ್ಲಿಸುವ ॥
ಅವಧಿವಿಜ್ಞಾನಿಗಳೊಂಭತ್ತುಸಾವಿರ । ಪವಣೆನೆ ಪಂತಿಯಾಗಿಹರು ॥ ೨೨ ॥
ಆರೇನ ನೆನೆದರಂತದನುಸುರದ ಮುನ್ನ । ಕೋರಿ ಪೇಳುವ ಬೋಧಯುತರು ॥
ಈರಾರುಸಾಸಿರದೇಳುನೂರೈವತ್ತು । ಸೇರಿದ ಲೆಕ್ಕವಾಗಿಹರು ॥ ೨೩ ॥
ದೇವನ ಸುತ್ತಲಿಪ್ಪತ್ತುಸಾಸಿರ್ವರು । ಕೈವಲ್ಯಬೋಧಾಢ್ಯರಿಹರು ॥
ದೇವನಂದದ ಸುಖ ದೇವನಂದದ ಶಕ್ತಿ । ದೇವನಂತರಿವನುಳ್ಳವರು ॥ ೨೪ ॥
ಪಾವನಚರಿತೆಯರಜ್ಜಿಕೆಯರು ಪುರು । ದೇವನಾಸ್ಥಾನಕೋಣೆಯೊಳು ॥
ಭಾವಿಸಿ ಮೂರುಲಕ್ಷದ ಮೇಲೆಯ್ಯೈವತ್ತು । ಸಾವಿರವೆನಲೊಪ್ಪುತಿಹರು ॥ ೨೫ ॥
ಮೋಕ್ಷಗಾಮಿಗಳು ಭೇದಾಭೇದಭಕ್ತಿಯ । ಲಕ್ಷಣವರಿದ ಭಾವಕರು ॥
ಆ ಕ್ಷೇತ್ರದೊಳಗೆ ಸುವ್ರತಿಕರಿಹರು ಮೂರು । ಲಕ್ಷ ಲಾಲಿಸು ಲಘುಕರ್ಮಿ ॥ ೨೬ ॥
ಚಿಕ್ಕಣ್ಣ ಚೆನ್ನಾಗಿ ಕೇಳಾದಿದೇವನ । ಚೊಕ್ಕಚಾವಡಿಯ ಕೋಣೆಯೊಳು ॥
ಲೆಕ್ಕಿಸುವಾಗ ಸುವ್ರತೆ ಮೊದಲಾದ ಹೆ । ಣ್ಮಕ್ಕಳೊಪ್ಪಿಹರೈದುಲಕ್ಷಾ ॥ ೨೭ ॥
ಸುರನಾಗನಕ್ಷತ್ರಯಕ್ಷಕಿಂಪುರುಷರು । ಗರುಡಗಂಧರ್ವರಂತವರ ॥
ತರುಣಿಯರಿರುತಿಹರಿನಿತೆಂದು ಲೆಕ್ಕಿಸ । ಲರಿದು ಕೇಳವರಸಂಖ್ಯಾತಾ ॥ ೨೮ ॥
ಜಗದ ಜನಂಗಳೋಲಗಿಪುದೇನಚ್ಚರಿ । ಖಗಮೃಗಸಿಂಹ ಮುಂತಾಗಿ ॥
ಅಗಣಿತವಿಪ್ಪುದಾತನ ಕಟ್ಟಕಡೆಯುವೋ । ಲಗಶಾಲೆಯೊಳು ಶಾಂತಿವಿಡಿದು ॥ ೨೯ ॥
ಗಣಧರ ಶ್ರುತಧರ ವಾದಿ ಶಿಕ್ಷಕ ಜಿನ । ರಣಿಮಾದ್ಯಮಿತಮನೋಗತರು ॥
ಗಣನಿರ್ವೃತಿಕಸತಿಸುರಮೃಗರಾಜರಿಂ । ತೆಣಿಸಲ್ಕೆ ಗಣ ಪದಿಮೂರು ॥ ೩೦ ॥
ಲೆಕ್ಕವಿಲ್ಲಮರಗಣಕೆ ಸಿಂಹಗಣಕಿನ್ನು । ಮಿಕ್ಕ ಪನ್ನೊಂದ ಕೂಡಿದರೆ ॥
ಲೆಕ್ಕಪ್ಪೆನೂರೆರಡೆಂಟಿಲ್ಲದೀರಾರು । ಲಕ್ಕ ನಾಲ್ವತ್ತುಸಾಸಿರವು ॥ ೩೧ ॥
ಮೊದಲು ಪನ್ನೆರಡುಭೇದದ ಗಣವಾಗಿಂತು । ಪದಿಮೂರುಗಣವಾಯ್ತು ಮತ್ತೆ ॥
ಅದು ನೂರ್ವರಿಂದ್ರರೊಂದಾಚಾರ್ಯಗಣವೆಂದು । ತುದಿಗೆ ನೂರೊಂದಂದವಿಹುದು ॥ ೩೨ ॥

ಇಲ್ಲಿ ಮುಟ್ಟಲು ನಾನು ಸೂಚಿಸಿದತಿಶಯ । ವೆಲ್ಲವು ಬಾಹ್ಯಸಂಪದವು ॥
ಬಲ್ಲಂತೆ ಜಿನನಂತರಂಗಸಂಪದವನು । ಸೊಲ್ಲಿಸುವೆನು ಕೇಳು ಸುಸುಖಿ ॥ ೮೩ ॥
ಶ್ರೀಪಾದದಿಂದ ಮಸ್ತಕಮುಟ್ಟ ಸರ್ವಾಂಗ । ವ್ಯಾಪಿಯಾಗಿಹನಾತನಾತ್ಮಾ ॥
ಆಪಾದಮಸ್ತಕತುಂಬಿ ಸುಪ್ರಭೆ ಮಣಿ । ದೀಪದ ಬೆಳಗಿನಂತಿಹುದು ॥ ೮೪ ॥
ಪ್ರಭೆ ಬೇರೆ ರತ್ನ ಬೇರಲ್ಲವೆಂಬಂತಾತ್ಮ । ಪ್ರಭೆಯೆ ರೂಪಾಗಿರುತಿಹನು ॥
ಪ್ರಭೆ ತಾನೆ ಸುಜ್ಞಾನ ನುಡಿವಾಗಳೆರಡು ನೋ । ಳ್ಪಭಿಮುಖಾರ್ಥದೊಳೊಂದೆ ರೂಪು ॥ ೮೫ ॥
ಅಗ್ನಿಗೆ ಬೆಳಗೆಂಬರುರಿಯೆಂಬರವು ನೋಡ । ಲಗ್ನಿಯೊಳೆರಡೊಂದೆ ರೂಪು ॥
ಭಗ್ನದುರಾತ್ಮಗೆ ಸುಪ್ರಭೆ ಸುಜ್ಞಾನ । ಲಗ್ನಿಸಲೆರಡೊಂದೆ ರೂಪು ॥ ೮೬ ॥
ಅಗ್ನಿಯಗ್ನಿಯ ಬೆಳಗುರಿಯಿಂತು ಮೂರೆಂಬ । ರಗ್ನಿಯೊಂದೆಂಬಾಗಳಡಕಾ ॥
ಭಗ್ನಿಸಿ ಜೀವನರಿವು ಬೆಳಗೆನೆ ಮೂರು । ನಗ್ನಾತ್ಮನೆಂಬಾಗಳೊಂದೆ ॥ ೮೭ ॥
ಪುರುಷಾಕಾರದ ರತ್ನದ ಮೂಷೆಯೊ । ಳಿರಿಸಿದೊಂದಚ್ಛವಳುಕಿನ ॥
ಪುರುಷನೆಂಬಂತಾ ದಿವ್ಯದೇಹದೊಳಾ । ಪರಮಾತ್ಮನಿರುತಿಹನಣ್ಣಾ ॥ ೮೮ ॥
ಪಳುಕಿನ ಪುರುಷನು ಹಿಡಿತಕೆ ಚರ್ಮಾಕ್ಷಿ । ಗೊಳಗಪ್ಪನಂತಾತನಲ್ಲ ॥
ತಿಳಿ ತೀರ್ಥಕರನಾತ್ಮ ಬಯಲ ರೂಪಿನದೊಂದು । ಪಳುಕಿನ ಪುರುಷನೆಂದನುಜಾ ॥ ೮೯ ॥
ಗಾಜಿನ ಕುಪ್ಪಿಗೆಯೊಳಗೆ ದೀಪವನಿಟ್ಟ । ರಾ ಜ್ಯೋತಿ ಹೊರಗೆಸೆವಂತೆ ॥
ಶ್ರೀಜಿನನುಜ್ಜ್ವಲದೇಹವ ತಟ್ಟುಚ್ಚಿ । ರಾಜಿಸುತಿಹುದಾತ್ಮಕಾಂತಿ ॥ ೯೦ ॥
ಕಿರಣ ತಟ್ಟುಚ್ಚಿ ರಾಜಿಸುವಂತೆ ಸುಜ್ಞಾನ । ದರುಶನವೆರಡು ರಾಜಿಪ್ಪುವು ॥
ಗುರು ಮುನ್ನ ಪೇಳ್ದ ಧ್ಯಾನದಿ ಬೋಧದರ್ಶನಾ । ವರಣವೆರಡ ಸುಟ್ಟನಾಗಿ ॥ ೯೧ ॥
ಅಂಗುಷ್ಠದಿಂದ ಮಸ್ತಕ ಮುಟ್ಟ ಸುಜ್ಞಾನ । ಶೃಂಗಾರವಾಗಿರುತಿಹನು ॥
ಅಂಗುಷ್ಠದಣುಮಾತ್ರದೊಳು ಲೋಕವಿಹುದು ಸ । ರ್ವಾಂಗಸುಜ್ಞಾನವಿನ್ನೆಂತೊ ॥ ೯೨ ॥
ಅರಿವ ಸದ್ಗುಣವೆಂತು ದೇಹ ತುಂಬಿಹುದಂತೆ । ಮೆರೆದಿಹುದೀಕ್ಷಿಪ ಗುಣವು ॥
ಅರಿವುತಿಹನು ಕಾಣುತಿಹನು ಮೂಲೋಕದ । ಪೊರಗೊಳಗನು ಸರ್ವಕಾಲಾ ॥ ೯೩ ॥
ಬೆಳಗಿದ ರನ್ನಗನ್ನಡಿಯ ಮೈತುಂಬಿ ಮಾ । ರ್ಪೊಳೆವಂತೆಯಿದಿರ ವಸ್ತುಗಳು ॥
ತಳದಿಂದ ಮಸ್ತಕ ಮುಟ್ಟಲಾತ್ಮನೊಳು ಮಾ । ರ್ಪೊಳೆವುದಾತಗೆ ವಿಶ್ವದಾಟಾ ॥ ೯೪ ॥
ಒತ್ತಟ್ಟ ಕಾಣ್ಬುದು ಕಂಚಿನ ಮುಕುರ ಹಿಂ । ದೊತ್ತಟ್ಟ ಕಾಣದಂತಲ್ಲ ॥
ಇತ್ತಟ್ಟನೊಳು ಕಾಣ್ಬ ರನ್ನಗನ್ನಡಿಯಂತೆ । ಸುತ್ತಲರಿವು ಕಾಣ್ಕೆ ಜಿನಗೆ ॥ ೯೫ ॥
ಸರ್ವಾಂಗ ತುಂಬಿ ಸುತ್ತಲು ಕಾಣ್ಬುದರಿವುದು । ಸರ್ವಜ್ಞಗದು ನಿಜವವನಾ ॥
ಸರ್ವತೋಲೋಚನ ಸರ್ವತೋಮುಖನೆಂದು । ಸರ್ವರಾಡುವರದು ಸತ್ಯಾ ॥ ೯೬ ॥

ಹಿಂದನಾದಿಯು ಕಾಲ ಮುಂದನಂತದ ಕಾಲ । ವಿಂದಿನ ಕಾಲವಿವರೊಳು ॥
ಸಂದುದ ಸಲುವುದ ಸಲುತಿರ್ದುದನು ಜಿನ । ನೊಂದುಸೂಳೊಳೆ ಕಾಣ್ಬನರಿವಾ ॥ ೯೭ ॥
ಲೋಕವಮೂರನು ಕಾಣ್ಬನರಿವನಹುದು ಮೂರು । ಲೋಕದ ಪೊರಗೆ ನೀಳ್ದಿಸೆವ ॥
ಆಕಾಶವನು ಕಡೆಮುಟ್ಟಲರಿವ ಕಾಣ್ಬ । ನಾ ಕರ್ತ ಸಮಯವೊಂದರೊಳು ॥ ೯೮ ॥
ಹಲವುದ್ರವ್ಯಗಳನು ಹಲವುಪರ್ಯಾಯವ । ಹಲವುಗುಣವನೊಂದೆ ಬಾರಿ ॥
ಪಲವ ಹಾರದೆ ಕಾಣ್ಬನರಿವನಹುದು ಮೋಹ । ದೊಲವಿಲ್ಲ ತನಗದರೊಳಗೆ ॥ ೯೯ ॥
ಒಂದನೀಕ್ಷಿಸಿ ತಿಳಿದದ ಬಿಟ್ಟು ಮತ್ತೊಂದ । ರಂದವನಾರಯ್ವೆನೆಂಬ ॥
ದಂದುಗವಿಲ್ಲದೆಲ್ಲವನರಿವನು ಕಾಣ್ಬ । ನೊಂದೇ ಸಮಯಮಾತ್ರದೊಳು ॥ ೧೦೦ ॥
ಕರ್ಮಿಗಳರಿವು ನೋಟಗಳಲ್ಪವದರಿಂದ । ಒರ್ಮೊರ್ಮೆ ಕ್ರಮದೊಳೊಪ್ಪುವುವು ॥
ಕರ್ಮೋದ್ಧತಗೆ ಕ್ರಮ ಜಾಡ್ಯವಿಲ್ಲಾಗಿ । ಒರ್ಮೊದಲರಿವನು ಕಾಣ್ಬಾ ॥ ೧೦೧ ॥
ನೋಡೊಂದುಸೊಡರನೆಲ್ಲರ ಮನೆಮನೆಗೆಡೆ । ಯಾಡಿಸೆ ಕ್ರಮದಿ ಪರ್ಬುವುದು ॥
ಮೂಡಣದ್ರಿಯೊಳರ್ಕ ನಿಂದು ಲೋಕವ ಪ್ರಭೆ । ಮಾಡನೆ ಕ್ಷಣದೊಳಂತರಿಯೈ ॥ ೧೦೨ ॥
ನಯನದಿಂದೀಕ್ಷಿಸಿ ಚಿತ್ತದಿಂದರಿವರು । ರ್ವಿಯೊಳೆಲ್ಲರವರಂದವಲ್ಲ ॥
ನಯನ ಚಿತ್ತವ ಹಾರದೀಕ್ಷಿಪನರಿವನು । ಸ್ವಯಮಾತ್ಮಗರಿವುಕಾಣ್ಕೆಗಳು ॥ ೧೦೩ ॥
ಕಂಗಳ ಹಂಗಿಂದ ಮನದ ಹಂಗಿಂದ ಕ । ರ್ಮಾಂಗಿಗಳರಿವರೀಕ್ಷಿಪರು ॥
ಹಿಂಗಿದ ಕರ್ಮದ ದಿವ್ಯಾಂಗಿಗೊಂದರ । ಹಂಗಿಲ್ಲದರಿವುಕಾಣ್ಕೆಗಳು ॥ ೧೦೪ ॥
ಸೊಡರ ಹಂಗಿಂದೆಲ್ಲರಿರುಳಡಿಯಿಡುವರು । ಸೊಡರ ಹಂಗುಂಟೆ ಭಾನುವಿಗೆ ॥
ನುಡಿಯಲಂತುಟೆ ಕರ್ಮಬದ್ಧರು ಶುದ್ಧರ । ನಡೆವಳಿಗಳು ಸಾರಭವ್ಯಾ ॥ ೧೦೫ ॥
ರವಿಯ ಪ್ರಕಾಶ ಹೊರಗೆ ಹರಿದಿಹುದೈಸೆ । ಗವಿ ಮೊದಲಾದುವ ಹೊಗದು ॥
ಭುವನದೊಳಗು ಹೊರಗೆಡೆವಿಡದಾ ಜಿನ । ರವಿಯ ಬೋಧಾಂಶು ತುಂಬಿಹುದು ॥ ೧೦೬ ॥
ಮರೆಯೆನಿಸಿಲ್ಲದೆ ಲೋಕಾಲೋಕವ । ನರಿವನೀಕ್ಷಿಪನಲ್ಲದಿನನ ॥
ತೆರದೊಳು ಬೋಧಾಂಶು ಜಗವ ತುಂಬಿಹುದೆಂದು । ಬರೆವ ಮಾತೆಲ್ಲುಪಚಾರ ॥ ೧೦೭ ॥
ಗುರುಶಿಷ್ಯಬೋಧೆಯೊಳುಪಚಾರದೃಷ್ಟಾಂತ । ದಿರವುಂಟು ಬಂದು ಹೋಹುದದು ॥
ಕರುದೋರಿ ಕರುವ ಶೋಧಿಸಿ ಲೋಹರಸವೆರೆ । ದರುಹನ ಪ್ರತಿಮೆಮೋರ್ಪಂತೆ ॥ ೧೦೮ ॥
ಉಪಚಾರದೃಷ್ಟಾಂತ ಹೋಹುದು ನಿಶ್ಚಯ । ದುಪಮಿತದೃಷ್ಟಾಂತವಿಹುದು ॥
ಉಪದೇಶದಂಗವಾದುದರಿಂದ ನಿಶ್ಚಯ । ಲಪಿತದೃಷ್ಟಾಂತವ ಕೇಳು ॥ ೧೦೯ ॥
ಮುಕುರದೊಳಿದಿರ ವಸ್ತುಗಳು ತೋರುವವೈಸೆ । ಮುಕುರವಾ ವಸ್ತು ಮುಟ್ಟೆಹುದೆ ॥
ಸಕಲವು ಜಿನಬೋಧದೊಳಗೆ ಪೊಳೆವುವಾತ । ಸಕಲವ ಸೋಂಕದೊಪ್ಪಿಹನು ॥ ೧೧೦ ॥

ದಿವ್ಯದೇಹದೊಳಿರ್ದು ದೇಹವ ಸೋಂಕನು । ದ್ಭಿವಬೋಧವೆ ದೇಹ ತನಗೆ ॥
ಭವ್ಯರಿಷ್ಪಾರ್ಥಕಿಲ್ಲಿರುತಿರ್ದಪನು ನಾಳೆ । ಅವ್ಯಯುಲೋಕಕೆಯ್ದುವನು ॥ ೧೧೧ ॥
ಪರವಸ್ತುಗಳ ಹಂಗು ತಪ್ಪದೆ ಸುಜ್ಞಾನ । ದರುಶನವೆರಡೆಸೆವಂತೆ ॥
ಪರವಸ್ತುವೊಂದನು ಹಾರದೆ ನಿಜಸುಖ । ವಿರುತಿಹುದರುಹಗೆ ಕೇಳು ॥ ೧೧೨ ॥
ಎಂಟುಕರ್ಮದೊಳಡಗಿರ್ದವರಿಗೆ ಹದಿ । ನೆಂಟುದೋಷಗಳಿರುತಿಹುವು ॥
ಉಂಟಾದುದದರಿಂದ ದುಃಖವಂತಾ ದುಃಖ । ವುಂಟಾದವರಿಗುಂಟೆ ಸುಖವು ॥ ೧೧೩ ॥

ಮೊದಲೆಂಟು ಕರ್ಮದೊಳಿರ್ದವ ಸುಟ್ಟೊವ್ನ್ । ಹದಿನೆಂಟು ದೋಷವ ಕಳೆದಾ ॥
ಆದರಿಂದ ಸುಖವಾದುದಾ ಜಿನಗಿಲ್ಲದ । ಹದಿನೆಂಟುದೋಷವ ಕೇಳು ॥ ೧೧೪ ॥
ನಿದ್ರೆಯು ಹಸಿವು ತೃಷೆಯು ಭೀತಿ ಬೆಮರು ಕಾ । ಮೋದ್ರೇಕ ರೋಗ ಮುಪ್ಪಿಲ್ಲ ॥
ರೌದ್ರ ಮಮತೆ ಮದ ಜನನ ಮರಣಗಳು । ಪದ್ರವವಿನಿಸಾದರಿಲ್ಲ ॥ ೧೧೫ ॥
ಭ್ರಾಂತಿ ವಿಸ್ಮಯ ಶೋಕ ಚಿಂತೆ ಕಾಂಕ್ಷೆಗಳೆಂದು । ಇಂತಿವಷ್ಟಾದಶದೋಷಾ ॥
ಚಿಂತಾಯಕಗಿಲ್ಲವದರಿಂದ ಸುಖವೆ ನಿ । ರಂತರ ನಿಜದೊಳೊಪ್ಪಿಹುದು ॥ ೧೧೬ ॥
ಹಸಿವಿಲ್ಲದವಗೂಟವೇಕೆ ನೀರಳ್ಕೆಯು । ಗಸಣಿಯಿಲ್ಲದರೇಕೆ ಪಾನಾ ॥
ಹಸಿವುತೃಷೆಗಳೆಂಬ ರೋಗಕೆ ಮದ್ದಿನಂ । ತೆಸೆವುವಲ್ಲವೆ ಅನ್ನ ಪಾನಾ ॥ ೧೧೭ ॥
ಅನ್ನಪಾನಗಳಿಂದ ಕಿರಿದು ಹೊತ್ತಡಗಿರ್ದು । ಮುನ್ನಿನಂತೊಡನುಬ್ಬುತಿಹುದು ॥
ತನ್ನಾತ್ಮಭಾವನೆಯಿಂದಲ್ಲದಾ ರೋಗ । ಚೆನ್ನಾಗಿ ಕೆಡದು ಕೇಳನುಜಾ ॥ ೧೧೮ ॥
ಕೊಲಬಂದ ಪಗೆಗಡಿಗಡಿಗೆ ಕಪ್ಪವ ತೆತ್ತು । ನಿಲಿಸುವಂತನ್ನಪಾನಗಳಾ ॥
ಸಲಿಸಿ ಹಸಿವುತೃಷೆಗಳ ತಡೆವುತ ದಬ್ಬು । ದಲೆಬಿಟ್ಟು ಬಾಳ್ವುದು ಸುಖವೆ ॥ ೧೧೯ ॥
ಹಸಿವುತೃಷೆಗಳೆರಡಕೆ ಪೇಳ್ವ ಮಾತಲ್ಲ । ವಸಮುಕಾಮಾಗ್ನಿ ಮುಂತಾದ ॥
ವ್ಯಸನಗಳಿರಿವಾಗ ಲಂಚವ ತೆತ್ತು ಜೀ । ವಿಸುವಂದವಲ್ಲದೆ ಸುಖವೆ ॥ ೧೨೦ ॥
ಊಟವಿವಾಹಗಳನುಲೇಪನ ವನಿತೆಯು । ರಾಟ ವೀಳೆಯ ಮೊದಲಾದ ॥
ಕೋಟಲೆಯುಳ್ಳುದು ತನುಸುಖ ನಿಜಸುಖ । ದಾಟಕೆ ಕೋಟಲೆಯಿಲ್ಲ ॥ ೧೨೧ ॥
ತನುಸುಖ ಸಂಸಾರಭೋಗವಿಂದ್ರಿಯಸುಖ । ವೆನಲೇಕಾರ್ಥವಾ ಸುಖವು ॥
ಅನುಬಂಧಿಸಿಹುದು ದುಃಖದೊಳದು ಪರಸಂಗ । ದನುಭವದಿಂದಹುದನುಜಾ ॥ ೧೨೨ ॥
ನಿರ್ವಾಣಸುಖ ನಿಜಸುಖವಾತ್ಮಸುಖವೆಂದ । ರುರ್ವಿದೇಕಾರ್ಥವಾ ಸುಖವು ॥
ಪರ್ವಿ ತನ್ನಾತ್ಮನೊಳಿಹುದದು ಲೋಕಕ । ಪೂರ್ವ ಲೋಗರ ಸಂಗವಿಲ್ಲ ॥ ೧೨೩ ॥
ತನಗೆ ತನ್ನಾತ್ಮ ತನ್ನಯ ವಸ್ತು ತಾನಾಂತ । ತನು ಮನವಿಂದ್ರಿಯ ವಚನಾ ॥
ವನಿತೆಯರಾದಿಯಾದೆಲ್ಲವು ಪರವಸ್ತು । ವನಿತರ ಹಂಗಂಗಸುಖವು ॥ ೧೨೪ ॥

ಅನ್ಯವಸ್ತುಗಳ ಹಂಗಿಲ್ಲದೆ ಸುಖವಾತ್ಮ । ಜನ್ಯವಾಗಿರುತಿಹುದದನು ॥
ಅನ್ಯರರಿಯರನುಭವಿಯೆ ಬಲ್ಲನು ಕರ್ಮ । ಶೂನ್ಯಜಿನೇಂದ್ರನೆ ಬಲ್ಲಾ ॥ ೧೨೫ ॥

ಹಣಿತೆಣ್ಣೆ ಬತ್ತಿಯ ಹಂಗಗ್ನಿದೀಪಕೆ । ಮಣಿದೀಪಕೇತರ ಹಂಗು ॥
ಎಣಿಸಲಂತುಟೆ ಕರ್ಮರಾ ವಿಕರ್ಮರ ಸುಖ । ದೆಣಿಕೆಗಳಿಲೆ ಭಾವಿತಾತ್ಮಾ ॥ ೧೨೬ ॥

ಹಣಿತೆವಿಡಿದು ಬತ್ತಿಯಿಂದ ತೈಲವನುಂಡು । ಬೆಣಕೇರುವಂತಗ್ನಿ ದೀಪಾ ॥
ಕಣಿಕಾನ್ನ ಮೊದಲಾಗಿ ತನುವಿಡಿದಿಂದ್ರಿಯ । ಗಣದಿ ಕೊಂಡೆಲ್ಲರುಬ್ಬುವರು ॥ ೧೨೭ ॥

ಎಣ್ಣೆಯಿದ್ದರೆಯುಬ್ಬಿ ಇಲ್ಲದಿದ್ದರೆ ತಗ್ಗಿ । ಬಣ್ಣವಾಸುವ ಸೊಡರಂತೆ ॥
ಉಣ್ಣದಿದ್ದರೆ ತಗ್ಗಿಯುಂಡರುಬ್ಬುವ ಲೋಕ । ದಣ್ಣಗಳಾಟವನರಿಯಾ ॥ ೧೨೮ ॥

ರತ್ನದೀಪಕೆಯೆಣ್ಣೆ ಮೊದಲಾದುವಿಲ್ಲದೆ । ನೂತ್ನಸುಪ್ರಭೆಯೊಪ್ಪುವಂತೆ ॥
ರತ್ನಾಕರಸಿದ್ಧನಯ್ಯಗೆ ಪರವಸ್ತು । ಯತ್ನವಿಲ್ಲದ ಸುಖವನುಜಾ ॥ ೧೨೯ ॥

ವ್ಯಂತರಸುರನಾಗನಕ್ಷತ್ರರವಿಳಜ । ನ್ಯಾಂತರಸುಖವನೊಟ್ಟೈಸಿ ॥
ಮುಂತಿರ್ದರರುಹನ ಸುಖಸಮುದ್ರದ ಮುಂದೆ । ತುಂತುರಂತಿಹುದೇನನೆಂಬೆ ॥ ೧೩೦ ॥

ತ್ರಿಭುವನವನು ಹಿಡಿದೆತ್ತುವ ಶಕ್ತಿಯುಂ । ಟಭವನಂತುಟು ಮಾಳ್ಪನಲ್ಲ ॥
ಪ್ರಭುವೆದ್ದು ಹಗರಣವಾಡಿದಂತಹುದೆಂದು । ಸಭೆಯೊಳೋಜೆಯೊಳೊಪ್ಪುತಿಹನು ॥ ೧೩೧ ॥

ಸುಜ್ಞಾನ ದರ್ಶನ ಸುಖ ಶಕ್ತಿ ನಾಲ್ಕು ಸ । ರ್ವಜ್ಞನೊಳಿರುತಿಹುವವನು ॥
ಪ್ರಾಜ್ಞರನಂತಚತುಷ್ಟಯವೆಂಬರು । ವಿಜ್ಞಾನಿ ವೀರಂಜಯಾತ್ಮಾ ॥ ೧೩೨ ॥

ಜಿನನಂತರಂಗಸಂಪದವಿವು ನಾಲ್ಕು ಮ । ತ್ತನುಮಾನವಿಡಿದವರೊಳಗೆ ॥
ನೆನೆದಿನ್ನು ನವಕೈವಲ್ಯಲಬ್ಧಿಗಳೆಂದು । ಮುನಿಗಳಾಡುವರು ಕೇಳವನು ॥ ೧೩೩ ॥

ತಮ್ಮ ನಿಜವನರಿಯದ ಸರ್ವರಿಗೆ ಪರ । ಬೊಮ್ಮವ ದಿವ್ಯನಾದದೊಳು ॥
ಜುಮ್ಮನೆ ತಿಳಿಪುವನದು ದಾನವೆಂಬುದು । ಸಮ್ಮತವಹುದು ಕೇಳನುಜಾ ॥ ೧೩೪ ॥

ಪ್ರಭುವಾಕ್ಯದಿಂದಂಜದಾತ್ಮಾಮೃತವನುಂಡು । ಅಭಿಭವವಳಿದೀಶರಹರು ॥
ಅಭಯಾನ್ನ ವೈದ್ಯಸಿದ್ಧಾಂತ ದಾನಗಳಲ್ಲಿ । ಅಭಿರಾಜಿಸಿದುವದರಿಂದ ॥ ೧೩೫ ॥

ತನುವಿದ್ದು ಮುಕ್ತನೆನಿಪುದ ಪಡೆವುದರಿ । ದನಿತರೊಳಮೃತ ಪುದ್ಗಲವು ॥
ತನಗೆಯ್ದಿ ಸುಖದೋರಿ ಹೋಹುದ ಪಡೆದನು । ಜಿನನಾಥಗದು ದಿವ್ಯಲಾಭಾ ॥ ೧೩೬ ॥

ಕಮ್ಮಲರ್ಮಳೆ ಮೊದಲಾದುವೆಲ್ಲವು ಭೋಗ । ಚಿಮ್ಮುವ ಚಮರಛತ್ರಗಳು ॥
ದಿಮ್ಮೆಂಬ ವಾದ್ಯ ಸಿಂಹಾಸನ ಮೊದಲಾದ । ಸೊಮ್ಮೆಲ್ಲ ಉಪಭೋಗವನುಜಾ ॥ ೧೩೭ ॥

ತೆಗೆದೊಂದು ಬಾರಿ ಭೋಗಿಸಿ ಬಿಡುವುದು ಭೋಗ । ಜಗದೊಳಗೊಂದು ವಸ್ತುವನು ॥
ಮುಗುಳೆ ಮುಗುಳೆ ಭೋಗಿಸುವುದುಪಭೋಗ ಭೋ । ಗಗಳೆರಡರ ಲಕ್ಷಣವದು ॥ ೧೩೮ ॥

ನ್ಯಾಯ ಜಾರದ ವಿಶ್ವತತ್ತ್ವ ನಿಶ್ಚಯವದು । ಕ್ಷಾಯಿಕವೆಂಬ ಸಮ್ಯಕ್ತ್ವ ॥
ಕಾಯುವ ಹೊದ್ದದಾತ್ಮನೊಳಡಗಿದ ಬುದ್ಧಿ । ಕ್ಷಾಯಿಕವೆಂಬ ಚಾರಿತ್ರ ॥ ೧೩೯ ॥

ಭೋಗೋಪಭೋಗ ಸುಲಾಭ ಸುದಾನ ವಿ । ರಾಗಸಮ್ಯಕ್ತ್ವಚಾರಿತ್ರ ॥
ಪ್ರಾಗುಕ್ತಸುಜ್ಞಾನದರ್ಶನಶಕ್ತಿಯೊಂ । ದಾಗಲೊಂಭತ್ತುಲಬ್ಧಿಗಳು ॥ ೧೪೦ ॥

ಸುಖವೊಂದು ಭೋಗೋಪಭೋಗಲಾಭದಿ ಮೂರು । ಮುಖವಾಯ್ತು ದಾನಸುಜ್ಞಾನಾ ॥
ವಿಖತಿಸಮ್ಯಕ್ತ್ವ ಚಾರಿತ್ರಭೇದದಿ ನಾಲ್ಕು । ಮುಖವಾಯ್ತು ಸುಜ್ಞಾನವೊಂದು ॥ ೧೪೧ ॥

ಒಮ್ಮೆ ನಾಲ್ಕೆಂಬರೊಂಭತ್ತೆಂಬರೊಡನೊಮ್ಮೆ । ತಮ್ಮ ಕೇಳದು ಯುಕ್ತಿರಚನೆ ॥
ಇಮ್ಮಯ್ಯ ಸಿರಿಗೂಡಿ ಜಿನನೊಪ್ಪುತಿರ್ದನಂ । ದೊಮ್ಮೆ ಕಂಡೆನು ಕಣ್ಣುತುಂಬ ॥ ೧೪೨ ॥

ಪೊರಗಂಗ ದಗದಗಿಸುತ ತೋರ್ಪುದೊಳಗಾತ್ಮ । ನುರೆ ತಳತಳಿಸುತೊಪ್ಪಿಹನು ॥
ಪೊರಗೊಳಗೆಲ್ಲಿ ನೋಡಿದರು ಸುಜ್ಞಾನವ । ಕರೆವುತೊಪ್ಪವನಾದಿವಸ್ತು ॥ ೧೪೩ ॥

ದೇಹವು ದಿವ್ಯವಾತ್ಮನು ದಿವ್ಯವದರಿಂದ । ದೇಹಾತ್ಮರಿರವು ಮಾಣಿಕದ ॥
ಕಾಹಳೆಯೊಳಗಿರ್ದ ಜ್ಯೋತಿಯ ರೂಪಿನಂ । ತೂಹಿಸಲೊಪ್ಪಿಹುದನುಜಾ ॥ ೧೪೪ ॥

ಕೊರಳಿಂದ ಮೇಲುತ್ತಮಾಂಗವೆಂಬರು ನಡು । ವರೆಗಂಗ ಮಧ್ಯಮವೆಂದು ॥
ಚರಣ ಕನಿಷ್ಠಾಂಗವೆಂಬರೆಲ್ಲರ ದೇಹ । ದಿರವಿನ ಪರಿಯುಲ್ಲ ಕೇಳು ॥ ೧೪೫ ॥

ಶಿರದಿಂದ ಕೆಂಬಜ್ಜೆ ಮುಟ್ಟಲು ಸರ್ವತ್ರ । ಪರಮೋತ್ತಮಾಂಗ ಜಿನಾಂಗಾ ॥
ಮರುಗದೊಳಡಿ ತುದಿ ನಡುವೆಂಬ ಭೇದವಾ । ಪರಿಮಳ ಹೆಚ್ಚುಕುಂದುಂಟೆ ॥ ೧೪೬ ॥

ಆ ದೇಹದೊಳಗೆಸೆವಾತ್ಮನು ಶಿರದಿಂದ । ಪಾದಮುಟ್ಟಲು ನೋಡುವಾಗ ॥
ಆದಿಮಧ್ಯಾಂತದೊಳೆಲ್ಲಿಯು ಸುಪವಿತ್ರ । ವಾದ ರೂಪಿನೊಳೊಪ್ಪುತಿಹನು ॥ ೧೪೭ ॥

ಮಾಣಿಕಗನ್ನಡಿಗಡಿ ಕಡೆ ನಡುವೆಂಬ । ಕ್ಷೀಣವಿಕಲ್ಪಗಳುಂಟೆ ॥
ಕಾಣುತರಿವುತೆಸೆವಾತ್ಮನುತ್ತಮನಲ್ಲ । ದೂಣೆಯವುಂಟೆ ರೂಪಿನೊಳು ॥ ೧೪೮ ॥

ಅಂತರಂಗದ ಸಿರಿ ಬಹಿರಂಗಸಂಪದ । ವಿಂತೆರಡೊಡಗೂಡಿದವನಾ ॥
ಅಂತಿಂತುಟೆಂದೆನಲರಿಯೆನಿಮ್ಮೈಸಿರಿ । ವಂತನೆಂದೆನಬಲ್ಲೆನನುಜಾ ॥ ೧೪೯ ॥

ಕಾಂತಿಯ ಕಣಿ ತಿಳಿವಿನ ತೀರ್ಥ ಮೂಲೋಕ । ಶಾಂತಿಯ ಸಾಗರವೆನಿಸಿ ॥
ಕಂತುವಿಜಯನೆಸೆವನು ತನ್ನ ನಿಲುಕಡೆ । ಭ್ರಾಂತಿಯ ಕೆಡಿಸೆ ಕಂಡವರಾ ॥ ೧೫೦ ॥

ನಿದ್ರೆಯೆಂಬುದು ಮೂರ್ಛೆ ಸಾವಿಗೆ ಸರಿಯಾಗಿ । ನಿದ್ರಾಜಾಡ್ಯವಿಲ್ಲಾಗಿ ॥
ಚಿದ್ರೂಪನೊಮ್ಮೆಯಾದರು ಪವಡಿಪುದಿಲ್ಲ । ಭದ್ರಾಸನದೊಳೊಪ್ಪುತಿಹನು ॥ ೧೫೧ ॥

ಪರರ ಕೊಲ್ಲುವುದಕಾಗಿ ತನ್ನ ಕಾವುದಕಾಗಿ । ಅರಿಯುಳ್ಳರಲಗನಾಂತಿಹರು ॥
ಅರಿಯಿಲ್ಲ ತನಗೆ ಕೇಡಿಲ್ಲ ಲೋಗರ ಕೊಲ್ಲ । ನರುಹಗಿಲ್ಲದರಿಂದ ಕೈದು ॥ ೧೫೨ ॥

ಭವದೊಳಿರ್ದವರು ತಾವೊಬ್ಬ ದೇವನ ಜಪಿ । ಸುವರಲ್ಲಿ ಜಪಸರವಿಹುದು ॥
ಭವವಿಲ್ಲ ತನಗೀಶರಿಲ್ಲದರಿಂದಿಲ್ಲ । ಶಿವನ ಹಸ್ತದೊಳಕ್ಷಮಾಲೆ ॥ ೧೫೩ ॥
ನೂರೆಂಟುಜಪ ಮರೆದಪುದೆಂದು ಸರಮಾಡಿ । ನೂರೆಂಟುಮಣಿಯ ತಾಳ್ದವರು ॥
ಮೂರುಲೋಕದ ಪೊರಗೊಳಗನರಿಯರೆಂದು । ಬೇರಿನ್ನು ನುಡಿಯಲದೇಕೆ ॥ ೧೫೪ ॥
ಪರಮಾತ್ಮಸುಖವಿಲ್ಲದವರು ಕಾಮಗೆ ಸೋತು । ತರುಣಿಯ ಬಲೆಗೆ ಸಿಕ್ಕಿಹರು ॥
ಪರಮಾತ್ಮಸುಖವುಳ್ಳ ಕಾರಣ ಜಿನನಾಥ । ಗರಸಿಯರಿಲ್ಲ ಕೇಳನುಜಾ ॥ ೧೫೫ ॥
ಪ್ರೌಢವಿಗೆ ಸಿಂಗಾರ ಜಿನನ ದಿವ್ಯಾಂಗವಿ । ನ್ನುಡಿಗೆತೊಡಿಗೆಯ ಹಂಗೇಕೆ ॥
ಉಡಿಗೆತೊಡಿಗೆಯ ಹಂಗೆಂಬುದು ಕಾಂತಿಗೆ । ಟ್ಟೊಡಲಿಗಲ್ಲವೆ ಲಲಿತಾಂಗಾ ॥ ೧೫೬ ॥
ನೆರೆ ಚಂದ್ರರವಿಕೋಟಿಕಿರಣದಂಗಕೆ ವಸ್ತ್ರ । ಮರೆಯಾದರೆಸವುದೆ ತಮ್ಮಾ ॥
ಅರುವೆಯೊಳಗೆ ದಿವ್ಯರತ್ನವ ಕಟ್ಟಿದ । ತೆರನಹುದದು ರಮ್ಯವಲ್ಲ ॥ ೧೫೭ ॥
ಆ ವಿಭುವಿನ ದೇಹಕಾಂತಿಯ ಮುಂದಿನ್ನ । ದಾವ ರತ್ನಗಳೊಂದು ಕಾಂತಿ ॥
ದೀವಿಗೆಗೇಕೆ ಮಾಣಿಕದ ಕೀಲಣೆ ಜಿನ । ದೇವಗೇತಕೆ ಮಣಿದೊಡಿಗೆ ॥ ೧೫೮ ॥
ಕಾಂತಿಯೆ ದೇಹ ಕಾಂತಿಯೆ ವಸ್ತ್ರ ಪರಮಗೆ । ಕಾಂತಿಯೆ ಭೂಷಣವಾಗೆ ॥
ಕಾಂತಿನಾಥನು ದಿವ್ಯಮಾಣಿಕ್ಯನಾಥನೆಂ । ದಿಂತಾದುವಮಲನಾಮಗಳು ॥ ೧೫೯ ॥
ಕಂಡರೆ ಸುರರೊಮ್ಮೆ ಪದನಖದೊಳು ಸಾಲು । ಗೊಂಡಿರ್ದುವವರ ಮೊಗಗಳು ॥
ರುಂಡಮಾಲಾಧರನೆಂದೊಮ್ಮೆ ಬಿನದಕೆ । ಕೊಂಡಾಡಿದರು ಪರಶಿವನಾ ॥ ೧೬೦ ॥
ಸಂಧಿಯ ಸಡಿಲಿಸಿ ಸರ್ವರ ಪಾಪವೆಂ । ಬಂಧಕಾರವ ಕೆಡಿಸಿದರೆ ॥
ಅಂಧಕಾಸುರನ ಮರ್ದಿಸಿದನೆಂಬರು ಪುಣ್ಯ । ಬಂಧಾರ್ಥಿಗಳು ಭಕ್ತಿಯಿಂದ ॥ ೧೬೧ ॥
ಅಷ್ಟಮದಗಳೆಂಬ ಮದಗಜಗಳನು ವಿ । ನಷ್ಟವ ಮಾಡಿದಗ್ರಿಮನಾ ॥
ಶಿಷ್ಟರು ಕಂಡು ಗಜಾಸುರಮರ್ದನ । ಇಷ್ಟವ ಸಲಿಸೆನುತಿಹರು ॥ ೧೬೨ ॥
ಶೀಘ್ರದೊಳಗೆ ಕೋಪವೆಂದೆಂಬ ವಿಷಮದ । ವ್ಯಾಘ್ರವ ಕೆಡಿಸಿದುಜ್ಜ್ವಲನಾ ॥
ವ್ಯಾಘ್ರಾಸುರವೈರಿ ಜಯಯೆಂದು ಸೇಸೆಯ । ನಾಘ್ರಾಣಿಸುತ್ತಿಹರಲ್ಲಿ ॥ ೧೬೩ ॥
ಚಂದ್ರಬಿಂಬಗಳಂತೆ ಮೂರುಸತ್ತಿಗೆ ಮೇಲೆ । ರುಂದ್ರವೈಭವದೊಳೆತ್ತಿರಲು ॥
ಚಂದ್ರಶೇಖರ ಚಂದ್ರಮೌಳಿಯೆಂದೊಲ್ದು ಜಿ । ನೇಂದ್ರನ ಕೊಂಡಾಡುತಿಹರು ॥ ೧೬೪ ॥
ಎಡಬಲದೊಳು ಮೊದಲೆರಡುಂಟು ಕಂಗಳು । ನಡುವೊಂದು ಸುಜ್ಞಾನದೃಷ್ಟಿ ॥
ಒಡನೆ ಮೂಡಿದುದರಿಂದವನ ಮುಕ್ಕಣ್ಣನೆಂ । ದಡಿಗಡಿಗಮರರಾಡುವರು ॥ ೧೬೫ ॥
ಪಣೆಯೊಳು ಮನವನಿಟ್ಟಾತ್ಮನ ನೋಡುತ । ಕ್ಷಣಕೆ ಕರ್ಮವ ಸುಟ್ಟಿರುಹನಾ ॥
ಪಣೆಗಣ್ಣನೆಂಬರು ಬಿಸಿಗಣ್ಣನೆಂಬರು । ಗುಣನಾಮವವು ನೋಡುವಾಗ ॥ ೧೬೬ ॥

ಕನಕಕಮಲದ ಮೇಲಿಹನಾಗಿ ಕಮಲಾ । ಸನನೆಂಬರೊಮ್ಮೆ ನಾಲ್ಮೊಗವಾ ॥
ಅನುಕರಿಸಿರುತಿಹನಾಗಿ ಚತುರ್ಮುಖ । ನೆನುತ ಸುರರು ಪೊಗಳುವರು ॥ ೧೬೭ ॥

ನಷ್ಟಮಾರ್ಗಿಗಳಿಗೆ ಕೈವಲ್ಯಮಾರ್ಗವ । ಸೃಷ್ಟಿಸಿ ತೋರಿದೊಡವರು ॥
ಸೃಷ್ಟಿಕರ್ತಾರನೆಂದೆಂಬರು ಭಕ್ತಿಸಂ । ತುಷ್ಟಿಯಿಂದಾದಿವಸ್ತುವನು ॥ ೧೬೮ ॥

ಅಜಗೆ ಕಮಂಡಲವುಂಟೆಂಬರದರಿಂದ । ನಿಜಶುಚಿದೇಹಿಯಲ್ಲವನು ॥
ನಿಜಶುಚಿದೇಹಿ ನೀರಳ್ಕೆಯಿಲ್ಲದನಾಗಿ । ನಿಜದೊಳಾದಿಬ್ರಹ್ಮನಿವನು ॥ ೧೬೯ ॥

ವಿಮಲಬೋಧದ ಕೋಣೆಯೊಳಗೆ ಮೂಲೋಕ ಸಂ । ಕ್ರಮಿಸಿ ಮಾರ್ಪೊಳೆದಡಗಿರಲು ॥
ಅಮಮ ಲೋಕವನುದರದೊಳಿಟ್ಟ ಪುರುಷೋ । ತ್ತಮನೆಂಬರಾದಿಮಾಧವನಾ ॥ ೧೭೦ ॥

ಜಯಶಬ್ದದೊಳು ಜಿನನೆಂದಹುದದು ಜೀವ । ಚಯವ ಗೆಲ್ವರೆ ಜಿನನಲ್ಲ ॥
ಭಯ ಮೊದಲೆನಿಸಿದಷ್ಟಾದಶದೋಷವ । ಜಯಿಸಲು ಜಿನನೆಂಬರನುಜಾ ॥ ೧೭೧ ॥

ಜಿನರು ಕೂಡಿಪ್ಪತ್ತುಸಾಸಿರ್ವರರುಹನೊ । ತ್ತಿನೊಳಿರುತಿಹರು ತನ್ನಂತೆ ॥
ಅನಿಬರಿಗಾದೀಶ ಮುಖ್ಯನಾದುದರಿಂದ । ಜಿನಪತಿಯೆಂದೆಂಬರನುಜಾ ॥ ೧೭೨ ॥

ಪರಮಾತ್ಮ ಜಿನ ಶಿವ ಪರಶಿವ ಪರಬೊಮ್ಮ । ಪುರುಷೋತ್ತಮ ಸದಾಶಿವನು ॥
ಅರುಹ ದೇವೋತ್ತಮ ವೃಷಭನಾಯಕನಾದಿ । ಪರಮೇಶನೆಂದೆಂಬರೊಮ್ಮೆ ॥ ೧೭೩ ॥

ಆದಿಜಿನೇಶನಾದಿಬ್ರಹ್ಮನಾದೀಶ । ನಾದೀಶ್ವರನಾದಿವಸ್ತು ॥
ಆದಿಮಧ್ಯಾಂತವ ತಟ್ಟಿ ತಟ್ಟದಿಹ ಮ । ಹಾದೇವನೆಂಬರೊಮ್ಮೊಮ್ಮೆ ॥ ೧೭೪ ॥

ಇವು ಮೊದಲಾಗಿ ಹಲವು ದಿವ್ಯನಾಮವ । ದಿವಿಜರಿಟ್ಟೋಲೈಸುತಿಹರು ॥
ಅವರ ಭಕ್ತಿಯನಿಂದು ನೀವೆ ಕಂಡಪಿರೆಂದು । ರವಿಕೀರ್ತಿರಾಜನಾಡಿದನು ॥ ೧೭೫ ॥

ಅಯ್ಯ ಜೀಯೆಂದು ಹುಂಕೊಂಬವನೊಬ್ಬನು । ಸಯ್ಯರಿದೊರೆವವನೊಬ್ಬ ॥
ಮೆಯ್ಯುಬ್ಬಿ ಕೇಳುತೆಲ್ಲರು ಸುತ್ತಿಮುತ್ತಿಕೊಂ । ಡೊಯ್ಯನದ್ರಿಯನೇರುತಿಹರು ॥ ೧೭೬ ॥

ಚೆನ್ನಾದುದಣ್ಣಾಜಿ ನೀವೊಮ್ಮೆ ದೇವನ । ಮುನ್ನ ಕಂಡಿದ್ದುದರಿಂದ ॥
ಬಿನ್ನಾಣಿಸಿದಿರದು ನಮಗೆ ಕಂಡಂತಾಯ್ತು । ನಿನ್ನ ಕೌಶಲವಾಕ್ಯದಿಂದ ॥ ೧೭೭ ॥

ಮುನ್ನೊಮ್ಮೆ ನೀವು ಕಂಡಿರಿ ನಿಮ್ಮ ನುಡಿಯಿಂದ । ಮುನ್ನ ಕಂಡಂತಾಯ್ತು ನಮಗೆ ॥
ಇನ್ನಾದಿನಾಥನ ನಾವು ಕಾಣುವುದು ಸಂ । ಪನ್ನಪುನರ್ದರುಶನವು ॥ ೧೭೮ ॥

ವೀರಂಜಯರಾಜ ಕೇಳ್ದಾದುದು ದೇವ । ರಾರೈದು ತಿಳುಪಿದುದಾಯ್ತು ॥
ದಾರಿ ಸದರವಾದುದರುಹನ ಸಭೆಯ ಕೆ । ಣ್ಣಾರೆ ಕಂಡಂತಾದುದೆಮಗೆ ॥ ೧೭೯ ॥

ನೂತನದರ್ಶನರಾಗಿ ಬಂದೆಮಗೆ ಪು । ರಾತನದರ್ಶನವಾಯ್ತು ॥
ಪೂತು ಮಝುರೆ ರವಿಕೀರ್ತಿರಾಜನ ವಾಕು । ಚಾತುರ್ಯವೆ ಎಂದರವರು ॥ ೧೮೦ ॥

ವಚನದ ಮೃದು ಜಿನಸಭೆಯ ವರ್ಣಿಪದೊಂದು । ರಚನೆ ಮತ್ತೆದೆಗೊಳಿಪಂಗಾ ॥
ಪ್ರಚುರಾತ್ಮರತಿ ಈತಗಲ್ಲದಿನ್ನೊಬ್ಬಗೆ । ವಚಿಸಲಿಲ್ಲೆಂದು ನೆನೆದರು ॥ ೧೮೧ ॥
ಓದುವ ಮಾಣಿಗಳೋದಿಸುವಾರ್ಯನ । ನಾದರಿಸುತ ನಡೆವಂತೆ ॥
ಆ ದೇವಚರಿತವನುಸುರುವಣ್ಣನ ಸೇವೆ । ಯಾದರವಿಡಿದು ನಡೆದರು ॥ ೧೮೨ ॥
ಅದೆ ರತ್ನದೊಡ್ಡುಗಲ್ಲಾರೈಕೆ ದೇವ ಮುಂ । ದದೆಕೊ ಪಾಸರೆ ಪಾದ ಜತನಾ ॥
ಇದೆ ಪುಷ್ಪವಲ್ಲಿ ಎಚ್ಚರಿಕೆಯೆಂದನುಜರು । ಹದಹದಕುಸುರುತೆಯ್ದಿದರು ॥ ೧೮೩ ॥
ಕಥೆಯು ಪೇಳ್ವುದು ಕೇಳ್ವುದೆಡೆ ತಪ್ಪಲಿಲ್ಲವಾ । ಪಥದ ನೋಟವು ತಪ್ಪಲಿಲ್ಲ ॥
ಶಿಥಿಲಕರ್ಮಿಗಳೋಜೆವಿಡಿದೇರಿದರು ಕರ್ಮ । ಮಥನನ ಕಾಣ್ಬರರ್ತಿಯೊಳು ॥ ೧೮೪ ॥
ಈ ಕಥೆಗಿದು ತಕ್ಕ ಸುಕ್ಷೇತ್ರವೀಹಾದಿ । ನೂಕಿ ಮುಕ್ತಿಗೆ ಹೋಹ ಹಾದಿ ॥
ಸಾಕು ಸಾಕಣ್ಣಾಜಿ ಬಳಲಿದಿರೆನುತವ । ರಾ ಕೈಲಾಸವೇರಿದರು ॥ ೧೮೫ ॥
ಬರುತಿರ್ದರೊಯ್ಯನೊಯ್ಯನೆ ಬಪ್ಪ ಪಥದೊಳಾ । ಗಿರಿಯಗ್ರಜಿನಸಭೆಯಿಂದ ॥
ಸುರಭೇರಿ ದಂಧಣದಿಮ್ಮ ಭೋರ್ಭೋರೆಂಬ । ಸ್ವರ ಕೇಳಲಾಯ್ತು ದೂರದೊಳು ॥ ೧೮೬ ॥
ಕ್ರಮವಿಡಿದನುಜರ್ಗೆ ರವಿಕೀರ್ತಿರಾಜನು । ಸಮವಸರಣವ ವರ್ಣಿಸುತ ॥
ಗಮಿಸಿದನದರ ಸಮೀಪಕೆಂಬಲ್ಲಿಗೆ । **ಸಮವಸರಣದ ಸುಸಂಧಿ** ॥ ೧೮೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೮೮ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದಮೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೮೯ ॥
ಕಾಮವಿರೋಧಿ ಕಾಮಿತಫಲದಾಯಕ । ವ್ಯೋಮಸನ್ನಿಭನೆ ಚಿನ್ಮಯನೆ ॥
ಕ್ಷೇಮಂಕರನೆ ನನ್ನಂತರಂಗದೊಳಿರು । ಸ್ವಾಮಿ ಚಿದಂಬರಪುರುಷಾ ॥ ೧೯೦ ॥

ಸಮವಸರಣಸಂಧಿ ಸಂಪೂರ್ಣಂ

# ದಿವ್ಯಧ್ವನಿಸಂಧಿ.

---

ಬಯಲಪುರುಷ ಬಯಲಾಕಾರ ಬಕ್ಕಟ । ಬಯಲರೂಪನೆ ಬಯಲಾಂಗಾ ॥
ಬಯಲಾಧಾರನೆ ಮತಿದೋರು ನಿಚ್ಚ ನಿ । ರ್ವಯಲ ನಿರಂಜನಸಿದ್ಧಾ ॥ ೧ ॥

ಭೇರಿಯ ದನಿಗೇಳಿ ನಲಿದರು ನವಿಲು ಮುಂ । ಗಾರ ಮೊಳಗುಗೇಳಿದಂತೆ ॥
ಆ ರಾಜಪುತ್ರರು ಕಟ್ಟದಿರೊಳಗೆ ಕ । ಣ್ಣಾರೆ ಕಂಡರು ಜಿನಸಭೆಯಾ ॥ ೨ ॥

ಕಾಣುತ ಕೈಯೆತ್ತಿ ಮುಗಿದು ಮಂಡೆಯ ಮೇಲೆ । ಠಾಣೆಯುಗೊಳಿಸಿ ಭಕ್ತಿಯೊಳು ॥
ಮಾಣಿಕ್ಯತೀರ್ಥನಾಯಕ ಜಯ ಜಯಯೆಂದು । ಗೋಣೆತ್ತಿ ನೋಡುತೆಯಿದ್ದರು ॥ ೩ ॥

ಬೆಳ್ಳಿಯ ಬೆಟ್ಟದ ಮೇಲೊಂದು ಕಾಮನ । ಬಿಲ್ಲಿನ ಬೆಟ್ಟ ನಿಂದಿದೆಕೊ ॥
ಬೆಳ್ಳಿಬೆಟ್ಟವ ಮುಟ್ಟದಿದೆ ಚಿತ್ರ ಚಿತ್ರವೆಂ । ದೆಲ್ಲರು ನೋಡುತೆಯಿದ್ದರು ॥ ೪ ॥

ರೂಪ್ಯಗಿರಿಯ ಮೇಲೆ ನವರತ್ನಗಿರಿಯನು । ಸ್ಥಾಪ್ಯವ ಮಾಡಿದರಾರೊ ॥
ಗೋಪ್ಯವೆ ಇದು ಜಿನಮಹಿಮೆಯೆಂದೆನುತಾಗ । ಜಾಪ್ಯವ ಮಾಡದೆಯಿದ್ದರು ॥ ೫ ॥

ಮೂಲೋಕದೊಳಗುಳ್ಳ ಕಾಂತಿಯೆಲ್ಲವು ಕೂಡಿ । ಪಾಳಿಯಬಿಟ್ಟ ರೀತಿಯೊಳು ॥
ಮೂಲೋಕದೊಡೆಯನ ಪುರವೊಪ್ಪುತಿದೆಯೆಂದು । ಮೇಲೆತ್ತಿ ನೋಡುತೆಯಿದ್ದರು ॥ ೬ ॥

ಒಳಗೆಂಟುಕೋಟೆಯನೊಳಕೊಂಡು ಹೊರಗೆ ಕಂ । ಗೊಳಿಪ ಧೂಳೀಸಾಲೆಯೆಂಬ ॥
ಬಲುಗೋಟೆ ತೋರುತಿದ್ದುದು ನವರತ್ನದ । ಹೊಳಹಿಂದ ಸುರಚಾಪದಂತೆ ॥ ೭ ॥

ಅಲ್ಲಿ ಸುವರ್ಣಮಾನಸ್ತಂಭ ಗಗನವ । ನಳ್ಳಿರಿವುತ ಬಾಗಿಲೊಳಗೆ ॥
ಅಲ್ಲಲ್ಲಿ ನಾಲ್ಕುದಿಕ್ಕಿನೊಳು ನಾಲ್ಕಿಹುವವ । ರಲ್ಲಿ ಕಂಡರು ಕಂಭವೊಂದಾ ॥ ೮ ॥

ಆ ಕೋಟೆಯುಡಿಮುಟ್ಟ ಕೆಳಗಣ ರಜತಾದ್ರಿ । ಗೇಕಹಸ್ತವ ಬಿಟ್ಟು ಮೇಲೆ ॥
ಜೋಕೆಗೊಂಡೈದುಸಾವಿರಮಾರಿನೆಡೆಯೊಳ । ನೇಕಸೋಪಾನಗಳಿಹುವು ॥ ೯ ॥

ಗಿರಿಯಿಂದ ಮೇಲೆ ಧೂಳೀಸಾಲೆಯನು ನೋಡ । ಲರೆಗಾವುದವು ಕೂಗಳತೆ ॥
ನೆರೆದಷ್ಟರೊಳಗೆ ಸೋಪಾನವಿಪ್ಪತ್ತುಸಾ । ವಿರವುಂಟು ಕಂಡರಂತದನು ॥ ೧೦ ॥

ಅಡಿಯಣ ಸೋಪಾನದೊಳು ಪಾದಲೇಪನ । ತೊಡೆದಿಹುದದನು ಮೆಟ್ಟಿದರೆ ॥
ಮಿಡಿದಂತೆ ಕ್ಷಣಕೆ ಮೇಲೆಯ್ದುವರರುಹನ । ತಡವಿಲ್ಲದೊಡನೆ ಕಾಣುವರು ॥ ೧೧ ॥

ದೂರದೂರದೊಳಿದ್ದು ರತ್ನಸೋಪಾನಕೆ । ಸಾರಿಬಂದೊಯ್ಯನೆ ಮೆಟ್ಟಿ ॥
ಧೀರರು ಜಿನ ಶರಣೆನುತ ಧೂಳೀಸಾಲೆ । ಗಾರೋಹಿಸಿರುತತ್ಕ್ಷಣವೆ ॥ ೧೨ ॥

ಕಂಡರಾ ಬಾಗಿಲೊಳೆಡಬಲದೊಳು ರತ್ನ । ದಂಡವನೂರಿ ನಿಂದಿಹರಾ ॥
ಮಂಡೆ ವೈತುಂಬಿದಾಭರಣದ ಹೊಳಹಿನು । ದ್ದಂಡರಾ ದ್ವಾರಪಾಲಕರಾ ॥ ೧೩ ॥

ಅವರನುಮತವಿಡಿದೊಳವೊಕ್ಕು ಮುಗಿಲ ಮು । ಟ್ಟುವ ಹೊನ್ನ ಕಂಭವ ನೋಡಿ ॥
ಕುವರರಾ ಕಂಭದ ಕೆಲದ ಕುಂಡದೊಳು ಪಾ । ದವ ತೊಳೆದಡಿಯಿಟ್ಟರೊಡನೆ ॥ ೧೪ ॥

ಅಲ್ಲಲ್ಲಿ ಕೋಟೆಯು ಕೋಟೆಗಳೆಡಬಲ । ದಲ್ಲಿದ್ದ ಸಿರಿಯನೀಕ್ಷಿಸುತ ॥
ಅಲ್ಲಲ್ಲಿ ಬಾಗಿಲ ಸುರರನುಮತದಿಂದ । ಮೆಲ್ಲಮೆಲ್ಲನೆ ಗಮಿಸಿದರು ॥ ೧೫ ॥

ಬೆಳಗಿನ ಕಡಲೊಳು ನಡೆವಂತೆ ತಂಪಿನ । ಹೊಳೆಯೊಳು ಮುಳುಗಿ ಬಹಂತೆ ॥
ತಳತಳಿಸುತ ಗಮಗಮಿಸುವ ಭೂಮಿಯೊ । ಳೊಳಹೊಕ್ಕು ಗಮಿಸಿದರೊಸೆದು ॥ ೧೬ ॥

ಎಂಟುಕೋಟೆಯು ನಡುವೇಳುಭೂಮಿಗಳೊಳ । ಗುಂಟಾದ ಸೊಬಗನೀಕ್ಷಿಸುತ ॥
ದಾಂಟಿದರೇಳುಕೋಟೆಯು ಪಳುಕಿನ ಕೋಟೆ । ಎಂಟನೆಯದು ಕಂಡರದನು ॥ ೧೭ ॥

ಲಾವಣ್ಯರಸ ತುಂಬಿ ತುಳುಕುತದಕೆ ತಕ್ಕ । ಠೀವಿ ಸಿಂಗರದೊಡಗೂಡಿ ॥
ದೇವನಲ್ಲಿಗೆ ಬಹ ಭರತಕುಮಾರರ । ದೇವೇಂದ್ರ ಕಂಡ ದೂರದೊಳು ॥ ೧೮ ॥

ಕಡೆದೆರೆದಂತೆ ಕಟ್ಟಾಯತ ಹೊಸಹೊನ್ನ । ತೊಡೆಹದಂತೆಸೆವ ಮೈಬಣ್ಣಾ ॥
ಅಡರುವ ಜವ್ವನದರಸುಮಕ್ಕಳು ಬಹ । ಕಡುಗಾಡಿ ಸೋಲಿಸಿತವನಾ ॥ ೧೯ ॥

ನಡೆವ ಗಮಕ ನುಡಿಮೋಜೆ ನೋಡುವ ಠೀವಿ । ಜಡಹೊದ್ದದೆಸೆವ ಪಟುತ್ವಾ ॥
ಎಡೆಗೊಂಡ ವಿನಯ ಗಂಭೀರವೆರಸಿ ಬಹ । ಬೆಡಗಿಗೆ ಬೆರಗಾದನಿಂದ್ರಾ ॥ ೨೦ ॥

ಕಂಗಳ ಕಾಂತಿ ಕೆಂಬಲ್ಗಳ ಕಾಂತಿ ರ । ತ್ನಂಗಳಾಭರಣದ ಕಾಂತಿ ॥
ಅಂಗಕಾಂತಿಯೊಳೊಡವೆರಸೆ ಬಂದರು ಜ್ಯೋತಿ । ರಂಗದ ಪುರುಷರೆಂಬಂತೆ ॥ ೨೧ ॥

ಆರಿವರೆಮ್ಮ ರಾಜ್ಯದೊಳು ಕಂಡರಿಯೆವು । ಈ ರೂಪು ಬಹುದೆ ಮರ್ತ್ಯರಿಗೆ ॥
ಬಾರದು ಬಂದರೊಬ್ಬಿಬ್ಬರಿಗಹುದದು । ಧಾರಿಣಿಯೊಳು ಚೋದ್ಯವೆಂದಾ ॥ ೨೨ ॥

ಇವನಿಂದವನು ಚೆಲ್ವನವನಿಂದಿವನು ಚೆಲ್ವ । ನಿವನವನಿಂದಾತ ಚೆಲ್ವಾ ॥
ಅವನಿವನೆನಲೇಕೆ ಸರ್ವರು ಚೆಲ್ವರು । ಭುವನದೊಳಾರಿವರೆಂದಾ ॥ ೨೩ ॥

ಆರಯ್ದನಿವರಹೊ ಭರತೇಶ್ವರನ ಸುಕು । ಮಾರರಲ್ಲವೆಯೆಂದು ತಿಳಿದಾ ॥
ಆ ರಾಜರತ್ನದೊಳಲ್ಲದಿಂತಪ್ಪ ಕು । ಮಾರರತ್ನಗಳಾಗವೆಂದಾ ॥ ೨೪ ॥

ಲೋಕನಾಥನ ಪುತ್ರ ಭರತೇಶ ರತ್ನಶ । ಲಾಕೆಯಾ ರನ್ನಗಣಿಯೊಳು ॥
ಈ ಕುಮಾರಕರತ್ನಗಳು ಜನಿಸವೆಯೆಂದು । ನಾಕದರಸು ಮಂಡೆಯೊಲೆದಾ ॥ ೨೫ ॥

ಅತ್ತಲಾ ದಿವಿಜೇಂದ್ರನಂತು ಯೋಚಿಸುತಿದ್ದ । ನಿತ್ತಲೀ ಕುವರರೆಂಟನೆಯ ॥
ಸುತ್ತುಗೋಟೆಯು ದಾಂಟಿ ಹೊಕ್ಕರು ಪಳುಕಿನೊಂ । ಭತ್ತನೆಯಮಲಕೋಟೆಯನು ॥ ೨೬ ॥

ಕಂಡರು ಮೂರುಪೀಠದ ಮೇಲೆ ಸಿಂಹದ । ಮಂಡೆಯು ಮೇಲಣಂಬುಜದ ॥
ಚಂಡಿಕೆಯನು ಸೋಂಕದೆಸೆವ ಸುಜ್ಞಾನಕ । ರಂಡನ ಪುರುಜಿನೇಶ್ವರನಾ ॥ ೨೭ ॥
ಲೋಕಾಲೋಕವ ಸುಜ್ಞಾನಕೋಣೆಯೊ । ಳೇಕಾಣುಮಾತ್ರದೊಳಿರಿಸಿ ॥
ಏಕೋ ದೇವ ಏಷೋದ್ವೈತಯೆಂಬ ಬ್ರ । ಹ್ಮಾಕೀರ್ಣಕನ ಕಂಡರವರು ॥ ೨೮ ॥
ಅಜ್ಞಾನವೆಂಬಂಧಕಾರವನರೆಯಟ್ಟಿ । ವಿಜ್ಞಾನಸೂರ್ಯನ ಧರಿಸಿ ॥
ಸುಜ್ಞಾನದರ್ಶನವೆರಡೆ ವೈಯಾದ ಸ । ರ್ವಜ್ಞನ ಕಂಡರಾ ನೃಪರು ॥ ೨೯ ॥
ಇಟ್ಟು ಚಿತ್ತವನು ಭೋಗದೊಳು ತನ್ನಾತ್ಮನ । ನಿಟ್ಟಿಸಿ ಧ್ಯಾನಾಗ್ನಿಯಿಂದ ॥
ಹುಟ್ಟು ಮುಪ್ಪಳಿವೆಂಬ ಹೆಸರ ಮುಪ್ಪುರಗಳ । ಸುಟ್ಟದೇವನ ಕಂಡರವರು ॥ ೩೦ ॥
ವೇದ ಸಿದ್ಧಾಂತ ಪುರಾಣ ತರ್ಕಾಗವು । ದೋದಿಗೆ ಸಿಲ್ಕಿ ಸಿಲ್ಕದನಾ ॥
ಆದಿಗನಾದಿಯಿಂದತ್ತತ್ತಲರಿವೇರಿ । ದಾದಿವಸ್ತುವ ಕಂಡರವರು ॥ ೩೧ ॥
ಉಡದೆ ತೊಡದೆ ಚೆಲ್ವ ವಿಾಯದುಣ್ಣದೆ ಸುಖಿ । ಮಡದಿಯರೊಂದದಾನಂದಾ ॥
ನುಡಿ ನೋಟ ಮನಸಿಗೆ ಬಂದುಬಾರದ ಜಗ । ದೊಡೆಯನ ಕಂಡರಾ ನೃಪರು ॥ ೩೨ ॥
ಕೋಟಿಚಂದ್ರಾರ್ಕರ ಕಿರಣವನೊಟ್ಟೈಸಿ । ಸಾಟಿಯಿಟ್ಟೊವ್ವೆ ನೋಡಿದರೆ ॥
ವಿಾಟಾದ ದೇಹಕಾಂತಿಯು ಕಾಲಕರ್ಮನಿ । ರ್ಘಾಟನ ಕಂಡರಾ ನೃಪರು ॥ ೩೩ ॥
ನಿರುತನಿರ್ಭೇದಭಕ್ತಿಯೆ ತಾಯಿಯಾ ಶ್ರೀಮಂ । ದರಸ್ವಾಮಿ ಪಡೆದಯ್ಯನೆಂದು ॥
ಪರಿಣಾಮವಡೆದ ರತ್ನಾಕರಸಿದ್ಧನ । ಪಿರಿಯ ತಂದೆಯ ಕಂಡರವರು ॥ ೩೪ ॥

ಎರಗಿ ನುತಿಸುವೆವೆಂದೆಯ್ತಂದು ದೇವನ । ವಿಾರುಗುವಾಕಾರವ ಕಂಡು ॥
ಎರಗುವ ನುತಿಸುವ ಹಂಬಲ ಮರೆದು ಸೈ । ವೆರಗಾಗಿ ನಿಂದರೇನೆಂಬೆ ॥ ೩೫ ॥
ಸಿರಿಮೊಗದೊಳು ಕೊರಳೊಳು ನಿಡುದೋಳ್ಗಳೊ । ಳುರದೊಳು ನಾಭಿಕೂಪದೊಳು ॥
ಚರಣಗಳೊಳಗೆ ಕೆಂಬಜ್ಜೆಗಳೊಳು ಪೊಕ್ಕು । ಬರಲೊಲ್ಲವವರ ದೃಷ್ಟಿಗಳು ॥ ೩೬ ॥
ಉಡಿಗೆತೊಡಿಗೆಯ ತೊಡಂಕಿಲ್ಲ ರನ್ನಗ । ನ್ನಡಿಯೆ ಜಿನೇಂದ್ರನಾದಂತೆ ॥
ಕಡುಸೊಗಸುವ ರೂಪಿನೊಳಗವರಕ್ಷಿಗ । ಳೆಡೆಯಾಡಿದುವು ಲೀಲೆಯಿಂದ ॥ ೩೭ ॥
ಕೆಂಬಜ್ಜೆಯಿಂದ ಮಸ್ತಕಕೆ ಮಸ್ತಕದಿಂದ । ಕೆಂಬಜ್ಜೆಗೇರುತಿಳಿವುತ ॥
ಕಂಬೊಣರರುಹನ ಕಾಯಕಾಂತಿಯೊಳು ತೆ । ರಂಬೊಳೆದಾಡಿದುವವರ ॥ ೩೮ ॥
ನೋಟವೊಂದಲ್ಲದೆ ನುಡಿಯಿಲ್ಲ ಮೈಯೊಲೆ । ದಾಟವಿಲ್ಲಾ ಕುವರರಿಗೆ ॥
ಮಾಟದ ಬೊಂಬೆಯಂತಿರೆ ಕಂಡು ದೇವೇಂದ್ರ । ಪಾಟಿಸಿ ನುಡಿದನಿಂತೆಂದು ॥ ೩೯ ॥
ಏನು ಸುಖಿಗಳಿರ ಸ್ವಾಮಿಯ ಕಂಡು ಪಾ । ದಾನತರಾಗಿ ಕೀರ್ತಿಸದೆ ॥
ಮೋನದೊಳೇಕೆ ನಿಂದಿರಿಯೆಂದನೊಡನೆ ಮ । ಹಾನಂದನೇರಿದರವರು ॥ ೪೦ ॥

ಅಕ್ಕಟ ಮೋಸವಹುದು ನಮ್ಮದೆಮಗಿನ್ನು । ಮಕ್ಕಳಾಟಿಕೆ ಬಿಟ್ಟುದಿಲ್ಲ ॥
ಮುಕ್ಕೊಡೆಯೊಡೆಯ ನಮ್ಮಯ ತಪ್ಪ ನೋಡದೆ । ರಕ್ಷಿಸೆಂದೊಡನೆರಗಿದರು ॥ ೪೧ ॥
ಕೆಯ್ಯುತ್ತುಂಬಿದಪರಂಜಿಪೂಗಳನಡಿಗಳ್ಗೆ । ಸಯ್ಯುತ್ತ ಪುಷ್ಪಾಂಜಲಿಮಾಡಿ ॥
ಮೆಯ್ಯುತ್ತುಂಬ ಸಾಷ್ಟಾಂಗವೆರಗಿ ನಿಂದೆಲ್ಲರು । ಬಾಯ್ತುಂಬ ನುತಿಸಿದರವರು ॥ ೪೨ ॥
ನಿತ್ಯ ನಿರಾಶ ನಿರಂಜನ ನಿರುಪಮ । ಸತ್ಯ ಸದಾನಂದಸಿಂಧೋ ॥
ಅತ್ಯಂತಶಾಂತ ಸುಕಾಂತ ವಿಮುಕ್ತಿಸಾ । ಹಿತ್ಯಾಯ ತೇ ನಮಃ ಸ್ವಾಹಾ ॥ ೪೩ ॥
ಕಾಯಾಕಾರ ಕಾಯಾತೀತ ಸುಜ್ಞಾನ । ಕಾಯ ಶುದ್ಧಾತ್ಮ ಸುದೃಷ್ಟಿ ॥
ಶ್ರೇಯೋನಾಥಾಯ ಲೋಕನಾಥಾಯ ನಿ । ರ್ಮಾಯಾಯ ತೇ ನಮಃ ಸ್ವಾಹಾ ॥ ೪೪ ॥
ವೀತರಾಗಾಯ ವಿದ್ಯಾಸಂಯುಜೇ ಪರಂ । ಜ್ಯೋತಿಷೇ ಶ್ರೀಮತೇ ಮಹತೇ ॥
ಭೂತಹಿತಾಯ ನಿಷ್ಪ್ರೀತಾಯ ಭವಕುಲೋ । ದ್ಧೂತಾಯ ತೇ ನಮಃ ಸ್ವಾಹಾ ॥ ೪೫ ॥
ಎಂದು ಕೀರ್ತಿಸಿ ಬಲಗೊಂಡು ಸುತ್ತಣ ಜಿನ । ವೃಂದಕೆರಗಿ ಗಣಧರರಾ ॥
ವಂದಿಸಿ ಸಭೆಗಿಂಪ ನುಡಿದು ಕುಳಿತರು ಪ । ನ್ನೊಂದನೆಯಮಲಕೋಷ್ಠದೊಳು ॥ ೪೬ ॥
ಸಭೆಯ ಸಂಪದವ ನೋಡುತ ದೇವನಂಗದ । ಪ್ರಭೆಯ ನೋಡುತ ಪುರುಜಿನಗೆ ॥
ಅಭಿಮುಖರಾಗಿ ಕುಳ್ಳಿರ್ದಾಗ ನಲಿದರು । ತ್ರಿಭುವನಾಗ್ರವನೇರಿದಂತೆ ॥ ೪೭ ॥

ರವಿಕೀರ್ತಿರಾಜನು ಕರಗಳ ಮುಗಿದೆಲೆ । ಭವದುರ್ಗನಿರ್ಧೂಮಧಾಮಾ ॥
ನವಗಾತ್ಮಸಿದ್ಧಿಯುಪಾಯವ ಸ್ವಾಮಿ ಚಿ । ತ್ತವಿಸಬೇಕೆಂದನರ್ತಿಯೊಳು ॥ ೪೮ ॥
ಮೃದುಮಾಧುರ್ಯಗಂಭೀರದೊಳೇಳ್ನೂರ । ಪದಿನೆಂಟುಭಾಷೆಯೊಂದಾಗಿ ॥
ಉದಯಿಸಿತಾಗಳೆ ದಿವ್ಯಧ್ವನಿ ಜಿನ । ವದನದಿಂದೇನ ಬಣ್ಣಿಸೆನು ॥ ೪೯ ॥
ಆ ರಾಜನೆಂದೆಂಬ ರಾಜಬಿಂಬವ ಕಂಡು । ತಾರಾದ್ರಿಯೊಡೆಯನೆಂದೆಂಬ ॥
ಕ್ಷೀರಸಮುದ್ರದೊಳುಣ್ಮಿತು ದಿವ್ಯಮ । ಹಾರಾವವೆಂದೆಂಬ ಘೋಷಾ ॥ ೫೦ ॥
ಬೇಸಗೆ ತಾಗಿದ ಸಸಿಗಳ್ಗೆ ಮಳೆಯ ಕೈ । ವೀಸಿ ಮೊಳಗು ಮೊಳೆವಂತೆ ॥
ಆ ಸಂಸಾರದುಬ್ಬೆಗರಿಗೆ ಶಾಂತಿಯ । ವಾಸನೆದೋರಿತಾ ನಿನದಾ ॥ ೫೧ ॥
ಸೊಲ್ಲಹುದೆಲ್ಲರ ಸೊಲ್ಲಿನಂತಲ್ಲೇನ । ಸೊಲ್ಲಿಪೆನರುಹನ ಸೊಲ್ಲಾ ॥
ಗಲ್ಲ ನಾಲಗೆ ತುಟಿ ಮೊದಲಾದ ಮಿಸುಕಾಟ । ವಿಲ್ಲದುಣ್ಮಿಹುದು ಜೆಲ್ವಾಗಿ ॥ ೫೨ ॥
ಮುಗಿಲ ನಾದಕೆ ಸಮುದ್ರದ ಘೋಷಕಾವ ನಾ । ಲಗೆ ತುಟಿ ಮೊದಲಾದ ಹಂಗು ॥
ಜಗದೊಡೆಯನ ದಿವ್ಯಧ್ವನಿಗಾವುದಿನ್ನು ದಂ । ದುಗ ಬೇಕು ತಾನೆ ರಂಜಿಪುದು ॥ ೫೩ ॥
ದೂರಕೆ ಕೇಳ್ವಾಗ ಘೋಷದಂತಿಹುದದು । ಸಾರೆ ಕೇಳ್ವಾಗ ಸುವಾಕ್ಯಾ ॥
ಆರೇನ ಬೆಸಗೊಂಡರವರಭಿಮತವನು । ದಾರದಿ ಬಿತ್ತರಿಸುವುದು ॥ ೫೪ ॥

ಮದುವೆಯ ಮನೆಯ ಹೊರಗೆ ದನಿ ಭೋರೆಂಬು । ದದರೊಳಹೊಕ್ಕು ಕೇಳ್ವಾಗ ॥
ಮದವಣಿಗನ ಪಾಡು ಸೇಸೆಯನಿಡು ಮಾಲೆ । ಯಿದಕೊಯೆಂಬಂದವಾ ನಿನದಾ ॥ ೫೫ ॥
ಒಂದುನುಡಿಯ ಹಲಬರು ಕೇಳ್ವರಹುದಾದ । ರೊಂದೆನ್ನ ಬಾರದಾ ನಿನದಾ ॥
ಮುಂದೆ ಕೇಳುವ ಹಲಬರ ಚಿತ್ತಪರಿಣಾಮ । ದಂದದಿ ಹಲವು ರೂಪಹುದು ॥ ೫೬ ॥
ಹೊಳೆಯೊಂದರುದಕವ ವನಕೆ ತಿದ್ದಿದರಲ್ಲಿ । ಬೆಳೆದ ಮಾವಂಬಟೆ ತೆಂಗು ॥
ಹಲಸು ಮುಂತಾದುವ ಹೊದ್ದಿ ಹಲವು ಪರಿ । ಯೊಳು ಪರಿಣಮಿಸುವಂದವದು ॥ ೫೭ ॥
ನರಸುರನಾಗೇಂದ್ರಭಾಷೆ ಮುಂತಾದುವ । ಧರಿಸಿಕೊಂಡೊಂದೆಯಾಗಿಹುದು ॥
ಪರಿಮಳ ಮಧುರ ಮುಂತಾದ ಹಲವು ವಸ್ತು । ಬೆರೆದ ರಸಾಯನದಂತೆ ॥ ೫೮ ॥
ಸರ್ವಜೀವಕೆ ಹಿತ ಸರ್ವತತ್ತ್ವದ ಮೊತ್ತ । ಪೂರ್ವನೆ ಜಿನನೊರೆವವನು ॥
ಸರ್ವರು ಕೇಳ್ವರು ಗಲಭೆಯಲ್ಲಿದು ಒರ್ವ । ಗೊರ್ವನೆ ಹೇಳಿದಂತಿಹುದು ॥ ೫೯ ॥
ಮತ್ತೊಂದು ಚಿತ್ರವನೇನೆಂಬೆನಾದಿದೇ । ವೋತ್ತಮನಮೃತನಿರೂಪಾ ॥
ಹತ್ತಿರಿರಲಿ ದೂರವಿರಲೊಂದೆ ಸಮನಾಗಿ । ಸುತ್ತ ಗಾವುದಕೆ ಸೊಲ್ಲಿಪುದು ॥ ೬೦ ॥
ಭವ್ಯರ ಕಂಡು ಪೊಣ್ಮುವುದು ಪೊಣ್ಮದು ನಷ್ಟ । ಭವ್ಯರ ಕಂಡದು ಸಹಜಾ ॥
ಭವ್ಯರತ್ನರ ಭರತೇಶಪುತ್ರರ ಮೇಲೆ । ದಿವ್ಯಧ್ವನಿಯು ಪಸರಿಸಿತು ॥ ೬೧ ॥
ಅರುಣೋದಯ ನಡುವಗಲಸ್ತಮಯ ನಡು । ವಿರುಳೆಂಬ ನಾಲ್ಕು ಸಂಜೆಯೊಳು ॥
ನಿರವಿಪುದಾರಾರುಘಳಿಗೆ ನಿಚ್ಚಲು ಜಿನ । ಸ್ವರ ಮತ್ತೆ ಮೌನದೊಳಿಹುದು ॥ ೬೨ ॥

ಎಡೆಯೊಳತ್ಯಾಸನ್ನಭವ್ಯರು ಬೆಸಗೊಂಡ । ರೊಡನುದಯಿಪುದದರಿಂದ ॥
ನುಡಿಯಲಳವೆ ಕುವರರ ಪೆಂಪ ಕಂಡಾಗ । ನುಡಿಯಿಸಿದರು ಪುರುಜಿನನಾ ॥ ೬೩ ॥
ಎಲೆ ರವಿಕೀರ್ತಿ ಕೇಳಾತ್ಮಸಿದ್ಧಿಯದೇನು । ಬಲುಹೆ ಭವ್ಯರಿಗದು ಸದರಾ ॥
ಹಲವನರಿದು ಮನವಾತ್ಮನೊಳಿರಲದು । ಫಲಿಸುವುದೆಂದನಾ ಸ್ವಾಮಿ ॥ ೬೪ ॥
ಕಾಲವನಾದಿ ಕರ್ಮವನಾದಿ ಜೀವನು । ಲಾಲಿಸನಾದಿಯಾ ಜೀವಾ ॥
ಕಾಲಕರ್ಮವ ಕೊಡಹಿದರಾತ್ಮಸಿದ್ಧಿಯೆಂ । ದಾ ಲೋಕನಾಥನೊರೆದನು ॥ ೬೫ ॥
ಕಾಲವೆಂತುಟು ಕರ್ಮವೆಂತುಟು ಸ್ವಾಮಿ ವಿ । ಶಾಲಾತ್ಮನೆಂತುಟಾ ಹದನಾ ॥
ಬಾಲಕರೇನ ಬಲ್ಲೆವು ಕರುಣಿಸು ಕರು । ಣಾಳುವೆಯೆಂದನಾ ಕುವರಾ ॥ ೬೬ ॥
ಭವ್ಯ ಕೇಳಾದರೆ ಮೊದಲೊಮ್ಮೆ ನೀನಾರು । ದ್ರವ್ಯದ ಭೇದ ಲಕ್ಷಣವಾ ॥
ದಿವ್ಯಾತ್ಮಸಿದ್ಧಿಯ ಕಡೆಯೊಳೊರೆವೆನೆಂದು । ದಿವ್ಯವಾಣೀಶನೊರೆದನು ॥ ೬೭ ॥

ಜೀವ ಪುದ್ಗಲ ಧರ್ಮ ಬಳಿಕಧರ್ಮಾಕಾಶ । ವಾವಾಗ ಕಾಲವೆಂದಿವನು ॥
ಭಾವಿಸು ವಸ್ತುಗಳಾರಿವು ನೆರೆ ತುಂಬಿ । ತ್ರೈವಾಯುವಲಯಮೊಳಿಹುವು ॥ ೬೮ ॥

ನೀಡಗಲದ ಗಗನದ ನಟ್ಟನಡುವೆ ಮು । ಚ್ಚೋಡಿಯ ನಿಡುಚೀಲದಂತೆ ॥
ಕೂಡಿ ಗಾಳಿಗಳು ಮೂರಿಹುವದರೊಳು ತುಂಬಿ । ದೀಡಿನಂತಿಹುವಾರುವಸ್ತು ॥ ೭೯ ॥

ಒಂದುಯೋಜನಕೆ ಕಿಂಚಿತು ಕಿರಿದೆನಿಸಿದ । ಮಂದವಾ ಮೂರುಗಾಳಿಗಳು ॥
ತಂದವರೊಳಗಿಡಿಕಿರಿದು ತುಂಬಿದ ದ್ರವ್ಯ । ದಂದದೊಳಿಹುವಾರುದ್ರವ್ಯಾ ॥ ೭೦ ॥

ಆ ವಾಯುವೊಂದೊಂದು ತಳದೊಳಗಿಪ್ಪತ್ತು । ಸಾಸಿರಗಾವುದದಟ್ಟಾ ॥
ಗಾವುದಕಿಷ್ಟು ಕಡಮೆ ತುದಿಗವರಲ್ಲಿ । ತೀವಿರುತಿಹುವಾರುದ್ರವ್ಯಾ ॥ ೭೧ ॥

ಆರುದ್ರವ್ಯದ ಮೊತ್ತ ಲೋಕವಾ ಗಾಳಿಯು । ಮೀರಿ ನಿಂದಾಕಾಶವೊಂದು ॥
ಬೇರೊಂದಲೋಕವೆಂದರಿದಿರು ಕ್ರಮದಿಂದ । ತೋರುವೆವಾತ್ಮಸಿದ್ಧಿಯನು ॥ ೭೨ ॥

ಲೋಕವದೊಂದಿನ್ನು ಮೂರೆನಿಪುದು ತಳ । ಲೋಕ ಮಧ್ಯಮ ಊರ್ಧ್ವವೆಂದು ॥
ಏಕವಾಗಿಹುದದು ಭಿನ್ನವಾಗಿರದದ । ರಾಕಾರ ನಾಮದಿ ಭೇದಾ ॥ ೭೩ ॥

ತಿಳಿ ಮೂರುಸವಡಿನ ಚೀಲದೊಳಿಹ ಮೂರು । ನೆಲೆಯು ಕರಂಡಕದಂತೆ ॥
ಬಳಸಿ ಹೊರಗೆ ಮೂರುಗಾಳಿಗಳಿಹುವವ । ರೊಳಗಿಹುವೀ ಮೂರುಲೋಕಾ ॥ ೭೪ ॥

ಕೆಳಗೇಳು ನರಕಭೂಮಿಗಳಿಹುವತಿದುಃಖ । ದಿಳೆಗಳಾ ಭೂಮಿಯ ಮೇಲೆ ॥
ನೆಲಸಿಹುದಲ್ಪಸುಖದ ನಾಗಲೋಕವಾ । ನೆಲಮುಟ್ಟಲದು ತಳಲೋಕಾ ॥ ೭೫ ॥

ಮೇರುಗಿರಿಯ ಸುತ್ತ ದೀವಿ ಕಡಲು ಕವೆ । ಯಾರ ಬೀಸಿದ ಬೆಡಗಿನೊಳು ॥
ಧಾರಿಣಿಯೊಳು ಹಲವಿಹುವೆಲೆ ಭರತಕು । ಮಾರ ನೋಡಿದು ಮಧ್ಯಲೋಕಾ ॥ ೭೬ ॥

ಮೇರುಗಿರಿಯ ಮೇಲೆ ಹಲವು ಸ್ವರ್ಗಗಳುಂಟು । ಆ ರಾಜ್ಯಗಳ ಮೇಲೆ ಮುಕ್ತಿ ॥
ಮೇರುವಿನಗ್ರದಿಂದೂರ್ಧ್ವಮಾರುತವುಟ್ಟ । ಲಾರಯ್ಯಲೂರ್ಧ್ವಲೋಕವದು ॥ ೭೭ ॥

ತಳಲೋಕ ಚಕ್ಕಳದಂತೆ ಮಧ್ಯಮಲೋಕ । ಬಳಸಿ ಝಲ್ಲರಿಯಂತುಟಹುದು ॥
ನಿಲಿಸಿದ ಮದ್ದಳೆಯಂತೆ ಮೇಲಣ ಲೋಕ । ನೆಲಸಿಹುದೆಲೆ ರವಿಕೀರ್ತಿ ॥ ೭೮ ॥

ಹೃದಯದಟ್ಟತೆ ಮೂರುಜಗದಂದ ಲಾಲಿಸಿ । ನ್ನದರುದ್ದವಗಲವಿಷ್ಟೆಂದು ॥
ಸದರದೊಳರಿವಂತೆ ರಜ್ಜುವೆಂಬಳತೆಯೊ । ಳೊದವಿ ಸೂಚಿಸಿದಪೆವೀಗ ॥ ೭೯ ॥

ಒಂದು ಸಮಯಕಸಂಖ್ಯಾತಯೋಜನ ಪೋಪು । ದೊಂದು ನಿರ್ಜರನ ವಿಮಾನಾ ॥
ಕುಂದದಸಂಖ್ಯಾತವರುಷವಿರುಳುಪಗ । ಲೊಂದಿ ಪೋಗಲದೊಂದುರಜ್ಜು ॥ ೮೦ ॥

ಅಡಿಯಿಂದ ತುದಿಗೆ ಈರೇಳುರಜ್ಜುವಿನುದ್ದ । ಬಡಗ ತೆಂಕಲದೇಳುರಜ್ಜು ॥
ಅಡಿಗೇಳು ನಡುವೊಂದು ವಿಧಿಕಲ್ಪದೈರಜ್ಜು । ಕಡೆಗೊಂದು ಪಡುವ ಮೂಡಲದು ॥ ೮೧ ॥

ಅನಿತುದ್ದವನಿತು ತೆರಪನುಳ್ಳ ಲೋಕ ತೆ । ಕ್ಕನೆ ತುಂಬಿ ಷಡ್ದ್ರವ್ಯವಿಹುದು ॥
ನಿನಗವರಂದವ ತಿಳುಹುವೆವಿನ್ನು ಭ । ವ್ಯನೆ ಲಾಲಿಸೆಂದನಾ ಸ್ವಾಮಿ ॥ ೮೨ ॥

ಅಲ್ಲಿಗಿನ್ನೊಂದು ಬಿನ್ನಹವುಂಟು ಮುನ್ನೊರೆ । ದೆಲ್ಲವು ವೇದ್ಯವಾಯ್ತೆನಗೆ ॥
ನಿಲ್ಲದೆ ಚರಿಸುವ ಗಾಳಿಯೊಳಿಹ ಲೋಕ । ವಲ್ಲಾಡದೇಕೆಲೆ ಸ್ವಾಮಿ ॥ ೮೩ ॥

ಚಲವಾಯುವೆಂದು ನಿಶ್ಚಲವಾಯುವೆಂದುಂಟು । ತಿಳಿದಿರು ದ್ವಿವಿಧವಾಯುಗಳು ॥
ಚಲವಾಯುವಿವು ಲೋಕದೊಳಗೆ ಸುಳಿವುವು ನಿ । ಶ್ಚಲಗಳಾ ಮೂರುಗಾಳಿಗಳು ॥ ೮೪ ॥

ತಂಪು ನಿಷ್ಸಂಗತೆ ಸೂಕ್ಷ್ಮತೆ ಮೊದಲಾದ । ಪೆಂಪಿನೊಳಿಲ್ಲ ಸಮಾನಾ ॥
ಕಂಪನ ಚಲನವಿವಕೆ ನಿಶ್ಚಲತೆ ನಿ । ಷ್ಕಂಪನವವಕಿಷ್ಟೆ ಭೇದಾ ॥ ೮೫ ॥

ಸ್ಥಿರದ ವಿಮಾನಕೂ ಚರಿಪ ವಿಮಾನಕೂ । ಸುರಲೋಕದೊಳು ನಾಮಸದೃಶಾ ॥
ಸ್ಥಿರವಾಯು ಚರವಾಯುವೆರಡಕೆ ನಾಮವಾ । ಪರಿಯೊಂದೆ ತಿಳಿ ರವಿಕೀರ್ತಿ ॥ ೮೬ ॥

ಸ್ಥಿರತಾರೆಯೆಂದುಂಟು ಚರತಾರೆಯೆಂದುಂಟು । ವರತಾರೆವೆಸರು ಸಮಾನಾ ॥
ಸ್ಥಿರತಾರೆ ನಡೆಯದು ಚರತಾರೆ ನಡೆವುದು । ಸ್ಥಿರಿಸಂತುಟೆಂದು ವಾಯುಗಳಾ ॥ ೮೭ ॥

ಮುಚ್ಚೋಡಿಯು ಗವಸಣಿಗೆವೊಲ್ಬುವನವ । ಮುಚ್ಚಿದ ಗಾಳಿಗಳ್ಮೂರೆ ॥
ಹುಚ್ಚರಂತೊಳಗೆ ಸುತ್ತುವ ಗಾಳಿಯುಗಣಿತ । ವಚ್ಚರಿಯಲ್ಲದು ಸಹಜಾ ॥ ೮೮ ॥

ಸಂದೇಹವಳಿದುದು ಸ್ವಾಮಿ ವಸ್ತುಗಳಾರ । ಮುಂದೆ ನಿರೂಪಿಸೆಂದೊರೆದು ॥
ಮಂದಸ್ಮಿತಮುಖನಾಗಿ ಕೈಮುಗಿದರಿಂ । ತೆಂದನರುಹನವನೊಡನೆ ॥ ೮೯ ॥

ಜೀವ ಕೇಳ್ಮೊದಲೊಮ್ಮೆ ಜೀವವಸ್ತುವನದು । ಜೀವಿಸಿ ಬಂದುದು ಮುನ್ನ ॥
ಜೀವಿಸುತಿದ್ದಪುದೀಗ ಪ್ರಾಣಗಳಿಂದ । ಜೀವಿಸುವುದು ಮುಂದೆ ನಾಳೆ ॥ ೯೦ ॥

ಹತ್ತುಪ್ರಾಣಗಳೊಡಗೂಡಿ ಜೀವಿಸುವುದಾ । ಹತ್ತುಪ್ರಾಣಗಳಾವುವೆನಲು ॥
ಚಿತ್ತ ವಚನ ಕಾಯ ಸುಯ್ಯೆಲರಾಯುಷ್ಯ । ಮತ್ತಿಂದ್ರಿಯುಗಳೈದನೆಣಿಸು ॥ ೯೧ ॥

ಮುಟ್ಟದರರಿವುದುಣ್ಬುದು ಕಂಪುಗೊಂಬುದು । ನಿಟ್ಟಿಸುವುದು ಕೇಳ್ವುದಿಂತು ॥
ಮುಟ್ಟೆ ಲೆಕ್ಕಿಸಲಿವು ಪಂಚೇಂದ್ರಿಯಂಗಳು । ಮುಟ್ಟಿರುತಿಹುವು ಜೀವನೊಳು ॥ ೯೨ ॥

ಒಮ್ಮೆಯಿಂದ್ರಿಯವೈದ ಕೂಡಿಹನಾತ್ಮನೊ । ಮ್ಮೊಮ್ಮೊಂದೆರಡು ಮೂರು ನಾಲ್ಕು ॥
ನೆಮ್ಮಿ ನಾಲ್ಕಾರೇಳೆಂಟೊಂಭತ್ತು ಪತ್ತೆನೆ । ಸಮ್ಮಂದಿಸಿಹನು ಪ್ರಾಣಗಳಾ ॥ ೯೩ ॥

ಒಂದೊಂದಿಂದ್ರಿಯ ಮೊದಲಾಗಿಂದ್ರಿಯವೈದ । ನೊಂದಿ ಜೀವನು ಜೀವಿಪುದನು ॥
ಅಂದು ನಾಲ್ಕಾರೇಳೆಂಟೊಂಭತ್ತು ಪತ್ತು ಪ್ರಾ । ಣಂದಳೆವುದ ಕೇಳು ಕ್ರಮದಿ ॥ ೯೪ ॥

ಮರ ಬಳ್ಳಿ ಮೊದಲಾದುವೇಕೇಂದ್ರಿಯಂಗಳು । ಸ್ಪರುಶನಮಾತ್ರವರಿವುವು ॥
ಸ್ಪರುಶನೇಂದ್ರಿಯ ಕಾಯ ಸುಯ್ಯೆಲರಾಯುಷ್ಯ । ವಿರಲಲ್ಲಿ ನಾಲ್ಕುಪ್ರಾಣಗಳು ॥ ೯೫ ॥

ಅನಿಲಾಗ್ನಿ ಜಲ ಭೂಮಿಯೆಂದೆಂಬ ನಾಲ್ಕಿವೆ । ತನುವಾಗಿ ಜೀವರಾಶಿಯೊಳು ॥
ಘನದುಃಖಬಡುತಿಹುವೇಕೇಂದ್ರಿಯದ ವ । ರ್ತನೆಗಳವಕೆ ರಾಜಪುತ್ರಾ ॥ ೯೬ ॥

ಎರೆಬುಳು ಗುಳ್ಳೆ ಮುಂತಾದುವು ಕೆಲವಕೆ । ಸ್ಪರುಶನಜಿಹ್ವೆಗಳುಂಟು ॥
ಸ್ವರಮಾತ್ರವಚನವುಂಟಾರುಪ್ರಾಣಗಳಲ್ಲಿ । ಯಿರುತಿಹುವೆಲೆ ರವಿಕೀರ್ತಿ ॥ ೯೭ ॥
ಇರುವೆ ಜಿಗುಳೆ ಮೊದಲಾದುವು ಮುಟ್ಟದ । ರರಿವುವುಣ್ಬವು ವಾಸಿಸುವುವು ॥
ಅರಿವಿರು ಮೂರಿಂದ್ರಿಯಂಗಳವರೊಳೇಳು । ತೆರದ ಪ್ರಾಣಗಳಿರುತಿಹುವು ॥ ೯೮ ॥
ತಿಂಬುದು ಸೋಂಕರಿವುದು ನೋಡುವುದು ಕಂಪ । ಗೊಂಬುದೀ ನಾಲ್ಕಿಂದ್ರಿಯಗಳು ॥
ತುಂಬಿ ಜೇನೊಣ ಮೊದಲಾದುವಕಿಹುವಲ್ಲಿ । ತುಂಬಿಹುವೆಂಟುಪ್ರಾಣಗಳು ॥ ೯೯ ॥
ಉಡುಪೋತಿ ಮೊದಲಾದ ತಿರಿಯಂಚಗಳು ಕೆಲ । ವೆಡೆಗೊಂಡು ಕೇಳ್ವುದು ಕೂಡಿ ॥
ಕಡೆಗೆ ಪಂಚೇಂದ್ರಿಯವಿಹುದಲ್ಲಿ ಮನವಿಲ್ಲ । ಪಿಡಿದುವೊಂಭತ್ತು ಪ್ರಾಣಗಳಾ ॥ ೧೦೦ ॥
ಮನವೆಂಬುದೆದೆಯೊಳಗಷ್ಟದಳಾಕಾರ । ವನಜದಂತಿಹುದದರಿಂದ ॥
ನೆನಹನರಿದು ತಿದ್ದಿದಂತಾಡುತಿರ್ಪುವಾ । ಮನವಿಲ್ಲವುಡುಪೋತಿಗಳಿಗೆ ॥ ೧೦೧ ॥
ವನಗಜ ಪಶು ತೇಜಿ ಮೊದಲಾದ ಕೆಲವಕೆ । ಮನವುಂಟು ಮನವಿರಲಾಗಿ ॥
ಮನುಜರು ತಿದ್ದಿದಂದಕೆ ಬಹವವರಲ್ಲಿ । ನೆನೆ ದಶಪ್ರಾಣಗಳಿಹುವು ॥ ೧೦೨ ॥
ತಿರಿಯಂಚಗಳು ಮನವುಳ್ಳುವಿಲ್ಲದುವೆಂದು । ಎರಡಂಗವಾದುವಂತಿರಲಿ ॥
ನಿರಯಜಸುರನರರೆಲ್ಲರು ಪಂಚೇಂದ್ರಿ । ಯರು ದಶಪ್ರಾಣಧಾರಿಗಳು ॥ ೧೦೩ ॥
ಏಕೇಂದ್ರಿಯದಿಂದ ಪಂಚೇಂದ್ರಿಯಮುಟ್ಟ । ನೇಕಜೀವಗಳು ಬಾಳ್ವುದನು ॥
ಈ ಕಲೆಯೆಂದರಿದಿರು ದಶಪ್ರಾಣಗ । ಳಾ ಕಾಯಮೂರರೊಳಡಕಾ ॥ ೧೦೪ ॥
ಹೊರಗಣೌದಾರಿಕದೇಹ ಮತ್ತೊಳಗೆರ । ಡುರಿವ ತೈಜಸಕಾರ್ಮಣಗಳು ॥
ಸೆರೆಮನೆಯಂತೆ ಮೂರಂಗವೀ ಮೂರರ । ಮರೆಯೊಳಿಹುದು ಜೀವವಸ್ತು ॥ ೧೦೫ ॥

ಎಂಟುಕರ್ಮಗಳಿಹುವಾ ಮೂರುದೇಹದೊ । ಳೆಂಟವು ನೂರನಾಲ್ವತ್ತು ॥
ಎಂಟೆನಿಪುವು ಮತ್ತಸಂಖ್ಯಾತವೆನಿಪುವು । ಎಂಟನೆ ಮೂಲವೆಂದೆಣಿಸು ॥ ೧೦೬ ॥
ಜ್ಞಾನಾವರಣೀಯ ದರ್ಶನಾವರಣೀಯ । ಬೇನೆಬಡಿಪ ವೇದನೀಯಾ ॥
ಹೀನದ ಮೋಹನೀಯಾಯುಷ್ಯ ನಾಮ ಗೋ । ತ್ರಾನುಗದಂತರಾಯಗಳು ॥ ೧೦೭ ॥
ಇವು ಕರ್ಮವೆಂಟು ಆ ತೈಜಸಕಾರ್ಮಣ । ದ್ವಿವಿಧದೇಹದೊಳಡಗಿಹುವು ॥
ಅವ ನುಂಗಿಯೌದಾರಿಕವಿಹುದೀ ಮೂರು । ಗವಸಣಿಗೆಯೊಳಿಹನಾತ್ಮಾ ॥ ೧೦೮ ॥
ಮೋಹನೀಯವು ದ್ವಿವಿಧಾವರಣೀಯಗ । ಳಾ ಹೊಲ್ಲದಂತರಾಯವಿವು ॥
ದೇಹಿಗೆ ಘಾತಿಗಳುಳಿದುವಘಾತಿಗ । ಳೀ ಹದನರಿದಿರೆಂಟರೊಳು ॥ ೧೦೯ ॥
ಎಂಟು ಕರ್ಮವೆ ಮೂಲವೆಂದೆನಿನ್ನವಕೆ ಮೂ । ರುಂಟು ಮೂಲಗಳಾವುವೆನಲು ॥
ನಂಟು ಮುನಿಸು ಮೋಹವೀ ಭಾವಕರ್ಮಗ । ಳಂಟುಬಿರುಬುಬಿರಕೆಗಳು ॥ ೧೧೦ ॥

ಕೂರುಗೊಂಡೆಂಟುಕರ್ಮವೆ ದ್ರವ್ಯಕರ್ಮವೀ । ಮೂರುಕರ್ಮವೆ ಭಾವಕರ್ಮ ॥
ತೋರುವ ದೇಹ ನೋಕರ್ಮ ಕರ್ಮಗಳಿಂತು । ಮೂರುಕಾಂಡಗಳಹುವೊಮ್ಮೆ ॥ ೧೧೧ ॥

ನೋಕರ್ಮ ಗಾಣದಂತಾ ದ್ರವ್ಯಕರ್ಮವಾ । ಲೋಕಿಸೆ ಹಿಂಡಿಯಂತಿಹುವು ॥
ಹೋಕಿನ ಭಾವಕರ್ಮಗಳೆಣ್ಣೆಯಂತೊಳ । ಗಾಕಾಶದಂತಾತ್ಮನಿಹನು ॥ ೧೧೨ ॥
ಗಾಣದೊಳು ಹಿಂಡಿಯೆಣ್ಣೆ ಮೂರರ ನಡು । ಕೋಣೆಯೊಳಿಹ ಬಯಲಂತೆ ॥
ಕ್ಷೀಣವೆನಿಪ ಮೂರುಕರ್ಮಕಾಂಡದೊಳಾತ್ಮ । ತಾಣೆಯುಗೊಂಡಿರುತಿಹನು ॥ ೧೧೩ ॥
ವರ್ಣ ವಾಸನೆ ರಸ ರೂಪುಂಟು ಕರ್ಮವಿ । ಸ್ತೀರ್ಣದ ಮೂರುಕಾಂಡದೊಳು ॥
ವರ್ಣ ಮುಂತಾದುವಿಲ್ಲಾತ್ಮಗೆ ಸುಜ್ಞಾನ । ಪೂರ್ಣಸುಪ್ರಭೆಯೆ ತುಂಬಿಹುದು ॥ ೧೧೪ ॥
ಗಣೆಯ ತೆಗೆದ ಗಾಣದೊಳಗಣ ಬಯಲಾತ್ಮ । ಗೆಣೆಯೆಂದು ನೆನೆವುತ ಕೂಡೆ ॥
ಎಣಿಪುದುಂಗುಟದಿಂದ ನೆತ್ತಿಮುಟ್ಟಂಗಪೂ । ರಣದೊಳಿದ್ದಪನಾತ್ಮನೆಂದು ॥ ೧೧೫ ॥
ಪಿರಿದಾಗಲುರೆ ಕಿರಿದಾಗಲಿ ಕಾಷ್ಠವೆ । ಷ್ಟಿರುತಿಹುದಷ್ಟರೊಳಗ್ನಿ ॥
ಪರಿಪೂರ್ಣವಾಗಿಪ್ಪವೊಲು ಗುರುಲಘುದೇಹ । ದಿರವಿನೊಳಾತ್ಮ ತುಂಬಿಹನು ॥ ೧೧೬ ॥
ಕಾಷ್ಠವ ಮೀರಿರದರೆಯಾಗಿ ನಿಲದಗ್ನಿ । ಕಾಷ್ಠವನಷ್ಟು ತುಂಬಿಹುದು ॥
ನಿಷ್ಠಾತ್ಮ ದೇಹಕೆ ಕುಂದನು ಹೆಚ್ಚನ । ನುಷ್ಠಿಸಿ ದೇಹತುಂಬಿಹನು ॥ ೧೧೭ ॥
ಒಳಗಗ್ನಿ ವೃಕ್ಷತುಂಬಿಹುದದು ಹೊರಗಣ । ಎಲೆಗಳೊಳಿಲ್ಲಾತ್ಮನಂತೆ ॥
ಒಳಗೆ ಮೈತುಂಬಿಹನಾ ಮೈಯ ನವಿರು ಕೂ । ದಲೊಳು ಸೆಳ್ಳುಗುರೊಳಗಿಲ್ಲ ॥ ೧೧೮ ॥
ಅವಯವಕುಗುರಿಕ್ಕಲೆಲ್ಲೆಲ್ಲಿ ನೋವು ತೋ । ರುವುದಲ್ಲಿಮುಟ್ಟಾತ್ಮನಿಹನು ॥
ನವಿರು ಸೆಳ್ಳುಗುರು ಕೂದಲೊಳು ನೋವಿಲ್ಲಾತ್ಮ । ನವರೊಳಿಲ್ಲರಿದಿರು ಭವ್ಯಾ ॥ ೧೧೯ ॥

ಆರುದ್ರವ್ಯಕೆ ದ್ರವ್ಯವೆಂದುರೆ ಗುಣವೆಂದು । ತೋರುವ ಪರ್ಯಾಯವೆಂದು ॥
ಮೂರುವಿಕಲ್ಪವುಂಟವನು ದೃಷ್ಟಾಂತದಿ । ತೋರುವೆವಾಲಿಸು ಭವ್ಯಾ ॥ ೧೨೦ ॥
ಕನಕವೆಂಬುದು ಮೂರ್ತವಸ್ತು ಬಣ್ಣಗಳದ । ರನುಗುಣ ಉಳಿಬಳೆಯೆಂದು ॥
ಅನುಕರಿಸುವುದದು ಪರ್ಯಾಯವಿಂತು ಮೂ । ರನು ಮುಂದೆ ನೆನೆವುದೆಲ್ಲರೊಳು ॥ ೧೨೧ ॥
ಹಾಲೊಂದು ರಸವಸ್ತು ಸಿಹಿ ಬೆಳ್ಪು ಮೊದಲಾಗಿ । ಹಾಲಿನ ಗುಣಗಳೆನಿಪುವು ॥
ಹಾಲಿಗೆ ಮೊಸರಚ್ಚ ಬೆಣ್ಣೆಯೀಪರ್ಯಾಯ । ಜಾಲವಿಂತೆಣಿಪುದು ಮುಂದೆ ॥ ೧೨೨ ॥
ಬಯಲ ರೂಪಿನ ವಸ್ತು ಜೀವವದಕೆ ಗುಣ । ನಿಯತದಿಂದರಿವುಕಾಣ್ಕೆಗಳು ॥
ನಯಗೆಟ್ಟ ನರಸುರರಾದಿಯಾದಾಕಾರ । ಚಯಗಳದರ ಪರಿಯಾಯಾ ॥ ೧೨೩ ॥
ವಸ್ತುವಿಂದೊಂದಾಗಿ ಪರ್ಯಾಯದಿಂದ ಸ । ಮಸ್ತವಾಗಿಹುದಾತ್ಮವಸ್ತು ॥
ವಸ್ತು ಪರ್ಯಾಯಗುಣಗಳ ಕೂಡಿಹುದಿದು । ವಸ್ತುಗಳೆಲ್ಲರ ಸಹಜಾ ॥ ೧೨೪ ॥

ಉಳಿಯನಳಿದು ಬಳಿಮಾಡಿ ಬಳಿಯನೆ ಬ । ಟ್ಟಲುಮಾಡಿಯೆಣಿಸಿ ನೋಳ್ಪಾಗ ॥
ಉಳಿ ಬಳಿ ಬಟ್ಟಲೆಂಬಾಗ ಮೂರಾಯ್ತುವ । ರೊಳು ಚಿನ್ನವೆಂಬಾಗಲೊಂದೆ ॥ ೧೨೫ ॥

ನರನೊಮ್ಮೆ ಮೃಗವಾದನಾ ಮೃಗ ಸುರನಾಯ್ತು । ಸುರ ತಾನೆ ಮರನಾದನೆನಲು ॥
ನರ ಮೃಗ ಸುರ ಮರನೆಂಬಾಗ ನಾಲ್ಕಾಯ್ತು । ತಿರುಗಿದ ಜೀವನೊಂದಲ್ತೆ ॥ ೧೨೬ ॥

ಪುರುಷನಂಗನೆಯಾದನವಳೆ ಪುರುಷನಾದ । ಳಿರದವನುರೆ ಷಂಢನಾದಾ ॥
ನರಿಯಾದನೆನಲಿಂತು ಪರಿಯಾಯ ಹಲವರೊ । ಳಿರುತಿಹ ಜೀವನೊಂದಲ್ತೆ ॥ ೧೨೭ ॥

ಕಡುಗುಂದಲಣುದೇಹಿ ಸಾಸಿರಯೋಜನ । ದೊಡಲ ಪಿಡಿವನು ಹೆಚ್ಚಿದರೆ ॥
ನಡುವೆ ನಾನಾಮಿತದಂಗದೊಳಗೆ ಜೀವ । ನಡಗಿ ಜೀವಿಸುತಿಹನಿಂತು ॥ ೧೨೮ ॥

ಒಂದುಜೀವಕೆ ಪೇಳ್ದುದಲ್ಲವೆಲ್ಲಾ ಜೀವ । ದಂದವಿಂತುಟೆ ಕರ್ಮಗಳೊಳು ॥
ವೃಂದಕರ್ಮವ ಬೇರೆಮಾಡಿ ನೋಳ್ಪಾಗಾತ್ಮ । ಗೊಂದುದಂದುಗವಿಲ್ಲ ಕೇಳು ॥ ೧೨೯ ॥

ಸ್ಫಟಿಕದ ಪ್ರತಿಮೆಗೊಂದೆಲೆ ಸೋಂಕೆ ಬೆಳಗು ಪ । ಲ್ಲಟಿಪಂತೆ ಮೂರೊಡಲೆಂಬ ॥
ಘಟದ ಸೋಂಕಿಂದತಿಕಲ್ಮಷನಾಗಿ ಸಂ । ಕಟಬಡುತಿಹನಾತ್ಮನಿಂತು ॥ ೧೩೦ ॥

ಅಂಗದೊಳಿಹನಂಗವಿಲ್ಲ ಸುಜ್ಞಾನವೆ । ಅಂಗವಾಗಿರುತಿಹನಾತ್ಮಾ ॥
ಅಂಗ ಸೋಂಕಿಯು ಸೋಂಕನಂಗತುಂಬಿಹನಾತ್ಮ । ನಂಗವಿದಚ್ಚರಿಯಲ್ತೆ ॥ ೧೩೧ ॥

ಕಿಚ್ಚಿಂದ ಬೇಯನು ನೀರಿಂದ ನೆನೆಯನು । ಮಚ್ಚು ಕೊಡಲಿಗೆ ಸಂದಿಸನು ॥
ಕಿಚ್ಚು ನೀರಲಗಿನ ಬಾಧೆ ತನುವಿಗಾತ್ಮ । ನಚ್ಚುಗವಳಿದ ಸುವಸ್ತು ॥ ೧೩೨ ॥

ಮಾಂಸಶೋಣಿತಚರ್ಮಮಯದ ಕೆಚ್ಚಲೊಳಿದ್ದು । ಸಂಸೇವ್ಯವಾದ ಪಾಲಂತೆ ॥
ಮಾಂಸಾಸ್ಥಿ ಚರ್ಮ ಕರ್ಮದ ಮೈಯೊಳಿದ್ದರೂ । ಹಂಸ ಶುದ್ಧನು ಹಂಸಕೀರ್ತಿ ॥ ೧೩೩ ॥

ಭುವನದೊಳಗುಹೊರಗನು ಕಾಣ್ಬನರಿವನು । ರವಿಚಂದ್ರಕೋಟಿಪ್ರಕಾಶಾ ॥
ಕವಿದ ಕರ್ಮದೊಳಡಗಿರ್ದಪನಾತ್ಮನು । ರವಿ ಮೋಡದೊಡಲೊಳಿಪ್ಪಂತೆ ॥ ೧೩೪ ॥

ಪೊಡವಿಮೂರನು ಪಿಡಿದೆತ್ತುವ ಶಕ್ತನು । ಪೊಡವಿಯೆಷ್ಟಷ್ಟರ ತೆರಪು ॥
ಬಡಮೈಯೊಳಾತ್ಮನಿದ್ದಪನುರೆ ಬೀಜದೊ । ಳಡಗಿದ ವೃಕ್ಷವೆಂತಂತೆ ॥ ೧೩೫ ॥

ಕರ್ಮವಳಿದರೆಲ್ಲರೆಮ್ಮಂದವಪ್ಪರಾ । ಕರ್ಮವ ಕೆಡಿಸುವ ಕಲೆಯಾ ॥
ನಿರ್ಮಿಸಿ ಮುಂದೆ ಪೇಳ್ದಪೆವಿಲ್ಲಿಗಿದು ಜೀವ । ಧರ್ಮ ಕೇಳಿನ್ನು ಪುದ್ಗಲವಾ ॥ ೧೩೬ ॥

ಉಂಟಲ್ಲಿಗಿನ್ನೊಂದು ಬಿನ್ನಹ ಕರ್ಮಗ । ಳೆಂಟು ತೈಜಸಕಾರ್ಮಣದೊಳು ॥
ನಾಂಟಿಹುವೆಂದರೆ ಸ್ವಾಮಿ ಪೊರಗಣಂಗ । ವೆಂಟುಕರ್ಮಗಳಿಗೆ ಹೊರಗೆ ॥ ೧೩೭ ॥

ಹೊರಗಲ್ಲ ಕರ್ಮವೇಳೆರಡಂಗದೊಳಗಿಹು । ವುರೆ ನಾಮಕರ್ಮ ತಾನೊಂದು ॥
ಹೊರಗಣಂಗದೊಳೊಳಗಣ ತನುಗಳೊಳಿಹು । ದರಿದಿರಾದುದು ಲೋಕನಾಥಾ ॥ ೧೩೮ ॥

ಗಲನಪೂರಣವುಳ್ಳ ಕಾರಣ ಪೆಸರು ಪು । ದ್ಗಲವೆಂಬುದದು ಮೂರ್ತವಸ್ತು ॥
ಗಲಿಸುತ ಪೂರಿಸುತಾ ವಸ್ತು ಮೂಲೋಕ । ದೊಳಗಿಡಿದಿಡಿದು ತುಂಬಿಹುದು ॥ ೧೩೯ ॥

ಆಯ್ದುವರ್ಣಗಳೆಂಟುಸ್ಪರ್ಶವೆರಡು ಗಂಧ । ವಯ್ದುರಸಗಳಿಂತಿವೆಲ್ಲ ॥
ಆಯ್ದು ಲೆಕ್ಕಿಸುವಾಗಲಿಪ್ಪತ್ತುಗುಣಗಳು । ಮೆಯ್ದೋರುತಿಹುವು ಪುದ್ಗಲಕೆ ॥ ೧೪೦ ॥

ಐದಿಂದ್ರಿಯಕೆ ಗೋಚರವಾದ ವಸ್ತುಗ । ಳೈದಿಂದ್ರಿಯ ಕರ್ಮವೆಂಟು ॥
ಐದುಶರೀರ ಮನಸು ಮತ್ತು ಮೂರ್ತತೆ । ಯೆಯ್ದಿದುವೆಲ್ಲ ಪುದ್ಗಲವು ॥ ೧೪೧ ॥

ತೋರಸಣ್ಣಗಳೆಂಬ ಪೆಸರೊಡಗೂಡಿ ಮ । ತ್ತಾರಯ್ಯಲಾರುಭೇದವದು ॥
ತೋರಸಣ್ಣಗಳೆಂಬ ನುಡಿಯೆರಡಾರಾದ । ಮೇರೆಯ ಕೇಳೆಲೆ ಭವ್ಯಾ ॥ ೧೪೨ ॥

ತೋರತೋರನದೊಂದು ತೋರನೆಂದಹುದೊಂದು । ತೋರಸಣ್ಣನದೊಂದು ಸಣ್ಣಾ ॥
ತೋರನೆಂದೊಂದು ಸಣ್ಣನು ಸಣ್ಣಸಣ್ಣನೆಂ । ದೀ ರೀತಿಯಿಂದಾರುತೆರನು ॥ ೧೪೩ ॥

ಶಿಲೆ ಮಣ್ಣು ಮೊದಲಾಗೆ ತೋರತೋರಗಳವು । ಜಲ ತೈಲ ಮೊದಲಾಗೆ ತೋರಾ ॥
ನೆಳಲು ಬಿಸಿಲು ಮೊದಲೆನೆ ತೋರಸಣ್ಣನೆಂ । ಬೊಳುನುಡಿವೆತ್ತ ಪುದ್ಗಲವು ॥ ೧೪೪ ॥

ಕಂಗಳ ಹೊರತಾಗಿ ನಾಲ್ಕಿಂದ್ರಿಯಕೆ ರುಚಿ । ರಂಗಳಾದುವು ಸಣ್ಣತೋರ ॥
ತಂಗಾಳಿ ದನಿ ಕಂಪು ಮೊದಲಾಗಿ ತೋರ್ಪ ದ್ರ । ವ್ಯಂಗಳೆಂದರಿದಿರು ಭವ್ಯಾ ॥ ೧೪೫ ॥

ಸಣ್ಣನೆಂಬುದು ಕರ್ಮವಪ್ಪ ಪುದ್ಗಲವದು । ಸಣ್ಣಸಣ್ಣನೆನಿಪ್ಪುದೊಂದು ॥
ಸಣ್ಣದೊಳಗು ಸಣ್ಣ ಬೇರಿರುತಿಹುದಿಂತು । ಬಣ್ಣಿಸಲಾರಂಗವಾಯ್ತು ॥ ೧೪೬ ॥

ಸದರದಿ ತೆಗೆವುದು ಜೋಕೆವಿಡಿದು ತೆಗೆ । ವುದು ತೆಗೆದರೆ ಬಾರದಿಹುದು ॥
ಮೃದುಚತುರಿಂದ್ರಿಯಗಮ್ಯ ಕರ್ಮಕೆ ತಕ್ಕು । ದದಕೆ ಸಿಕ್ಕದಿವಾರುಕುರುಹು ॥ ೧೪೭ ॥

ಪರಮಾಣುವೆಂದಣುವೆಂದು ಸ್ಕಂಧಗಳೆಂದು । ಪರಿಕಿಸೆ ಮೂದೆರನಹುದು ॥
ಪರಮಾಣುವಯ್ದಿಂದ್ರಿಯಕೆ ತೋರದತಿಸಣ್ಣ । ಧರೆಗದರಿಂ ಸಣ್ಣಗಿಲ್ಲ ॥ ೧೪೮ ॥

ಪರಮಾಣು ಕೂಡಲನಂತಕೊಂದಣುವಣು । ವೆರಡು ಮೂರಿಂತಾದಿಯಾಗಿ ॥
ನೆರೆದು ಪಿಂಡಗಳಾದುವೆಲ್ಲವು ಸ್ಕಂಧವೀ । ಪರಿಯ ಪರ್ಯಾಯ ಪುದ್ಗಲಕೆ ॥ ೧೪೯ ॥

ಅಣುವಿನ ಕೆಳಗಿದ್ದ ಪರಮಾಣು ತನ್ನೊಳು । ಪೆಣೆದೆರಳ್ಮೂರಾದಿಯಾಗಿ ॥
ಅಣುಮುಟ್ಟ ನಡೆವುದು ಸ್ಕಂಧವಂತದು ಕಾ । ರಣಸ್ಕಂಧವಹುದಣುವೊಮ್ಮೆ ॥ ೧೫೦ ॥

ಅಣುಪರಮಾಣುಸ್ಕಂಧಗಳೆಂದು ಮೂರೊಮ್ಮೆ । ಅಣುಸ್ಕಂಧವೆಂದೆರಡೊಮ್ಮೆ ॥
ಅಣುವೆಂಬ ನುಡಿಬಿಟ್ಟು ಪರಮಾಣುಸ್ಕಂಧವೆಂ । ದೆಣಿಸಿಕೊಂಡಿಹುವೆರಡೊಮ್ಮೆ ॥ ೧೫೧ ॥

ಪರಮಾಣುವಿಗೆ ಸ್ಪರುಶನ ಗಂಧ ರಸ ವರ್ಣ । ದಿರವುಂಟು ಶಬ್ದವಲ್ಲಿಲ್ಲ ॥
ಪರಮಾಣುಗಳು ಕೂಡಿ ಸ್ಕಂಧವಾದರೆ ಶಬ್ದ । ದೊರೆಕೊಂಬುದದು ಪರಿಯಾಯ ॥ ೧೫೨ ॥

ಸ್ಥಿರವೆಂದಸ್ಥಿರಪರಿಯಾಯವೆಂದುಂಟು । ಧರೆ ಮೇರು ಮೊದಲಾದುವೆಲ್ಲ ॥
ಸ್ಥಿರಪರಿಯಾಯಗಳೊಬ್ಬಳಿಯಾಗಿಯೆ । ಹರಿವುದಸ್ಥಿರಪರಿಯಾಯಾ ॥ ೧೫೩ ॥

ಪುದ್ಗಲವಿರಚನೆಯಿದನರಿದಿರು ಮುಂದ । ಣುದ್ಗತಾರ್ಥವನಿನ್ನು ಕೇಳು ॥
ಸದ್ಗುರುವೆ ಅಲ್ಲಿಗೊಂದು ಬಿನ್ನಹವುಂಟು । ಚಿದ್ಗುಣಾಭರಣಾ ಚಿತ್ತೈಸು ॥ ೧೫೪ ॥
ಆಯ್ದು ಶರೀರವೆಂದೀಗ ಪುದ್ಗಲವಾರ್ತೆ । ಗೆಯ್ದಿರಿ ಮೂರೆ ಮೈಯಲ್ತೆ ॥
ಆಯ್ದುಶರೀರಕಿನ್ನೆರಡಾವುವೆಮಗವ । ನಾಯ್ದು ನಿರೂಪಿಸಬೇಕು ॥ ೧೫೫ ॥
ನಾರಕರಿಗೆ ಸುರರಿಗೆ ವೈಕ್ರಿಯಕಶ । ರೀರವೌದಾರಿಕವಿಲ್ಲ ॥
ಕ್ರೂರತೈಜಸ ಕಾರ್ಮಣ ವೈಕ್ರಿಯಕಶ । ರೀರವಿಂತವರ್ಗೆ ಮೂರೊಡಲು ॥ ೧೫೬ ॥
ನರತಿರಿಯಂಚರ ತನು ತಾಳಿದಾಕಾರ । ವೆರಸಿಹುದೌದಾರಿಕವದು ॥
ಸುರರು ನಾರಕರು ನೆನೆದ ರೂಪ ಕೈಕೊಂಬ । ರೊರೆಯೆ ವೈಕ್ರಿಯಕದೇಹವದು ॥ ೧೫೭ ॥
ವರಮುನಿಗಳಿಗೊಮ್ಮೆ ತತ್ತ್ವಸಂಶಯವಾಗೆ । ಶಿರದೊಳೊಮ್ಮೊಳದುದ್ದವಾಗಿ ॥
ಸುರುಚಿರತನು ಹುಟ್ಟಿ ನಮ್ಮಲ್ಲಿಗೆಯ್ತಂದು । ಭರದಿ ಸಂಶಯವ ನೀಗುವುದು ॥ ೧೫೮ ॥
ಸಂದೇಹವಳಿವುದೆ ತಾನಳಿವುದು ನಸು । ಗುಂದಿದೆರಡುಘಳಿಗೆಯೊಳು ॥
ಎಂದಿನಂತಾ ಮುನಿಯಿರ್ಪನಾಹಾರಕ । ವೆಂದೆನಿಸುವುದಾ ದೇಹಾ ॥ ೧೫೯ ॥
ಆಹಾರಕದೇಹ ತೈಜಸಕಾರ್ಮಣ । ದೇಹಗಳೌದಾರಿಕಾಂಗಾ ॥
ಊಹಿಸೆ ವೈಕ್ರಿಯಕಾಂಗಸಹಿತ ಪಂಚ । ದೇಹಗಳೆಲ್ಲ ಪುದ್ಗಲವು ॥ ೧೬೦ ॥

ಧರ್ಮಾಧರ್ಮವೆಂದೆರಡುವಸ್ತುಗಳುಂಟು । ಬೇರ್ಮುಟ್ಟೆ ಲೋಕಮಾತ್ರದೊಳು ॥
ನಿರ್ಮಲಗಗನದಂತಿರ್ಪುವಮೂರ್ತಗ । ಳಾರ್ಮನವಿಡಲಖಂಡಗಳು ॥ ೧೬೧ ॥
ಧರ್ಮವಸ್ತುವೆ ಗಮನಕೆ ಸಹಕಾರಿಯು । ಧರ್ಮ ನಿಲ್ವುದಕೆ ಸಹಾಯಾ ॥
ನೀರ್ಮೀನ ಗಮನಕೆಂತಂತೆ ದಾರಿಗರಿಗೆ । ಪೆರ್ಮರಗಳ ನೆಳಲಂತೆ ॥ ೧೬೨ ॥
ನಡೆಯದಿದ್ದುದ ನಡೆಯಿಸದು ನಡೆವ ಮೀನ । ತಡೆಯದಂತಾಗಿಯು ಮೀನ ॥
ನಡೆಗುದಕವೆ ಸಹಕಾರಿ ನೀರಿಲ್ಲದೆ । ನಡೆವುದೆ ನೆಲದೊಳಾ ಮೀನು ॥ ೧೬೩ ॥
ಜೀವಪುದ್ಗಲಗಳು ನಡೆವ ವಸ್ತುಗಳವು । ಆವೆಡೆಗೆಯ್ದಲಂತಂತೆ ॥
ತ್ರೈವಿಧಜಗದೊಳು ಹೊರಗಣ ಸಹಕಾರಿ । ಭಾವಿಸಂತದು ಧರ್ಮವಸ್ತು ॥ ೧೬೪ ॥
ಮರದ ನೆಳಲು ಕೈಯ ಹಿಡಿದು ನಿಲ್ಲಿಸದು ಕು । ಳ್ಳಿರುವರ ಬೇಡೆನ್ನದದರ ॥
ಇರವಿಂದ ಪಥಿಕರು ನಿಲ್ವರದಿಲ್ಲದೆ । ಉರಿಬಿಸಿಲೊಳಗೆ ನಿಂದಪರೆ ॥ ೧೬೫ ॥
ನಿಲುವ ವರ್ತನೆಯುಳ್ಳ ಜೀವಪುದ್ಗಲಗಳ । ನಿಲವಿಗಧರ್ಮವಸ್ತುವದು ॥
ಸಲೆ ಹೊರಗಣ ಸಹಕಾರಿಯಾಗಿಹುದದ । ನೆಲೆ ಭವ್ಯ ನೀನರಿದಿಹುದು ॥ ೧೬೬ ॥

ಆಕಾಶವೆಂಬೊಂದಖಂಡರೂಪಿನ ವಸ್ತು । ಲೋಕದೊಳಗು ಹೊರಗಹುದು ॥
ಬೇಕಾದಷ್ಟು ವಸ್ತುವಿಗಿಂಬನಿತ್ತು ಮ । ಹಾಕೀರ್ತಿವಂತನಂತಿಹುದು ॥ ೧೬೭ ॥
ಕಾಲವೆಂಬುದು ವಸ್ತು ಪರಮಾಣುರೂಪಾಗಿ । ಮೂಲೋಕತುಂಬಿರುತಿಹುದು ॥
ಮೇಲೊಂದನೊಂದ ಪತ್ತವು ಪರಮಾಣುಗ । ಳಾಲಿಸೆ ರತ್ನರಾಶಿಪೊಲು ॥ ೧೬೮ ॥
ಪರಿಮಳ ರಸ ವರ್ಣ ಮೊದಲಾದುವಿಲ್ಲ ತ । ಳ್ತಿರುತದೆ ಬಯಲ ರೂಪಿನೊಳು ॥
ಪರಮಾಣುಮಾತ್ರದ ತುಂಡಾಗಿ ನಭವ ಕ । ತ್ತರಿಸಿ ಲೋಕವ ತುಂಬಿದಂತೆ ॥ ೧೬೯ ॥
ವ್ಯವಹಾರಕಾಲ ನಿಶ್ಚಯಕಾಲವೆಂದದು । ದ್ವಿವಿಧವಾಗಿಹುದದರಲ್ಲಿ ॥
ಹವಣಾದ ದಿನ ಮಾಸ ವರುಷ ಘಳಿಗೆ ಜಾವ । ವಿವು ವ್ಯವಹಾರಕಾಲಗಳು ॥ ೧೭೦ ॥
ಮಿತಕೆ ಬಾರದೆ ಲೋಕ ತುಂಬಿದ್ದುದೆಲ್ಲ ನಿ । ಶ್ಚಿತಕಾಲವಿವು ಪರಿಯಾಯ ॥
ಅತಿಹೊಸತನು ಹಳತೆನಿಪುದಾದಿಯ ಪರಿ । ಣತಿ ತಾನೆ ಕಾಲದ ಗುಣವು ॥ ೧೭೧ ॥
ಭಿನ್ನವಸ್ತುಗಳ ವರ್ತನೆಗೆ ಕಾರಣ ತಾನೆ । ತನ್ನ ವರ್ತನೆಗೂ ತಾನಹುದು ॥
ತನ್ನಯ ಮೊಗವ ಡೊಂಕಿಸಿ ನಕ್ಕು ಪರಿಹಾಸ । ನನ್ನಿಗರನು ನಗಿಪಂತೆ ॥ ೧೭೨ ॥

ಜೀವ ಮುಂತಾಗಿಲ್ಲಿಗಾರುವಸ್ತುಗಳ ಕ । ಲಾವಿವರಣೆಯಾದುದಿಂತು ॥
ಆ ವಸ್ತುಗಳ ಮೊತ್ತದೊಳು ತರತಮಭೇದ । ಭಾವವುಂಟದನಿನ್ನು ಕೇಳು ॥ ೧೭೩ ॥
ಗಗನ ಧರ್ಮಾಧರ್ಮ ಮೂರಿವೊಂದೊಂದೆ ವ । ಸ್ತುಗಳವಖಂಡರೂಪಗಳು ॥
ಆಗಣಿತವೆನಿಪುವು ಪುದ್ಗಲಜೀವಕಾ । ಲಗಳೆಂಬ ಮೂರುವಸ್ತುಗಳು ॥ ೧೭೪ ॥
ಹಲವುಜೀವಗಳ ಕುರಿತು ಖಂಡಗಳು ತಮ್ಮ । ನಿಲವಿಂದ ತಾವಖಂಡಗಳು ॥
ಹಲವಣುಗಳ ನೋಡೆ ಖಂಡಗಳೊಂದೊಂದ । ರೊಳಗಖಂಡಗಳು ಕಾಲಾಣು ॥ ೧೭೫ ॥
ಸ್ಕಂಧಗಳನು ಸಕಲಾಣುಗಳನು ನಿ । ರ್ಬಂಧಿಸೆ ಖಂಡಗಳಹುವು ॥
ಬಂಧಿಸೆ ಪರಮಾಣು ಖಂಡವಾಗದು ಜಾ । ಡ್ಯಾಂಧಪುದ್ಗಲದ ಭೇದವದು ॥ ೧೭೬ ॥
ಮೂರ್ತವೆನಿಪುದಾರರೊಳಗೆ ಪುದ್ಗಲವೊಂದೆ । ಮೂರ್ತವಲ್ಲೈದು ವಸ್ತುಗಳು ॥
ಆರ್ತು ತಿಳಿವ ವಸ್ತು ಜೀವವೊಂದೆಲೆ ರವಿ । ಕೀರ್ತಿ ಮತ್ತುಳಿದುವರಿಯವು ॥ ೧೭೭ ॥
ಗತಿಗೆ ಕಾರಣ ಧರ್ಮವೊಂದೆ ಮಿಕ್ಕಿನವಲ್ಲ । ಸ್ಥಿತಿಗಧರ್ಮವೆ ಪೆರತಲ್ಲ ॥
ಕ್ಷಿತಿಗೊಡಲಾಕಾಶವೊಂದೆ ವರ್ತನಪರಿ । ಣತಿಗೊಂದೆ ಕಾಲವರಿದಿರು ॥ ೧೭೮ ॥
ಚರಿಸುತಿಪ್ಪುವು ಜೀವ ಪುದ್ಗಲವೆರಡಲ್ಲಿ । ಚರಿಸದಿರ್ಪುವು ನಾಲ್ಕು ವಸ್ತು ॥
ಉರುಬಂಧವವರೊಳು ಜೀವಪುದ್ಗಲಗಳಿ । ಗೆರಡಕೆ ಮಿಕ್ಕವಕಿಲ್ಲ ॥ ೧೭೯ ॥
ಜೀವನ ಚಲನೆಗೆ ಪುದ್ಗಲ ಕಾರಣ । ಭಾವಿಸಲದರ ಸಂಚಲಕೆ ॥
ಈವಿದ ಕಾಲವೆ ಕಾರಣವಿದು ಕಾಲ । ಜೀವಕರ್ಮಗಳ ತ್ರಿಕೂಟ ॥ ೧೮೦ ॥

ಚರಿಸುತಿಪ್ಪುದು ಜೀವವಸ್ತು ಕರ್ಮಗಳೊಡ । ವೆರಸಿದನಿತುಕಾಲ ಮತ್ತೆ ॥
ದುರಿತವೆಲ್ಲವ ಸುಟ್ಟು ಮೇಲೆ ಮುಕ್ತಿಯೊಳದು । ಚರಿಸದೆ ತೆಪ್ಪಗೊಪ್ಪಿಹುದು ॥ ೧೮೧ ॥

ಒಂದೊಂದರೊಳಗೆ ತಾವೊಂದೊಂದು ಪೊಕ್ಕಾರು । ವೊಂದಿ ತುಂಬಿಹುವು ಲೋಕದೊಳು ॥
ಒಂದರ ಗುಣವೊಂದಕಾಗದೆ ತಮ್ಮ ತ । ಮ್ಮಂದದಿ ಬೇರ್ಪಡಿಸಿಹುವು ॥ ೧೮೨ ॥

ಸಾಲಾಗಿ ನಿಲೆ ಜೀವತತಿಗೆ ಸಾಲದು ಲೋಕ । ಕೇಳು ಪುದ್ಗಲವದಕಧಿಕಾ ॥
ಕಾಲಸಂತತಿಯಾಕಾಶ ಧರ್ಮಾಧರ್ಮ । ದೋಳಿಯಿಟ್ಟಣಿಸಿ ತುಂಬಿಹುದು ॥ ೧೮೩ ॥

ಒಟ್ಟಿಯು ಪಾಲ್ಗೊಡದೊಳು ಜೇನುತುಪ್ಪವಿಂ । ಬಿಟ್ಟನಿತಡಗುವಂದದೊಳು ॥
ಕಟ್ಟಣೆಗಧಿಕವಾದಾರುವಸ್ತುಗಳಡ । ಗಿಟ್ಟಣಿಸಿಹುವು ಲೋಕದೊಳು ॥ ೧೮೪ ॥

ಗೂಢನಾಗನೊಳಡಗಿದ ಬಹುವಿತ್ತವ । ಗೂಢತೆಯಂತಾರುವಸ್ತು ॥
ಗಾಢರೂಪಿನ ಗಾಳಿಗಳ ಗರ್ಭದೊಳಗವ । ಗಾಢವಾಗಿಡಿಕಿರಿದಿಹುವು ॥ ೧೮೫ ॥

ಒಸೆದೊಂದುಪರಮಾಣು ನಿಲ್ವಷ್ಟು ತೆರಪಿಗೆ । ಹೆಸರು ಪ್ರದೇಶವೆಂದಹುದು ॥
ಪ್ರಸರಪುದ್ಗಲ ನಾಲ್ಕುವಿಧ ಬಹುದೇಶಿಯಾ । ಗಸವದನಂತಪ್ರದೇಶಿ ॥ ೧೮೬ ॥

ಜೀವಧರ್ಮಾಧರ್ಮಗಳಿಗೆ ಪ್ರದೇಶಗ । ಳಾವಾಗಲುಂಟಸಂಖ್ಯಾತ ॥
ಭಾವಿತಾತ್ಮನೆ ಲಾಲಿಸೊಂದೆ ಪ್ರದೇಶವ । ನಾವರಿಸಿತು ಕಾಲವಸ್ತು ॥ ೧೮೭ ॥

ಕಿಂಚಿತ್ತು ದೇಶವಾದುದರಿಂದ ಕಾಲವ । ಹಿಂಚಿಸಿ ಕಳೆದುಳಿದುವಕೆ ॥
ಅಂಚಿತಾನೇಕಪ್ರದೇಶವುಳ್ಳುದರಿಂದ । ಪಂಚಾಸ್ತಿಕಾಯವೆಂದಾಯ್ತು ॥ ೧೮೮ ॥

ಗುಣಪರಿಯಾಯವಸ್ತುತೆಯಿಂದ ವಸ್ತುವೆಂ । ಬೆಣಿಕೆಗೆ ಬಂದುದಾರರೊಳು ॥
ಎಣಿಸಲನೇಕಪ್ರದೇಶವಿಲ್ಲಾಗಿ ಮುಂ । ದಣ ಕಾಲವಾಯ್ತಿಲ್ಲ ಕಾಯಾ ॥ ೧೮೯ ॥

ವಸ್ತುಗಳಾರಾಗಿ ಮತ್ತವರೊಳಗೆ ಪಂ । ಚಾಸ್ತಿಕಾಯಗಳಾದುವಿಂತು ॥
ವಿಸ್ತರಿಸುವೆವಲ್ಲಿ ತತ್ತ್ವವೇಳುಂಟನ್ನು । ನಿಸ್ತುಷಮತಿಯಿಂದ ಕೇಳು ॥ ೧೯೦ ॥

ದ್ರವ್ಯವಾರಯ್ದಸ್ತಿಕಾಯವನೊರೆದು ಸು । ಭವ್ಯಗೆ ಸಪ್ತತತ್ತ್ವವನು ॥
ದಿವ್ಯವಾಕ್ಪತಿ ತೊಡಗಿರ್ದನೆಂಬಲ್ಲಿಗೆ । ದಿವ್ಯಧ್ವನಿಯ ಸುಸಂಧಿ ॥ ೧೯೧ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೯೨ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ಯೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೯೩ ॥

ಅಕ್ಷರಾಭರಣ ನಿರಕ್ಷರಬೋಧ ಸಾ । ಪಕ್ಷಯ ಪರಮಪವಿತ್ರಾ ॥
ರಕ್ಷಿಸು ನನ್ನಂತರಂಗದೊಳಿರು ವಿಮ । ಲಾಕ್ಷ ಚಿದಂಬರಪುರುಷಾ ॥ ೧೯೪ ॥

ದಿವ್ಯಧ್ವನಿಸಂಧಿ ಸಂಪೂರ್ಣಂ

# ತತ್ತ್ವಾರ್ಥಸಂಧಿ

ತ್ರಿಭುವನಸಾರ ದಿವ್ಯಧ್ವನಿಸಾರ ಮ । ತ್ತಭಿನವತತ್ತ್ವಾರ್ಥಸಾರಾ ॥
ವಿಭವೈಕಸಾರ ವಿದ್ಯಾಸಾರ ಮತಿದೋರು । ಪ್ರಭುವೆ ನಿರಂಜನಸಿದ್ಧಾ ॥ ೧ ॥

ದೇವರ ದೇವನಾ ರವಿಕೀರ್ತಿರಾಜಗೆ । ಜೀವಾದಿಸಪ್ತತತ್ತ್ವವನು ॥
ಜೀವಹಿತಾರ್ಥ ನಿರೂಪಿಸಿದವನು ಜಿನ । ದೇವನಿಂದುಪಕಾರರುಂಟೆ ॥ ೨ ॥
ಕೇಳೆಲೆ ರವಿಕೀರ್ತಿ ಸಪ್ತತತ್ತ್ವದ ಕಾಲು । ಕೇಲನೆಲ್ಲವನು ಚೆನ್ನಾಗಿ ॥
ಕೇಳಿದ ಮೇಲೆ ಕರ್ಮವ ಸುಟ್ಟು ಕೈವಲ್ಯ । ಶಾಲೆಗೇರುವುದ ಪೇಳುವೆವು ॥ ೩ ॥
ಜೀವತತ್ತ್ವವನು ನಿರ್ಜೀವತತ್ತ್ವವನಾಸ್ರ । ವಾವಿದ್ಧ ಬಂಧತತ್ತ್ವಗಳಾ ॥
ಭಾವಸಂವರೆಯು ನಿರ್ಜರೆ ಮೋಕ್ಷತತ್ತ್ವನಿಂ । ತೀ ವಿಧದಿಂದೇಳು ಕೇಳು ॥ ೪ ॥
ಬದ್ಧಾತ್ಮರೆಂದು ಶುದ್ಧಾತ್ಮರೆಂದಾ ಜೀವ । ಪದ್ಧತಿಗಿತ್ತೆರನುಂಟು ॥
ಬದ್ಧಾತ್ಮರಾರಂಗಮೂರನುಳ್ಳವರಲ್ಲಿ । ಶುದ್ಧರಾರಂಗವಿಲ್ಲದರು ॥ ೫ ॥
ಸಿದ್ಧರು ಮುಕ್ತರು ನಿರ್ದೇಹಿಗಳು ನೆರೆ । ಶುದ್ಧರೆಂದೆನಲರ್ಥವೊಂದೆ ॥
ಬದ್ಧರು ಸಂಸಾರಿಗಳು ದೇಹಿಗಳು ಕರ್ಮ । ವಿದ್ಧರೆಂದೆನಲರ್ಥವೊಂದೆ ॥ ೬ ॥
ಸ್ಪರುಶನೇಂದ್ರಿಯದಿಂದ ಕರ್ಣೇಂದ್ರಿಯಮುಟ್ಟ । ಪರಿವಿಡಿಯಿಂದ್ರಿಯವೈದಾ ॥
ಧರಿಸಿ ದಶಪ್ರಾಣ ತನು ಕರ್ಮಗೂಡಿದ । ವರು ಸಂಸಾರಿಜೀವಗಳು ॥ ೭ ॥
ಇಂದ್ರಿಯತನುಕರ್ಮಪ್ರಾಣಗಳಳಿದು ಬೋ । ಧೇಂದ್ರಿಯಬೋಧಾಂಗರಾಗಿ ॥
ಸಾಂದ್ರಸುಖದೊಳು ಮುಕ್ತಿಯೊಳಿಹ ಪರಮಬೋ । ಧೇಂದ್ರರೆ ಮುಕ್ತಜೀವಗಳು ॥ ೮ ॥
ಮುಕ್ತರಾದವರೆಲ್ಲ ಮುನ್ನ ಸಂಸಾರಸಂ । ಯುಕ್ತರಾಗಿರ್ದು ಕರ್ಮಗಳಾ ॥
ಯುಕ್ತಿಯರಿದು ಶಕ್ತಿಗೆಡಿಸಿ ದೇಹವ ಬಿಟ್ಟು । ಮುಕ್ತಿಗೆಯ್ದಿದರೆಲೆ ಭವ್ಯಾ ॥ ೯ ॥
ಮುಕ್ತರೆಂದೆಂದು ಮುಕ್ತಿಯೊಳಿ ಇದ್ದವರಲ್ಲ । ಉಕ್ತಿಸೆ ಭವದೊಳಿದ್ದವರು ॥
ಮುಕ್ತಿಗೇರಿದರಹುದಿನ್ನಿತ್ತ ಬಾರರು । ಮುಕ್ತಿಯೆ ನಿತ್ಯವವರಿಗೆ ॥ ೧೦ ॥
ನಿವಗು ತಾನಂತುಟೆ ಕರ್ಮವಳಿದರೆ ನೀ । ವವರಂತೆ ಮುಕ್ತರಾಗುವಿರಿ ॥
ಭವವೆಂಬುದುರೆ ನಿತ್ಯವಲ್ಲ ಭವ್ಯಾಳಿಗೆ । ಧ್ರುವವಾದ ಮುಕ್ತಿಯೆ ನಿತ್ಯಾ ॥ ೧೧ ॥
ಭವ್ಯರೆಂದುಂಟು ನಿರ್ಭವ್ಯರೆಂದುಂಟೆಲೆ । ಭವ್ಯ ಕೇಳವರ ಭೇದವನು ॥
ಭವ್ಯರೆಂಬವರು ಮುಕ್ತಿಗೆ ಸಲುವವರು ನಿ । ರ್ಭವ್ಯರಲ್ಲಿಗೆ ಸಲ್ಲದವರು ॥ ೧೨ ॥

ಅಡಗಿರ್ದ ಬಣ್ಣವಾ ಕೀಳುಚಿನ್ನಕೆ ಪೊರ । ಮಡಲದು ಕಡೆಯಹಾಣಿಯಾಯ್ತು ॥
ಅಡಗಿರ್ದ ಗುಣಗಳು ಪೊರಮಟ್ಟರಾತ್ಮನ । ನುಡಿವರು ಮುಕ್ತಾತ್ಮನೆಂದು ॥ ೨೭ ॥
ಶಕ್ತಿಯೊಳಿಲ್ಲರಾತ್ಮಗೆ ಬೋಧದರ್ಶನ । ಶಕ್ತಿಸುಖಗಳಡಗಿಹುವು ॥
ಶಕ್ತರವನು ಪೊರಪೊಣ್ಮಿಸಲದು ತಾನೆ । ವ್ಯಕ್ತಿ ಮುಕ್ತಿಯು ತಾನೆ ನಂಬು ॥ ೨೮ ॥
ಬೀಜದೊಳಿರ್ದ ವೃಕ್ಷವ ಶಕ್ತಿಗತವೆಂದು । ಯೋಜಿಸಂಕುರಿಸಿ ಪಲ್ಲವಿಸಿ ॥
ಭೂಜವಾದುದ ಶಕ್ತಿಯೆಂದರಿ ಜೀವಾಳಿ । ಗೀ ಜೋಕೆ ಶಕ್ತಿವ್ಯಕ್ತಿಗಳು ॥ ೨೯ ॥

ಜೀವತತ್ತ್ವದ ಕಲೆಯಿದನರಿದಿಹುದು ನಿ । ರ್ಜೀವತತ್ತ್ವವನಿನ್ನು ಕೇಳು ॥
ಜೀವತತ್ತ್ವವ ಕಳೆದುಳಿದೈದುವಸ್ತು ನಿ । ರ್ಜೀವಗಳೆಲೆ ಭವ್ಯಜೀವಾ ॥ ೩೦ ॥
ವ್ಯೋಮಧರ್ಮಾಧರ್ಮಕಾಲಪುದ್ಗಲಕೆ ಸು । ಕ್ಷೇಮದುಃಖಗಳೆಂಬುದಿಲ್ಲ ॥
ನಾಮಮಾತ್ರವು ಕಾಣವರಿಯುವು ನಿರ್ಜೀವ । ನಾಮವಾಯ್ತವಕದರಿಂದ ॥ ೩೧ ॥
ಅವರೊಳು ನಾಲ್ಕು ತೋರದುವವಂತಿರಲಿ ತೋ । ರುವ ಮೂರ್ತಪುದ್ಗಲವೊಂದು ॥
ಪವನಗರ್ಭದೊಳಿಡಿದಿಡಿದು ತುಂಬಿಹುದು ಮು । ನ್ನವೆ ಪೇಳ್ದವದರಾರುತೆರನಾ ॥ ೩೨ ॥
ತೋರತೋರನು ತೋರನುರೆ ತೋರಸಣ್ಣನಿ । ವಾರಾರ ಕಣ್ಗೆ ತೋರುವುವು ॥
ಆರ ಚರ್ಮಾಕ್ಷಿಗಿನ್ನುಳಿದುವು ತೋರವು । ಭೂರಿಪುದ್ಗಲದ ಭೇದದೊಳು ॥ ೩೩ ॥
ಅಂಟಾಗಿ ಬಿರುಬಾಗಿ ಕರ್ಮವರ್ಗಣೆಯು ಬೊ । ಳುಂಟದು ಸಣ್ಣನೆನಿಪುದು ॥
ಅಂಟಿನಂದದ ಸ್ನೇಹ ಬಿರುಬಿನಂದದ ಕೋಪ । ವುಂಟಾದವರನು ಪತ್ತುವುದು ॥ ೩೪ ॥
ಉಣ್ಬುದು ಮಿಾವುದು ಹೊದೆವುದು ಕಣ್ಣಿಂದ । ಕಾಣ್ಬುದು ಮೊದಲಾದುವೆಲ್ಲ ॥
ಜಾಣ್ಬೆರೆತೊಂದು ಪುದ್ಗಲವೈಸೆ ಕಣ್ಣಿಂದ । ಕಾಣ್ಬರಾರೈದುವಸ್ತುಗಳಾ ॥ ೩೫ ॥
ಹೊಳೆ ಮಳೆ ಹೊಲ ಮನೆ ತಳಿಗೆ ತಂಬುಗೆ ಗಾಳಿ । ಚಳಿಯುರಿ ಗಿರಿ ಮುಗಿಲೊಡಲು ॥
ಹುಳಿ ಸಿಹಿ ಕಹಿ ಖಾರ ತಂಪು ಕೆಂಪುರೆ ಕಪ್ಪು । ಬಿಳುಪೆಲ್ಲ ಪುದ್ಗಲವಲ್ತೆ ॥ ೩೬ ॥
ಮಣಿಮಾಲೆ ಚೌಕುಳಿ ಕಡಗ ಮೂಗುತಿ ಸರ । ಪಣೆ ತಾಳಿ ಉಳಿ ಬಳೆ ಪದಕಾ ॥
ಹಣ ಹೊನ್ನು ತಾರ ತವರ ಚಿನ್ನ ಬೆಳ್ಳಿಗ । ಳೆಣಿಸೆ ಪುದ್ಗಲವಲ್ಲದೇನು ॥ ೩೭ ॥
ಬಲುಕೊಡದೊಳು ತುಂಬಿದುದಕದಂದದೊಳು ಪು । ದ್ಗಲವಸ್ತು ಲೋಕತುಂಬಿಹುದು ॥
ಜಲನಿಧಿಯೊಳಗಣ ಮತ್ಸ್ಯಗಳಂತಲ್ಲಿ । ಮುಳುಗಿ ಜೀವಗಳಿರುತಿಹುವು ॥ ೩೮ ॥
ಮೂರುಪುದ್ಗಲ ಕಣ್ಗೆ ತೋರುವುವವನುರೆ । ಮಿಾರಿದ ಪುದ್ಗಲಮೂರು ॥
ತೋರವು ಸರ್ವತ್ರ ತುಂಬಿರುತಿಹುವಲ್ಲಿ । ಮಿಾರದಡಗಿ ಜೀವವಿಹುವು ॥ ೩೯ ॥
ಗಿರಿ ತರು ಗೋಡೆ ಮುಂತಾದುವು ಬಲುಕಂದ । ದಿರವಿಂದ ನಡೆಗಡ್ಡಲಹುವು ॥
ಪರಮಾಣುವಣು ಬಡಕಂದದ ಪುದ್ಗಲ । ವಿರುತಿದ್ದು ತಡೆಯುವೆಯ್ದುವರಾ ॥ ೪೦ ॥

ಬೇಡಬೇಕನ್ನದೆ ಧರ್ಮಾದಿ ನಾಲ್ಕವು । ನೋಡುವರಂತಿರುತಿಹುವು ॥
ನೋಡಲ್ಲಿ ಜೀವಪುದ್ಗಲಗಳಿರ್ದಪುವು ಹೊ । ಯ್ದಾಡುವ ಜಟ್ಟಿಗಳಂತೆ ॥ ೪೧ ॥

ಒಚ್ಚತಯಿಲ್ಲೆನಲಾಗದು ಕಾಲವೊಂ । ದಚ್ಚಿ ಕರ್ಮಗಳತ್ತ ತಹುದು ॥
ಚುಚ್ಚಿ ಕೊಡುವರಂತೆ ಪುದ್ಗಲಪರಿಣತಿ । ಗಚ್ಚಾದ ಕಾರಣದಿಂದ ॥ ೪೨ ॥

ಅದರಿಂದ ಜೀವ ಪುದ್ಗಲ ಕಾಲಯೀ ಮೂರು । ಪುದಿದನಾದಿಗಳೆಂಬರೆಲ್ಲ ॥
ಅದು ತಪ್ಪದಲ್ಲದರಾರುವಸ್ತುಗಳೊಳ । ಗಿದು ಬರಲೇಕೆ ಬೇರ್ಮಾತು ॥ ೪೩ ॥

ಕರ್ಮಾತ್ಮ ಕಾಲ ಮೂರಿವರನಾದಿಗಳಾಗಿ । ಧರ್ಮಾಧರ್ಮನಭಗಳು ॥
ನಿರ್ಮಿಸಲಾದಿಯೊಳಾದುವೆಯೆಂದಾತ್ಮ । ಧರ್ಮರಾಡುವರದು ಸತ್ಯಾ ॥ ೪೪ ॥

ಕೈವಲ್ಯದೊಳಗಿದ್ದ ಸಿದ್ಧರು ವಸ್ತುಸ್ವ । ಭಾವವೆಂದೀಕ್ಷಿಸುತಿಹರು ।
ಜೀವಕಲ್ಲದೆ ಮುಕ್ತಿ ಪುದ್ಗಲಕಿಲ್ಲ ನಿ । ರ್ಜೀವತತ್ತ್ವವಿದು ನಿಶ್ಚಯಿಸು ॥ ೪೫ ॥

ನಾಲಗೆ ಮೈ ಮನ ಮೂರಿವು ಮುಸುಕಿದ । ವೇಳೆಯೊಳಾ ಸಣ್ಣನೆಂಬ ॥
ದೂಳದು ಪೊರಗಿದ್ದುದೊಳಹೊಗುತಿಹುದು ಜೀ । ವಾಳಿಗದಾಸ್ರವಬಂಧಾ ॥ ೪೬ ॥

ಹಡಗಿಗೆ ಛಿದ್ರದೊಳಗೆ ನೀರು ಹೊಗುವಂತೆ । ನುಡಿ ಚಿಂತೆ ಮೈಯಾಟವೆಂಬ ॥
ನಿಡುಛಿದ್ರದೊಳು ಕರ್ಮವಾಗುವ ಧೂಳಾತ್ಮ । ನೆಡೆಗೆ ತಾನೊಳಹೊಗುತಿಹುದು ॥ ೪೭ ॥

ಅಯ್ದುಹುವೈವತ್ತೇಳಹುವಾ ರಜ । ಮೆಯ್ದುವಾಸ್ರವಗಳವೆಲ್ಲ ॥
ಆಯ್ದು ಮೂರೆಂಬಾಗಳಡಕವೀ ಮೂರಕೆ । ನೇಯ್ದ ಯೋಗಗಳೆಂಬ ನಾಮಾ ॥ ೪೮ ॥

ಮೊದಲು ಧೂಳಹುದೊಳಹೊಗುವಾಗ ಧೂಳಹು । ದದುಮತ್ತೆ ಭಾವಕರ್ಮದೊಳು ॥
ಹುದುಗಲೊಡನೆ ಕರ್ಮವಪ್ಪುದಾಸ್ರವತತ್ತ್ವ । ವಿದು ಮುಂದೆ ಕೇಳು ಬಂಧವನು ॥ ೪೯ ॥

ಯೋಗಮೂರರೊಳೊಳಹೊಕ್ಕ ಧೂಳದು ಕೋಪ । ರಾಗ ಮೋಹಗಳೊಡವೆರಸಿ ॥
ಆಗಲೆ ಕರ್ಮರೂಪಾಗಿ ಜೀವಗೆ ಲೇಪ । ವಾಗುವುದದು ತಾನೆ ಬಂಧಾ ॥ ೫೦ ॥

ಧೂಳಾತ್ಮನೊಳಹೊಗುವಾಗಳಾಸ್ರವ ಹೊಕ್ಕ । ಧೂಳು ಪಲ್ಲಟಿಸಿ ಜೀವನೊಳು ॥
ಮೇಳವಪ್ಪುದು ಬಂಧವೆನಿಪುದಿಷ್ಟೆ ಭೇಧ । ಕೇಳು ಬಂಧಾಸ್ರವಗಳಿಗೆ ॥ ೫೧ ॥

ಸರಿಯೆಂಬ ಬಿಸುಪೆಂಬ ಗುಣಗಳಿವೆರಡಾ । ಕಿರುದೂಳಿಗುಂಟಾದ ದೂಳು ॥
ಸರಿಯಂತೆ ಮಮಕಾರ ಬಿಸುಪಿನಂತತಿಕೋಪ । ವೆರೆದಾತ್ಮನೊಳು ಬಂಧವಹುದು ॥ ೫೨ ॥

ಪಾವಕದಿಂದ ಕಾಸಿದ ಲೋಹವದು ನೀರ । ನಾವ ಪರಿಯೊಳುಂಬುದಂತೆ ॥
ಭಾವಕರ್ಮಾಗ್ನಿ ತಾಗಿದ ಜೀವ ಸರ್ವಾಂಗ । ಶೀವಿ ಕರ್ಮವ ಹೀರುತಿಹುದು ॥ ೫೩ ॥

ತೃಪ್ತಿಗೆಂದುಂಡನ್ನವುದರಾಗ್ನಿಸೋಂಕಿಂದ । ಸಪ್ತಧಾತುಗಳಾಗುವಂತೆ ॥
ದೀಪ್ತಪುದ್ಗಲ ಹೊಕ್ಕು ಭಾವಕರ್ಮವ ಸೋಂಕಿ । ತಪ್ತಾತ್ಮಕರ್ಮವಾಗಿಹುದು ॥ ೫೪ ॥

ಕಟ್ಟಿದಾಗಳೆ ಕರ್ಮಗಳು ಫಲಗೊಡವವು । ಕಟ್ಟಿದರ್ಧ ಕಾಲದ ಮೇಲೆ ॥
ಬಿಟ್ಟು ಪೋಪಾಗ ಜೀವಗೆ ಸುಖದುಃಖವ । ತಟ್ಟಿಸಿ ತಾವು ಜಾರುವವು ॥ ೫೫ ॥
ಸಿಹಿಮೆಕ್ಕೆ ಕಹಿಮೆಕ್ಕೆ ಬಿತ್ತಿದಾಗಳೆ ಫಲ । ವಹುವೆ ಮೆಲ್ಲನೆ ಫಲವಹುವು ॥
ಬಹುಸುಖದುಃಖವ ಪುಣ್ಯಪಾಪಗಳು ಸಂ । ಗ್ರಹಿಸಿ ಮೆಲ್ಲನೆ ಕೊಡುತಿಹುವು ॥ ೫೬ ॥
ಸುಖಕುಬ್ಬಿ ದುಃಖಕೆ ಮರುಗಿದರೊಡನೆ ಮುಂ । ದಖಿಳಕರ್ಮಗಳು ಕಟ್ಟುವುವು ॥
ಸುಖದುಃಖಕತ್ತಿತ್ತಲಾಗದೆ ಧ್ಯಾನಾಭಿ । ಮುಖದೊಳಿದ್ದರೆ ಬಂಧವಿಲ್ಲ ॥ ೫೭ ॥
ಹಳೆಯ ಕರ್ಮವು ಸೋರಿ ಹೋಗುತಿಹುದು ಕೂಡೆ । ಒಳಹೊಗುವುದು ಹೊಸಕರ್ಮ ॥
ಹಳತ ಬಿಡುತ ಹೊಸತನು ಪಿಡಿವುತ ಕರ್ಮ । ದೊಳು ಮುಳುಗಿರುತಿಹನಾತ್ಮ ॥ ೫೮ ॥
ಒಂದು ಮಡುವಿಗೆ ಮೇಲ್ದೆಸೆಯಿಂದ ನೀರ್ಬಹು । ದೊಂದೆಸೆಯೊಳು ಹೋಗುತಿಹುದು ॥
ಕುಂದದಿರ್ಪುದು ಮಡುವಿನ ನೀರು ಕರ್ಮಾಳಿ । ಬಂದು ಹೋಹುದು ಜೀವಗಂತೆ ॥ ೫೯ ॥
ಹೊಸಕರ್ಮ ಮುನ್ನಿರ್ದ ದ್ರವ್ಯಕರ್ಮದೊಳು ಬಂ । ಧಿಸುವುದಾ ದ್ರವ್ಯಕರ್ಮವದು ॥
ಒಸರುವ ಭಾವಕರ್ಮದೊಳು ಗಂಟಿಹುದದು । ಬೆಸುಗೆದಟ್ಟಿಹುದು ಜೀವನೊಳು ॥ ೬೦ ॥
ನವಕರ್ಮ ಪೂರ್ವಕರ್ಮಕೆ ಬಂಧ ಪೂರ್ವಕ । ರ್ಮವೆ ಭಾವಕರ್ಮಕೆ ಬಂಧಾ ॥
ಅವಗತಭಾವಕರ್ಮಗಳೆ ಜೀವಕೆ ಬಂಧ । ತ್ರಿವಿಧ ಬಂಧಗಳಹುವಿಂತು ॥ ೬೧ ॥
ಸ್ಥಿತಿಯನುಭಾಗ ಮುಂತಾಗಿ ನಾಲ್ದೆರನುಂಟು । ವಿತತವಿಸ್ತರವೇಕೆ ಸಾಕು ॥
ಇತಿ ಬಂಧತತ್ತ್ವವೆಂದರಿದಿರು ಮುಂದೆ ಕೇ । ಳತುಳಸಂವರೆಯನಾತ್ಮಾರ್ಥಿ ॥ ೬೨ ॥

ಬರುತಿರ್ಪ ಕರ್ಮದ ಮೂರುಬಟ್ಟೆಯ ಮೂರು । ಪರಿಯ ಗುಪ್ತಿಗಳಿಂದ ಕಟ್ಟಿ ॥
ತಿರುಗಿ ತನ್ನಾತ್ಮನ ತಾ ನೋಡಲದಕೆ ಸಂ । ವರೆಯೆಂಬ ತತ್ತ್ವಾಭಿಧಾನಾ ॥ ೬೩ ॥
ಮೌನದಿ ಜಿಹ್ವೆಯಾಟವ ಕಟ್ಟಿ ಮೈಯಾಟ । ವೇನಿಲ್ಲವೆನಿಸಿ ಕಣ್ಮುಚ್ಚಿ ॥
ಮಾನಸವನು ಹಂಸನೊಳಗಡಗಿಸಲದು । ತಾನೆ ಸಂವರೆ ಗುಪ್ತಿಮೂರು ॥ ೬೪ ॥
ಛಿದ್ರವ ಮುಚ್ಚಿದ ಹಡಗಿನೊಡಲಿಗೆ ಸ । ಮುದ್ರದ ನೀರ್ಪೊಗದಂತೆ ॥
ಉದ್ರೇಕದ ಯೋಗಗಳನು ಗುಪ್ತಿಗಳಿಂದ । ಮುದ್ರಿಸಿದರೆ ಕರ್ಮ ಬಹುದೆ ॥ ೬೫ ॥
ಗುಪ್ತಿಗಳೆಲ್ಲರೊಳಗೆ ಚಿತ್ತಗುಪ್ತಿಯಾ । ಗುಪ್ತಿಯುದಾರ್ಗಹುದೆನಲು ॥
ವ್ಯಾಪ್ತಿಯೆಲ್ಲವ ಬಿಟ್ಟು ತನ್ನಾತ್ಮನೊಳು ಮನೋ । ಲುಪ್ತನಾದವಗಳವಹುದು ॥ ೬೬ ॥
ಬಂಧನಿರ್ಜರೆಗಳೆರಡು ಸರ್ವಕಾಲ ಸಂ । ಬಂಧಿಸುತಿಹುವು ಜೀವರಿಗೆ ॥
ಬಂಧಾರಿಸಂವರೆಯೊಂದೆ ದೊರಕದದು । ಬಂಧು ನಿಜಾತ್ಮಸಂಪದಕೆ ॥ ೬೭ ॥
ಮುನ್ನ ಕಟ್ಟಿದ ಕರ್ಮ ಸೋರುತಿಹುದು ನಿಚ್ಚ । ಲಿನ್ನು ಬಪ್ಪುದನು ತಡೆದರೆ ॥
ತನ್ನಾತ್ಮಸಿದ್ಧಿ ತನಗೆ ಸಾಧ್ಯವಹುದಾವ । ಬಿನ್ನಾಣವೆಲೆ ರವಿಕೀರ್ತಿ ॥ ೬೮ ॥

ಆಯುವ ತಡೆದರೆ ಬೀಯುವುಳ್ಳವನ ವಿ । ಡಾಯು ತಾನೆ ಬರಿದಹುದು ॥
ದಾಯುವರಿದು ಬರ್ಪ ಕರ್ಮವ ತಡೆದರೆ । ವ್ಯಾಯುವಾಗದೆ ಪೂರ್ವಕರ್ಮಾ ॥ ೧೯ ॥

ಇಂತಿದು ಸಂವರೆ ಸುಧ್ಯಾನದಿಂದ ಚಿ । ರಂತನಬದ್ಧಕರ್ಮಗಳಾ ॥
ಅಂತರಿಸದೆ ಸುಡುವುದು ತಾನೆ ನಿರ್ಜರೆ । ಯೆಂತೆಂದರದನಿನ್ನು ಕೇಳು ॥ ೨೦ ॥

ಹೊಸತಾಗಿ ಬರ್ಪುದ ತಡೆವುದೆ ಸಂವರೆ । ಕಿಸುರದೆ ಹಳೆಯ ಕರ್ಮಗಳಾ ॥
ಕುಸಿಗುಟ್ಟುವುದೆ ತಾನೆ ನಿರ್ಜರೆ ಭೇದ ಭಾ । ವಿಸಲಿಷ್ಟೆಯೆರಡುತತ್ತ್ವದೊಳು ॥ ೨೧ ॥

ಪರಮಾಣುಮಾತ್ರವಾದರು ಸ್ನೇಹ ಕೋಪವ । ಬೆರಸದೆಯೇಕಾಕಿಯಾಗಿ ॥
ಪರಮಹಂಸನ ನೋಡುತಿರ್ದರೆ ಕರ್ಮ ನಿ । ರ್ಜರಿಸಿ ಹೋಗುವುದಾವ ಗಹನಾ ॥ ೨೨ ॥

ಉಪವಾಸ ಮೊದಲಾದ ದಂಡನೆಗೊಡಲಿತ್ತು । ಉಪಶಾಂತಿಧೈರ್ಯವ ಧರಿಸಿ ॥
ವಪುವಿನೊಳಿರ್ದ ಶುದ್ಧಾತ್ಮನ ಕಂಡರೆ । ಕ್ಷಪಿಸಿ ಹೋಗವೆ ಕರ್ಮವೆಲ್ಲ ॥ ೨೩ ॥

ಪಾಕನಿರ್ಜರೆ ಕೃತಪಾಕನಿರ್ಜರೆಯೆಂದು । ದ್ವೈಕಲ್ಪವಾಗಿರುತಿಹುವು ॥
ಪಾಕನಿರ್ಜರೆಯುಂಟು ಸರ್ವರೊಳೀ ಕೃತ । ಪಾಕನಿರ್ಜರೆ ಮುನಿಗಳಿಗೆ ॥ ೨೪ ॥

ತನಗೆ ತಾನುದಯಿಸಿ ನಿಚ್ಚಲು ಸೋರ್ವ ವ । ರ್ತನೆ ಪಾಕನಿರ್ಜರೆ ಮತ್ತೆ ॥
ತನುವ ದಂಡಿಸುತುದಯಕೆ ತಂದರಾ ಕರ್ಮ । ಹನಿತು ಹೋಹುದೆ ಕೃತಪಾಕಾ ॥ ೨೫ ॥

ಪಣ್ಣಾಗಿ ತಾನೆ ಸೋರ್ವಂತೆ ಮತ್ತೊಂದೊತ್ತು । ವಣ್ಣಮಾಡಿದರೆ ಸೋರ್ವಂತೆ ॥
ಬಣ್ಣಗೆಟ್ಟೆತ್ತೆರನಾಗಿ ಕರ್ಮಗಳೆಂಬ । ಮಣ್ಣು ಕರಗಿ ಸೋರುತಿಹುದು ॥ ೨೬ ॥

ಬಿಡದೆ ಸಂವರೆಗೂಡಿ ನಡೆದ ನಿರ್ಜರೆ ಮೋಕ್ಷ । ದೆಡೆಗೊಯ್ವುದಾ ಸಂವರೆಯಾ ॥
ತಡಹದೆ ಮಾಡಿದ ನಿರ್ಜರೆ ಭವವೆಂಬ । ಕಡಲೊಳು ತೊಳಲಿಸುತಿಹುದು ॥ ೨೭ ॥

ಧ್ಯಾನದೊಳನುದಿನ ನೋಡಬೇಕಾತ್ಮನ । ಧ್ಯಾನ ಕೂಡದ ಸಮಯದೊಳು ॥
ಧ್ಯಾನಿಸುತ ಮುನ್ನ ಕಂಡುದ ನೆನೆವುತ । ಮೌನದೊಳಿರಬೇಕು ಯೋಗಿ ॥ ೨೮ ॥

ಧ್ಯಾನಿಸುತಿರ್ದಪ್ಪ ವೇಳೆ ನಿರ್ಜರಿಸಿಯಾ । ಧ್ಯಾನವಿಲ್ಲದಾ ವೇಳೆಯೊಳು ॥
ಧ್ಯಾನಶಾಸ್ತ್ರವ ಬಿಟ್ಟು ಬೇರೊಂದ ನೆನೆದರೆ । ಆನೆಯ ಮೀಹವೆಂತಂತೆ ॥ ೨೯ ॥

ತನುವಚನಗಳೊಮ್ಮೆ ಸಂಚಲವಾದರು । ನೆನಹಾತ್ಮನೊಳಗಿರಬೇಕು ॥
ನೆನಹಾತ್ಮನೊಳಗಿರೆ ರಾಗರೋಷಗಳಿಲ್ಲ । ವನಘಸಂವರೆಯಿದು ಭವ್ಯಾ ॥ ೩೦ ॥

ಒಂದೆಸೆಯೊಳು ಕರ್ಮ ಬರುತಿಹುದಾತ್ಮಗೆ । ಒಂದೆಸೆಯೊಳು ಹೋಗುತಿಹುದು ॥
ಬಂದ ಕರ್ಮವ ಕಟ್ಟುತಿದ್ದ ಕರ್ಮವ ಬಿಡು । ತೆಂದೆಂದು ಕರ್ಮದೊಳಿಹನು ॥ ೩೧ ॥

ಬಪ್ಪ ಕರ್ಮವ ತಡೆದಿದ್ದ ಕರ್ಮವ ಮೆಟ್ಟಿ । ಸೊಪ್ಪುಗುಟ್ಟಿದನಾದರಾತ್ಮಾ ॥
ತೆಪ್ಪಗೆ ಮುಕ್ತಿಯೊಳಿರ್ಪನಾ ದಾರಿಯ । ನೆಪ್ಪ ಕಾಣದೆ ಸುತ್ತುತಿಹನು ॥ ೩೨ ॥

ಬಳಸಿ ಬಪ್ಪುದಕವ ತಡೆದು ಹಳ್ಳದ ನೀರ । ತುಳುಕಿದರಲ್ಲಿ ಬಿದ್ದಿರ್ದ ॥
ಲುಳಿ ಕೈಗೆ ಸಾರ್ವಂತೆ ಸಂವರೆನಿರ್ಜರೆ । ಗಳು ಕೂಡಲಹುದಾತ್ಮಸಿದ್ಧಿ ॥ ೮೩ ॥
ಕಿಲುಬಾದ ಕನ್ನಡಿಯನು ಬೆಳಗಿದರದು । ಹೊಳಹುದೋರುತ ಮೆರೆವಂತೆ ॥
ಕಲಿಲದುರ್ಲೇಪವ ಸುಧ್ಯಾನದಿಂದೊತ್ತಿ । ತೊಲಗಿಸಿದರೆ ಶುದ್ಧರಹರು ॥ ೮೪ ॥

ನಿರ್ಜರೆಯೆಂದೆಂಬ ತತ್ತ್ವವಿದಾತ್ಮನು । ಪಾರ್ಜಿಸಿದೆಂಟುಕರ್ಮಗಳಾ ॥
ನಿರ್ಜರೆಮಾಡಿ ತಾ ತನ್ನಂತೆ ನಿಲುವುದು । ನಿರ್ಜಿತಮೋಕ್ಷ ನಿಶ್ಚಯಿಸು ॥ ೮೫ ॥
ಕಿರಿಕಿರಿದಾಗಿ ಕರ್ಮದ ಪಿಂಡ ಜರಿವುದ । ಕುರಿತು ನಿರ್ಜರೆಯೆಂಬ ನಾಮಾ ॥
ಹರುಪಟ್ಟು ಕರ್ಮವೆಲ್ಲವು ಹೋಗಲದು ತಾನೆ । ನೆರೆ ಮೋಕ್ಷ ನಿರ್ಧರಿಸಾತ್ಮಾ ॥ ೮೬ ॥
ಘಾತಿಕರ್ಮಗಳೊಮ್ಮೆ ಕೆಟ್ಟು ಕೆಲಬರಿಗ । ಘಾತಿಗಳಳಿವುವು ಮತ್ತೆ ॥
ಘಾತಿಯಘಾತಿಯ ಕೆಲಬರೊಂದೆ ಬಾರಿ । ಘಾತಿಸಿ ಮುಕ್ತಿಗೆಯ್ದುವರು ॥ ೮೭ ॥
ಗಳಿ ದಾರವಂದ ಕಿಕ್ಕಿರಿ ಪೂರ್ಣವೀ ನಾಲ್ಕು । ಕಳೆಗಳ ಮಾಳ್ಪರು ಕೆಲರು ॥
ಕೆಲರು ಸಮುದ್ಘಾತ ನಾಲ್ಕನು ಮಾಡದೆ । ಘಳಿಲನೆ ಮುಕ್ತಿಗೆಯ್ದುವರು ॥ ೮೮ ॥
ತ್ರಿಶರೀರಗಳೆಂಬ ಸೆರೆಮನೆಗಳ ಸುಟ್ಟು । ವಶಮಾಡಿಕೊಂಡೆಂಟುಗುಣವಾ ॥
ವಶವಲ್ಲದಮೃತಲೋಕವನೊಂದೆ ಸಮಯದೊ । ಳಶರೀರಾತ್ಮನೆಯ್ದುವನು ॥ ೮೯ ॥
ಭೂಲೋಕಕಾ ಸಿದ್ಧಲೋಕವೆಂಬುದು ಮೇಲೆ । ಯೇಳುರಜ್ಜುವಿನುದ್ದವದನು ॥
ಲೀಲಾಮಾತ್ರದಿಂದೇಕಸಮಯಕೆ ನಿ । ರಾಲಾತ್ಮನೆಯ್ದುವನಾತ್ಮಾ ॥ ೯೦ ॥
ಕಾಯ ಮೂರಳಿದರೆ ಜಗದಗ್ರಕಾತ್ಮ ನಿ । ರಾಯಾಸದಿಂದ ಲಂಘಿಪನು ॥
ಕಾಯೊಣಗಿದರೊಡೆವೇರಂಡಬೀಜನಿ । ಕಾಯ ಮೇಲಕೆ ಸಿಡಿವಂತೆ ॥ ೯೧ ॥
ಮೇಲಣ ವಾಯುವಲಯದೊಳು ನಿಲ್ಪರು । ಮೇಲಕೆ ಗಮಿಸರೇಕೆನಲು ॥
ಗಾಳಿಯ ಹೊರಗಿಲ್ಲ ಧರ್ಮಾಸ್ತಿಕಾಯವಾ । ಗಾಳಿಯೊಳಿಹರದರಿಂದ ॥ ೯೨ ॥
ಕೆಡದ ಸಂಪದವದು ಕೇಡಿಲ್ಲದಾನಂದ । ಕಡೆಗೆಟ್ಟ ಸೊಬಗಿನ ಬದುಕು ॥
ನುಡಿಯಬಾರದು ಚೋದ್ಯವಂತಿರಲದು ಕಟ್ಟ । ಕಡೆಯ ತತ್ತ್ವಾರ್ಥವೇಳರೊಳು ॥ ೯೩ ॥

ಈ ಪರಿ ಸಪ್ತತತ್ತ್ವವನರಿವುದು ಪುಣ್ಯ । ಪಾಪವೆರಡು ಕೂಡಲಲ್ಲಿ ॥
ರೂಪಿನೊಂಭತ್ತುಪದಾರ್ಥಗಳವರ ಸ್ವ । ರೂಪವ ಕೇಳಿಲೆ ಭವ್ಯಾ ॥ ೯೪ ॥
ಆಸ್ರವಬಂಧವೆಂಬೆರಡುತತ್ತ್ವದೊಳವು । ಮಿಶ್ರಗಳಾಗಿರುತಿಹುವು ॥
ಆಸ್ರವದೊಳು ಪುಣ್ಯಪಾಪಗಳುಂಟು ಬಂ । ಧಶ್ರೇಣಿಗಘಪುಣ್ಯವುಂಟು ॥ ೯೫ ॥
ಗುರು ದೇವ ಶಾಸ್ತ್ರಚಿಂತನೆ ಪೂಜೆಗಾಗಿ ಸಂ । ಚರಿಪ ಯೋಗಗಳು ಪುಣ್ಯಗಳು ॥
ಸುರೆ ಜೂಜು ಬೇಟೆ ಮುಂತಾದುವಕಾಗಿ ಸಂ । ಚರಿಪ ಯೋಗಗಳು ಪಾಪಗಳು ॥ ೯೬ ॥

ತೀರ್ಥವಂದನೆ ನೋಂಪು ಜಪ ದೇವತಾವಂದ । ನಾರ್ಥವೆಲ್ಲವು ಪುಣ್ಯಯೋಗಾ ॥
ವ್ಯರ್ಥದುದ್ಯೋಗಕೆ ಜಾರಚೋರರ ಕಥೆ । ಗರ್ಥಿಸೆ ಪಾಪಯೋಗಗಳು ॥ ೯೭ ॥

ಪುಣ್ಯವರ್ತನೆಗಾಗಿ ಮಾಳ್ಪ ಯೋಗಗಳೆಲ್ಲ । ಪುಣ್ಯದಾಸ್ರವಗಳು ಮತ್ತೆ ॥
ಪುಣ್ಯವಲ್ಲದ ಕೃತ್ಯಕಾದ ಯೋಗಗಳು ನಿ । ರ್ಗಣ್ಯಪಾಪಾಸ್ರವವಲ್ತೆ ॥ ೯೮ ॥

ರಾಗರೋಷಗಳೆಂದು ಮೋಹವೆಂದಿವರ ಸಂ । ಯೋಗದಿಂದಹುದೆಲ್ಲ ಬಂಧಾ ॥
ರಾಗಮೋಹಕೆ ಪುಣ್ಯಪಾಪಗಳೆರಡುಂಟು । ಮೇಗೆ ಕೋಪಕೆ ಪಾಪವೊಂದೆ ॥ ೯೯ ॥

ದೇವತಪಸು ಶಾಸ್ತ್ರ ಭಕ್ತಿ ಸದ್ಗುಣ ವಿನ । ಯಾವಳಿ ಪುಣ್ಯಬಂಧಗಳು ॥
ಭಾವಕಿ ಧನ ಕನಕದ ಮೇಲಣ ಸ್ನೇಹ । ಭಾವ ತಾನೆ ಪಾಪಬಂಧಾ ॥ ೧೦೦ ॥

ವ್ರತದಾನಜಪತಪಗಳು ಸಂಘದೊಳು ಮಾಡು । ವತಿಮಮತೆಯೆ ಪುಣ್ಯಬಂಧಾ ॥
ಅತಿಕಾಂಕ್ಷೆ ಕೊಲೆ ಪುಸಿ ಕಳವು ಪಾದರದಲ್ಲಿ । ರತಿಮಾಡಲದು ಪಾಪಬಂಧಾ ॥ ೧೦೧ ॥

ತನಗೆ ತಾನಲ್ಲದೆ ಮತ್ತೊಂದು ವಸ್ತುವ । ತನಗೆಂದು ಪಿಡಿವುದೆ ಮೋಹಾ ॥
ಮುನಿದೇವಶಾಸ್ತ್ರಗಳೆನ್ನವೆಂದರೆ ಪುಣ್ಯ । ತನು ನನ್ನದೆಂದರೆ ಪಾಪಾ ॥ ೧೦೨ ॥

ಪ್ರತಿಮೆ ಪುಸ್ತಕ ಜಪಸರ ನನ್ನವೆಂದೆಂಬ । ನುತಮೋಹವದು ಪುಣ್ಯಬಂಧಾ ॥
ಕ್ಷಿತಿ ಹೇಮ ನಾರಿ ಮುಂತಾದುವ ನನ್ನವೆಂ । ಬತಿಮೋಹ ಪಾಪಬಂಧವದು ॥ ೧೦೩ ॥

ಮೋಹಕೆ ಮಿಥ್ಯಾತ್ವವೆಂಬರ್ಥವುಂಟೊಮ್ಮೆ । ಮೋಹವಜ್ಞಾನವೆಂದಹುದು ॥
ಆ ಹದನಾಗಮಭಾಷೆಯಧ್ಯಾತ್ಮದೊ । ಳೀ ಹದನೆಲೆ ರವಿಕೀರ್ತಿ ॥ ೧೦೪ ॥

ಸ್ನೇಹಮೋಹಗಳಿಂತು ಪುಣ್ಯಪಾಪಕೆ ಜನ್ಮ । ಗೇಹಂಗಳಾದುವಾ ಕೋಪಾ ॥
ಕಾಹೇರಿ ಸುಡುತಿಹುದದರೊಳು ಪಾಪವೆ । ರಾಹುವಿನಂತಿರುತಿಹುದು ॥ ೧೦೫ ॥

ಧರ್ಮಾರ್ಥಕಾಗಲಿ ಭೋಗಾರ್ಥಕಾಗಲಿ । ದುರ್ಮುಖರಾಗಿ ಕೋಪಿಸಲಿ ॥
ಧರ್ಮಭೋಗಗಳು ವಿಭೂತಿಯುಹವು ಪಾಪ । ಕರ್ಮವೆ ಬಂದು ಕಟ್ಟುವುದು ॥ ೧೦೬ ॥

ದುರ್ಗತಿತಿರಿಯಂಚಗತಿಗೆಳೆವುದು ಪಾಪ । ಸ್ವರ್ಗಕೆ ಪುಣ್ಯವೆತ್ತುವುದು ॥
ವರ್ಗದೊಳೆರಡೊಂದುಗೂಡಿ ಮಾನವನೆಂಬ । ಮಾರ್ಗಕೆ ತಹುವು ಹಂಸನನು ॥ ೧೦೭ ॥

ಪಾಪಪುಣ್ಯಗಳಿವು ಲೇಪವಲ್ಲದೆ ತನ್ನ । ರೂಪಲ್ಲ ಶುದ್ಧಹಂಸನಿಗೆ ॥
ಆ ಪೂರ್ವಕರ್ಮಗಳೆಂಟರೊಳಡಗಿ ನಾ । ನಾಪರಿ ಮಾಳ್ಪವಾತ್ಮನನು ॥ ೧೦೮ ॥

ಸೊಬಗುಮಾಡುವುವೊಮ್ಮೆ ವಿಕೃತಿಮಾಡುವುವೊಮ್ಮೆ । ಹೆಬಗನೆನಿಸಿ ಜಾಣನೆನಿಸಿ ॥
ವಿಬುಧ ನಾರಕ ನರ ತಿರಿಯಂಚನೆನಿಸುತ । ಪ್ರಬಲಹಂಸನ ಕಾಡುತಿಹುವು ॥ ೧೦೯ ॥

ಕ್ರೂರನೆನಿಸಿ ಶಾಂತನೆನಿಸಿ ಮತ್ತೊಮ್ಮೊಮ್ಮೆ । ವೀರನೆನಿಸಿ ಹೇಡಿಯೆನಿಸಿ ॥
ನಾರಿಯೆನಿಸಿ ನಲ್ಲನೆನಿಸಿ ಹಂಸನ ಬಹು । ಚಾರಿಮಾಡುವುವು ಕರ್ಮಗಳು ॥ ೧೧೦ ॥

ಮೋಣ ತಿದ್ದಿದ ರೂಪಿಗಡಗಿ ಬಹಂತೆ ಕುಂ । ದಾಣ ಬಹಂತೆ ಭೂಷಣಕೆ ॥
ಕ್ಷೀಣಕರ್ಮಗಳ ಕೈಮಾಟಕೆ ಬಂದು ನಿ । ತ್ರಾಣಿಯಾಗಿರುತಿಹನಾತ್ಮಾ ॥ ೧೧೧ ॥

ಅಶುಭಕರ್ಮಕೆ ಶುಭಕರ್ಮಕೆ ಸರ್ವರು । ವಶರಾಗಿ ಭವಬಡುತಿಹರು ॥
ಅಶುಭಕರ್ಮವ ಶುಭಕರ್ಮವ ಸುಟ್ಟಾಗ । ಕುಶಲದೊಳಿಹರು ಮುಕ್ತಿಯೊಳು ॥ ೧೧೨ ॥

ಸುಕೃತದುಷ್ಕೃತಗಳೆಂಬೆರಡುಪದಾರ್ಥಗ । ಳಕೃತೋಪಕಾರಿಗಳವರ ॥
ಪ್ರಕೃತಿಯುರಿದು ಸರಿಗಂಡು ಬಿಟ್ಟವರಿಗೆ । ವಿಕೃತಿಯುಳಿದು ಮುಕ್ತಿಯುಹುದು ॥ ೧೧೩ ॥

ಹೊನ್ನ ಸಂಕಲೆಯೊಂದು ಲೋಹಸಂಕಲೆಯೊಂದು । ತನ್ನ ಕಾಲಿಗೆ ತೊಡಕಲ್ತೆ ॥
ಬೆನ್ನಟ್ಟ ಪುಣ್ಯಪಾಪಗಳೆರಡಾತ್ಮನ । ಬನ್ನಬಡಿಪುವೈಸೆ ಸುಖವೆ ॥ ೧೧೪ ॥

ಜೀವಪುದ್ಗಲಗಳೆಂಬೆರಡರ ಸಂಸರ್ಗ । ಭಾವದೊಳೇಳು ಹುಟ್ಟಿದುವು ॥
ತಾವು ಲೆಕ್ಕಿಸಿದರೊಂಭತ್ತುಪದಾರ್ಥವೆಂ । ದಾವರಿಸಿದುವಲ್ತೆ ಭವ್ಯಾ ॥ ೧೧೫ ॥

ಸಪ್ತತತ್ತ್ವಾರ್ಥದೊಂಭತ್ತುಪದಾರ್ಥದ । ವ್ಯಾಪ್ತಿ ಮುಗಿದುದಿಲ್ಲಿಗವರ ॥
ಪ್ರಾಪ್ತಿಯೊಳಗೆ ಹೇಯವೆಂದುಂಟುಪಾದೇಯ । ತೃಪ್ತಿಯೆಂದುಂಟಿನ್ನು ಕೇಳು ॥ ೧೧೬ ॥

ನಿರ್ಜೀವ ಪುಣ್ಯಪಾಪಾಸ್ರವಬಂಧವ । ವರ್ಜಿಸು ಹೇಯಗಳೆಂದು ॥
ನಿರ್ಜರೆ ಸಂವರೆ ಜೀವ ಮೋಕ್ಷಗಳನು । ಪಾರ್ಜಿಸುಪಾದೇಯವೆಂದು ॥ ೧೧೭ ॥

ಜೀವಾಸ್ತಿಕಾಯ ಜೀವ ಸುವಸ್ತು ಜೀವ ತ । ತ್ತ್ವವಾಸ ಜೀವ ಪದಾರ್ಥಾ ॥
ಜೀವನುಪಾದೇಯವುಳಿದುವು ಹೇಯ ಶಾ । ಸ್ತ್ರಾವಗವ್ಯಕೆ ಫಲವಿಷ್ಟೆ ॥ ೧೧೮ ॥

ನೆಲವನಗೆದು ರಾಶಿಮಾಡಿ ಶೋಧಿಸಿ ಮಣ್ಣಿ । ನೊಳು ಚಿನ್ನವೊಂದನೆ ಹಿಡಿವಾ ॥
ಛಲಗಾರನಂತಾರುವಸ್ತುವನರಿದಾತ್ಮ । ಕಲೆಯ ಪಿಡಿವುದೀಗ ಕಾರ್ಯಾ ॥ ೧೧೯ ॥

ಆಸ್ರವಬಂಧಗಳಿಂದ ಸಂಸಾರಪ । ರಿಶ್ರಮವಾದುದಾತ್ಮರಿಗೆ ॥
ಆಸ್ರವಬಂಧವ ಬಿಟ್ಟು ಸಂವರೆನಿರ್ಜ । ರಾಶ್ರಿತರಾದರೆ ಮುಕ್ತಿ ॥ ೧೨೦ ॥

ಕ್ಷಮೆಯೆ ಕೋಪಕೆ ವೈರಿ ನಿಸ್ಸಂಗಭಾವನೆ । ಭ್ರಮಿತಮೋಹಕೆ ವೈರಿ ಮತ್ತೆ ॥
ಮಮಕಾರಕೆ ವೈರಿ ಪರಮವಿರಕ್ತಿ ಸಂ । ಯಮಿಗಿವು ನಿಲೆ ಬಂಧವುಂಟೆ ॥ ೧೨೧ ॥

ಮೊದಲೊಮ್ಮೆ ಪಾಪಕೃತ್ಯವ ಬಿಟ್ಟು ಪುಣ್ಯಕೃ । ತ್ಯದೊಳು ನಿಲ್ವುದು ನಿಂದ ಮೇಲೆ ॥
ಅದನು ಸುಧ್ಯಾನದೊಳಗೆ ನಿಂದು ಬಿಟ್ಟು ಮಾ । ಳ್ಪುದು ಧ್ಯಾನವನೆ ಮುಕ್ತಿಯುಹುದು ॥ ೧೨೨ ॥

ಆರುವಸ್ತುವೆ ಕಾಯ ತತ್ತ್ವಪದಾರ್ಥವೆಂ । ದೇರಲಂತವರ ಲಕ್ಷಣವಾ ॥
ತೋರಿದೆವಿಲ್ಲಿಗೆ ಮುಗಿದುದು ಕೇಳಿನ್ನು । ತೋರುವೆವಾತ್ಮಸಿದ್ಧಿಯನು ॥ ೧೨೩ ॥

ತತ್ತ್ವಪದಾರ್ಥವ ಸೂಚಿಸಿ ಮೋಕ್ಷಗ । ತಿತ್ವರಿತರಿಗಾದಿಜಿನನು ॥
ತತ್ತ್ವದೊಳಾತ್ಮಸಿದ್ಧಿಯ ತೊಡಗಿದನಿದು । **ತತ್ತ್ವಾರ್ಥಸಂಧಿ** ಸುಗಂಧಿ ॥ ೧೨೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೫ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ಸೇವುದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೬ ॥

ವಿಮಲಲೋಚನ ವಿಮಲಾಕರ ವಿಮಲಾಂಗ । ವಿಮಲಪೂರುಷ ವಿಮಲಾತ್ಮಾ ॥
ವಿಮಲದೊಳೆನ್ನಂತರಂಗದೊಳಿರು ಲೋಕ । ವಿಮಲ ಚಿದಂಬರಪುರುಷಾ ॥ ೧೨೭ ॥

ತತ್ತ್ವಾರ್ಥಸಂಧಿ ಸಂಪೂರ್ಣಂ

## ಮೋಕ್ಷಮಾರ್ಗಸಂಧಿ

ಮೋಕ್ಷಮಾರ್ಗನೆ ಮೋಕ್ಷಕಾರಣ ಸಾಕ್ಷಾ । ನ್ಮೋಕ್ಷರೂಪನೆ ಮೋಕ್ಷಸುಖನೆ ॥
ಮೋಕ್ಷಸಂಪದನೆ ಸನ್ನುತಿದೋರು ಮನ್ಮನೋ । ರಕ್ಷ ನಿರಂಜನಸಿದ್ಧಾ ॥ ೧ ॥

ತಿಳುಹಿ ಮೊದಲು ವಿಶ್ವವಸ್ತುಪ್ರಪಂಚವ । ಬಳಿಕಾತ್ಮಸಿದ್ಧಿಸಾಧನವಾ ॥
ತಿಳುಹಿದನಾ ಕುವರರಿಗಾದಿನಾಥನು । ತಿಳಿವು ಸಾಮಾನ್ಯವೆ ಜಗಕೆ ॥ ೨ ॥

ಪರಮಾತ್ಮಸಿದ್ಧಿಯ ಕೇಳೆಲೆ ಭವ್ಯ ನಾ । ಪೊರೆದೇಳುತತ್ತ್ವವ ನಂಬಿ ॥
ಸರಳವಾಗರಿದು ಸುವ್ರತವಾಂತು ನಡೆವ ಭ । ವ್ಯರಿಗಹುದದು ಕ್ರಮದಿಂದ ॥ ೩ ॥

ನಂಬುಗೆಗರಿಕೆಗೆ ನಡೆಗೆ ರತ್ನತ್ರಯ । ವೆಂಬುದೊಂದುಪಮಾನನಾಮಾ ॥
ನಂಬಿರೀ ತತ್ತ್ವವ ವ್ರತದೊಳಾಚರಿಸಿ ಪೊ । ಲಂಬುದೋರುವುದಾತ್ಮಸಿದ್ಧಿ ॥ ೪ ॥

ಆ ರತ್ನಗಳಿಗಿನ್ನು ಭೇದಾಭೇದವಿ । ಚಾರವೆಂದಿತ್ತೆರನುಂಟು ॥
ಕಾರಣವೊಂದಲ್ಲಿ ಕಾರ್ಯವೊಂದವು ವ್ಯವ । ಹಾರನಿಶ್ಚಯಗಳೆನಿಪುವು ॥ ೫ ॥

ನವ ಸಪ್ತ ಪಂಚ ಷಡ್ವಿಧವಾಗಿ ಭಿನ್ನವ । ಸ್ತುವನರಿದುರೆ ನಂಬಿ ವ್ರತದ ॥
ಸುವಿಕಲ್ಪದೊಳಗಿರೆ ಭೇದರತ್ನತ್ರಯ । ವ್ಯವಹಾರವೆಂದರು ತಾನೆ ॥ ೬ ॥

ಪರವಸ್ತುಚಿಂತೆಯ ಬಿಟ್ಟು ತನ್ನಾತ್ಮನ । ಪರಿಯನರಿದು ನಂಬಿ ಮನವಾ ॥
ಬೆರಸಲಾತ್ಮನೊಳಾಗಭೇದರತ್ನತ್ರಯ । ದಿರವದು ತಾನೆ ನಿಶ್ಚಯವು ॥ ೭ ॥

ತನ್ನಿಂದ ಬೇರಾದ ವಸ್ತುವ ತಟ್ಟಲು । ಭಿನ್ನರತ್ನತ್ರಯವಾಯ್ತು ॥
ಭಿನ್ನವಿಲ್ಲದೆ ತಾನೆ ತನ್ನ ತಟ್ಟಿರಲು ನಿ । ರ್ಭಿನ್ನರತ್ನತ್ರಯವಲ್ತೆ ॥ ೮ ॥

ಮೊದಲೊಮ್ಮೆ ವ್ಯವಹಾರಮಾರ್ಗದೊಳಾಚರಿ । ಪುದು ವ್ಯವಹಾರದೊಳಿರ್ದು ॥
ಪದವಿಟ್ಟು ನಿಶ್ಚಯಾರ್ಥವನು ಸಾಧಿಸಿ ನಿಚ್ಚ । ಲದರೊಳಿರಲು ಸಿದ್ಧಿಯಹುದು ॥ ೯ ॥

ವ್ಯವಹಾರದಿಂದ ನಿಶ್ಚಯವ ಸಾಧಿಸುವುದು । ಸುವಿಶುದ್ಧನಿಶ್ಚಯದಿಂದ ॥
ಪ್ರವರಾತ್ಮಸಿದ್ಧಿಯ ಸಾಧಿಸಬೇಕೆಲೆ । ರವಿಕೀರ್ತಿಯದು ಕ್ರಮಯೋಗಾ ॥ ೧೦ ॥

ಚಿತ್ತವೆಂಬುದು ಗಾಳಿಯಂತೆ ಚಂಚಲವದು । ಸುತ್ತುತಿಹುದು ಕಂಡಕಡೆಗೆ ॥
ಒತ್ತಿ ತತ್ತ್ವಗಳಲ್ಲಿ ತಿರುಗಿಸಿ ತಂದದ । ಮತ್ತೆ ತನ್ನೊಳಗಿಡಬೇಕು ॥ ೧೧ ॥

ಹರಿಯಬಿಟ್ಟರೆ ಹರಿವುದು ಬೇಡವೆಂದರೆ । ಹರಿಯುದು ಮನಕದು ಸಹಜಾ ॥
ಹರಿವ ಚಿತ್ತವ ತತ್ತ್ವದೊಳು ತೊಳಲಿಸಿ ತಂದು । ಸ್ಥಿರಮಾಡಬೇಕು ತನ್ನೊಳಗೆ ॥ ೧೨ ॥

ತಪಸುಮಾಡಿದರೇನು ಶ್ರುತವನೋದಿದರೇನು । ಚಪಲಚಿತ್ತವ ಕಟ್ಟದನಕ ॥
ಚಪಲಚಿತ್ತವ ಕಟ್ಟಿ ತನ್ನೊಳಿಟ್ಟವನೀಗ । ತಪಸಿ ಮತ್ತವನೆ ಶಾಸ್ತ್ರಜ್ಞಾ ॥ ೧೩ ॥

ಮನದ ವಿಕಲ್ಪವಿಂದ್ರಿಯದ ಕಷಾಯವ । ಜನಿಯಿಪುದೊಡನೆ ಮಾಸುವುದು ॥
ತನುವಲುಗುವುದು ಬಂಧಾಸ್ರವವಹುದಾಗಿ । ಮನ ತಾನೆ ಮನೆ ಕರ್ಮಗಳಿಗೆ ॥ ೧೪ ॥

ಮನವಾತ್ಮನೊಳು ನಿಲ್ಲದೊಂದೊಂದು ವಸ್ತುವ । ನೆನೆಯೆ ನೂತನಕರ್ಮವಹುದು ॥
ಮನವಾತ್ಮನೊಳು ನಿಂದರಾಗಳೆ ಕರ್ಮ ಜು । ವ್ಮನೆ ಜಾರುವುದು ತನ್ನ ತಾನೆ ॥ ೧೫ ॥

ದುರ್ಮನ ಕಂಡಕಡೆಗೆ ಹರಿದರೆ ಕೂಡೆ । ಕರ್ಮಗಳಹುವದರಿಂದ ॥
ಕರ್ಮವೆಂಟಹುವದು ಸಂಸಾರವದರಿಂದ । ದುರ್ಮನವನೆ ಗೆಲ್ಲಬೇಕು ॥ ೧೬ ॥

ಅರಸಕಟ್ಟಿದರಾಟವಿಲ್ಲವೆಂಬಂತೆ ಸಂ । ಚರಿಸುವ ಮನವ ಕಟ್ಟಿದರೆ ॥
ಬರವಿಲ್ಲ ಬಂಧವಿಲ್ಲೆಂಟುಕರ್ಮಕ್ಕೆ ಸಂ । ವರೆಯಾಯ್ತು ನಿರ್ಜರೆಯಾಯ್ತು ॥ ೧೭ ॥

ಪ್ರಾಣಾವಾದಪೂರ್ವೆಯನೋದಿ ದಶವಾಯು । ಶ್ರೇಣಿಯ ಜಯಿಸಿ ಕೆಲಬರು ॥
ಏಣನಂತೇಳ್ವ ಚಿತ್ತವ ತಡೆದಾತ್ಮನ । ಕಾಣುವರಂತರಂಗದೊಳು ॥ ೧೮ ॥

ಪವನಾಭ್ಯಾಸವಿಲ್ಲದೆ ಕೆಲಬರು ದೇಹ । ಭವನದೊಳಿರ್ದ ಹಂಸನನು ॥
ಅವಿಚಳಮನದಿಂದ ಕಾಣ್ಬರು ಮನದನು । ಭವವೆರಡಂಗವಾಗಿಹುದು ॥ ೧೯ ॥

ಮೃದುಚಿತ್ತವೆಂದು ಕಠಿನಚಿತ್ತವೆಂದುಂಟು । ಮೃದುವಿಗನಿಲಯೋಗ ಬೇಡ ॥
ಮೃದುಗೆಟ್ಟ ಕಠಿನಚಿತ್ತವ ವಾಯುಜಯದಿಂದ । ಮೃದುಮಾಡಿ ಬಗ್ಗಿಸಬೇಕು ॥ ೨೦ ॥

ಬ್ರಹ್ಮಯೋಗದ ಮೂಲವಿದು ಕೇಳು ನಾಭಿಯು । ಜಿಹ್ಮಗನಿಕ್ಕೆಯ ತುಳಿದು ॥
ಬ್ರಹ್ಮರಂಧ್ರಕೆ ವಾಯು ನಡೆದರೆ ಪರಮ । ಬ್ರಹ್ಮ ತೋರುವುದು ತನ್ನೊಳಗೆ ॥ ೨೧ ॥

ಕಲೆ ನಾದ ಬಿಂದುವೆಂದುಂಟವನಾ ಶಸ್ತ್ರ । ದೊಳು ನೋಡಿಕೊಂಬುದಂತಿರಲಿ ॥
ಹಲವು ತಂತ್ರಗಳಿಂದ ಮನವ ತಡೆದು ಹಂಸ । ನೊಳು ನಿಂದರಹುದಾತ್ಮಸಿದ್ಧಿ ॥ ೨೨ ॥

ಧ್ಯಾನದಿಂದಲ್ಲದೆ ಕರ್ಮ ನಿರ್ಜರಿಸದಾ । ಧ್ಯಾನ ತಾನೆಂತುಟೆಂದೆನಲು ॥
ನಾನಾಚಿಂತೆಯುಳಿದು ಮನವಾತ್ಮಸಂ । ಧಾನದೊಳಿರಲದೆ ಧ್ಯಾನಾ ॥ ೨೩ ॥

ನುಡಿ ನಡೆ ನೋಟ ಮೈಯಾಟವಳಿದು ಲೆಪ್ಪ । ದೊಡಲ ಪುತ್ತಳಿಯಂತೆ ಕುಳಿತು ॥
ಮಿಡುಕುವ ಮನವನಾತ್ಮನೊಳಡಗಿಸಲದು । ನುಡಿವರೆಲ್ಲರು ಧ್ಯಾನವೆಂದು ॥ ೨೪ ॥

ಹಲವ ಚಿಂತಿಸುವುದು ಸ್ವಾಧ್ಯಾಯ ಮನವೊಂದ । ರೊಳೆ ನೆಲಸಿರಲದು ಧ್ಯಾನಾ ॥
ಇಳೆಯೊಳಿನ್ನಾ ಧ್ಯಾನ ಧರ್ಮವೆಂದುಂಟು ನಿ । ರ್ಮಲಶುಕ್ಲವೆಂದುಂಟು ಕೇಳು ॥ ೨೫ ॥

ಕಣ್ಮುಚ್ಚಿ ನೋಡಿದರೊಳಗಾತ್ಮ ನಸುಕಾಂತಿ । ಪೊಣ್ಮಿ ತೋರುತ ಶೂನ್ಯವಡುತ ॥
ಜಾಣ್ಮೆದೋರುತ ನಸುಸುಖದೋರುತಿರಲದು । ನುಷ್ಮಾತಿನೊಳು ಧರ್ಮವಹುದು ॥ ೨೬ ॥

ಒಮ್ಮೆ ಮೈತುಂಬಿ ಪ್ರಕಾಶ ತೋರುವುದು ಮ । ತ್ತೊಮ್ಮೆ ಮುಖದೊಳೆದೆಯೊಳು ॥
ಜುಮ್ಮದಬ್ಬುತ ಪ್ರಭೆ ಬಿಂಬಿಸುವುದು ಪರ । ಬೊಮ್ಮದ ಬೀಜಧರ್ಮವದು ॥ ೨೭ ॥

ದಿನದಿನಕಾ ಪ್ರಭೆ ಹೆಚ್ಚುವುದೊಯ್ಯನೊ । ಯ್ಯನೆ ಜಾರುವುದು ಕರ್ಮರಜಸು ॥
ಮನದೊಳು ಸುಜ್ಞಾನ ಗುಡಿಗಟ್ಟುತಿಹುದು ಜು । ಮ್ಮನೆ ಸುಖವೆದೆದಟ್ಟುತಿಹುದು ॥ ೨೮ ॥

ನುಡಿವೆನೆಂದರೆ ಬಾರದಾ ಸುಖ ತಾನುಂಡು । ಕಡುತೃಪ್ತನಾಗಿರಬಹುದು ॥
ನಡೆವ ನುಡಿವ ಜಗದಾಟವೆಲ್ಲಾತಗೆ । ಜಡವಾಗಿ ಕಾಣಿಸುತಿಹುದು ॥ ೨೯ ॥

ಲೋಕವೆಲ್ಲವನಿಗೆ ಹುಚ್ಚನಂತಿಹುದವ । ಲೋಕಕೆ ಹುಚ್ಚನಂತಿಹನು ॥
ವಾಕು ಮುದ್ರಿಸುವುದೊವ್ಮೊಮ್ಮೆ ನುಡಿದು ಕೂಡೆ । ಮೂಕನಂತಿಹನಾತ್ಮಯೋಗಿ ॥ ೩೦ ॥

ಏಕಾಂತವನು ಬಯಸುವ ಗೋಷ್ಠಿಗೆಳಸನು । ಏಕಾಂಗಿಯಾಗಿರುತಿಹನು ॥
ಲೋಕದಗ್ರಕೆ ಹೋಹನೊಮ್ಮೆ ತಾ ತನ್ನಾತ್ಮ । ಲೋಕದೊಳಿರುತಿಹನೊಮ್ಮೆ ॥ ೩೧ ॥

ತನ್ನ ತಾನೀಕ್ಷಿಸಿ ತನ್ನ ಸುಖವನುಂಡು । ತನ್ನೊಳು ತಾನುಬ್ಬಿ ನಗುವಾ ॥
ಅನ್ನಿಗರಿಗೆ ಹೇಳನಿವು ಧರ್ಮಯೋಗವ । ಮುನ್ನ ಸಾಧಿಸನ ಚಿಹ್ನಗಳು ॥ ೩೨ ॥

ಆ ಧರ್ಮ ಸಾಧ್ಯವಾದರೆ ಕೇಳ್ವ ಜನಕಿಷ್ಟು । ಬೋಧಿಸುವನು ಭವ್ಯರರಿದು ॥
ಬೋಧೆಯು ಕೇಳ್ವರೆಂಬಾನಂದ ತನಗಿಲ್ಲ । ಬೋಧೆಗೇಳದರೆ ನೋವಿಲ್ಲ ॥ ೩೩ ॥

ಉಂಡು ತೇಗುವನಂತೆ ತಾನಾತ್ಮಯೋಗದೊ । ಳುಂಡ ಸವಿಯು ಕೃತಿವಾಳ್ವಾ ॥
ಕಂಡುದ ತೋರುವಂತೊಳಗೆ ತನ್ನಾತ್ಮನ । ಕಂಡುದನುಸುರಿ ತೋರುವನು ॥ ೩೪ ॥

ಕೆಲಬರಿಂತುಪಕರಿಸುತ ನಡೆವರು ಮತ್ತೆ । ಕೆಲಬರಾ ಗುಂಜನು ಹೊಗರು ॥
ಬಲಿದ ಸಂವರೆಗೂಡಿ ನಿರ್ಜರಿಸುತ ಹೋಹ । ರೆಲೆ ಭವ್ಯ ಧರ್ಮಯೋಗವಿದು ॥ ೩೫ ॥

ಹತ್ತುತೆರನು ನಾಲ್ಕುತೆರನೆಂದು ಧರ್ಮವ । ಬಿತ್ತರಿಪುದು ವ್ಯವಹಾರಾ ॥
ಚಿತ್ತವನಾತ್ಮನೊಳಡಗಿಸೆ ನಿಶ್ಚಯ । ದುತ್ತಮಧರ್ಮಯೋಗವದು ॥ ೩೬ ॥

ಚರ್ಮದೃಷ್ಟಿಯ ಮುಚ್ಚಿ ನೋಡಲಾತ್ಮನು ಸೂರ್ಯ । ಕಾರ್ಮುಗಿಲೆಡೆಯೊಳಿಪ್ಪಂತೆ ॥
ನಿರ್ಮಲದೊಳು ತೋರಿ ಸುಜ್ಞಾನಸುಖಗಳ । ನಿರ್ಮಿಸಲದು ಶುಕ್ಲಯೋಗಾ ॥ ೩೭ ॥

ಅರಿವು ಬೆಳಗು ಸುಖ ಕಿರಿದಾಗಿ ತೋರುತ । ಮರೆಸುತಹುದು ಧರ್ಮಯೋಗಾ ॥
ಅರಿವು ಬೆಳಗು ಸುಖ ಪಿರಿದಾಗಿ ತೋರುತ । ಮರೆಸದಿಹುದು ಶುಕ್ಲಯೋಗಾ ॥ ೩೮ ॥

ಅಂಗದೊಳೆಡೆಗಟ್ಟಿ ಬೆಳಗು ಬಿಂಬಿಸುವ ಬೆ । ಡಂಗು ತಾನದು ಧರ್ಮಯೋಗಾ ॥
ತಿಂಗಳ ಪುತ್ತಳಿಯಂತೆ ತನ್ನಾತ್ಮ ಸ । ರ್ವಾಂಗ ತುಂಬಿರೆ ಶುಕ್ಲಯೋಗಾ ॥ ೩೯ ॥

ಗಾಳಿಯು ಸೊಡರಂತೆ ಕಂಪಿಸುತೊಳಗಾತ್ಮ । ಥಾಳಿಸುತಿರಲದು ಧರ್ಮಾ ॥
ಗಾಳಿದಾಗದ ಸೊಡರಂತೆ ನಿಷ್ಕಂಪದಿ । ಥಾಳಿಸುತಿರಲದು ಶುಕ್ಲಾ ॥ ೪೦ ॥

ಪುರುಷಾಕಾರವಾಗುತ ಹರಿವುತ ಬೆಳ । ಗಿರುತಿರಲದು ಧರ್ಮಯೋಗಾ ॥
ಪುರುಷಾಕಾರ ತಪ್ಪದೆ ಕಾಂತಿ ತನು ತುಂಬಿ । ನೆರೆದಿರಲದು ಶುಕ್ಲಯೋಗಾ ॥ ೪೧ ॥

ಎಳೆವೆರೆ ಬೆಳೆವಂತೆ ಚಿತ್ಕಳೆ ಮೆಲ್ಲನೆ । ಬೆಳೆದು ಬಹುದು ಧರ್ಮಯೋಗಾ ॥
ಎಳೆಸೇಸರದು ನಡುವಗಲಿಗಡರುವಂತೆ । ನಳನಳಿಪುದು ಶುಕ್ಲಯೋಗಾ ॥ ೪೨ ॥

ಮಳೆಯು ನೀರುರ್ವಿಯು ಕೊರೆವಂತೆ ಕರ್ಮಸಂ । ಕುಳವ ನಿರ್ಜರಿಪುದು ಧರ್ಮಾ ॥
ಹೊಳೆಯು ನೀರುರ್ವಿಯು ಕೊರೆವಂತೆ ಕರ್ಮಸಂ । ಕುಳವ ನಿರ್ಜರಿಪುದು ಶುಕ್ಲಾ ॥ ೪೩ ॥

ಮಸೆಗೆಟ್ಟ ಕೊಡಲಿಯು ಹೊಯಿಲಂತೆ ಕರ್ಮವ । ನಸುದರಿವಾಳ್ಪುದು ಧರ್ಮಾ ॥
ಮಸೆಯುಳ್ಳ ಕೊಡಲಿಯ ಹೊಯಿಲಂತೆ ಕರ್ಮವ । ಕುಸುರಿದರಿವುದೀಗ ಶುಕ್ಲಾ ॥ ೪೪ ॥

ಒಂದಲ್ಪಕಾಂತಿ ಮತ್ತೊಂದು ಮಹಾಕಾಂತಿ । ಯೆಂದಿಷ್ಟು ಭೇದಗಳೈಸೆ ॥
ಒಂದಲ್ಲದೆರಡಿಲ್ಲವೇಕೆಂದರವಕಾತ್ಮ । ನೊಂದಲ್ಲದಾಧಾರವಿಲ್ಲ ॥ ೪೫ ॥

ಮರಿಸಿಂಹನೆಂಬರು ನೆರೆಸಿಂಹನೆಂಬರು । ಮರಿ ತಾನೆ ನೆರೆಸಿಂಹವಾಯ್ತು ॥
ನೆರೆವಾಗ ಧರ್ಮ ನೆರೆದ ಮೇಲೆ ಶುಕ್ಲವೆಂ । ದರೆಯಟ್ಟ ಭವಗಜಘಟೆಯಾ ॥ ೪೬ ॥

ವ್ಯಂಜನಾರ್ಥದೊಳೊಂದಿ ನಾಲ್ದೆರನಾಗಿ ವಿ । ಭಂಜಿಸುವುದು ವ್ಯವಹಾರಾ ॥
ಮಾಂಜಿ ವಿಕಲ್ಪವ ಹಂಸನೊಳಿಹುದು ನಿ । ರಂಜನನಿಶ್ಚಯಶುಕ್ಲಾ ॥ ೪೭ ॥

ಬಹುಶಾಸ್ತ್ರಗಲ್ಪಶಾಸ್ತ್ರಗೆ ಶ್ರಾವಕಗೆ ಮುನಿ । ಗಹುದು ಮೊದಲ ಧರ್ಮಯೋಗಾ ॥
ಬಹುವಿದ್ಯಗಲ್ಪವಿದ್ಯಗೆ ಯೋಗಿಗಾ ಶುಕ್ಲ । ವಿಹುದು ಗೃಹಸ್ಥರಿಗಿಲ್ಲ ॥ ೪೮ ॥

ಇಂದುಮೊದಲುಗೊಂಡು ಕಲಿಕಾಲಪರ್ಯಂತ । ಸಂದು ಬಹುದು ಧರ್ಮಯೋಗಾ ॥
ಇಂದುತೊಡಗಿ ಶುಕ್ಲಯೋಗ ನಡೆವುದದು । ಮುಂದಿಲ್ಲ ಕಲಿಕಾಲದೊಳಗೆ ॥ ೪೯ ॥

ವಿಕಲನಿರ್ಜರೆ ಧರ್ಮದಿಂದಹುದಾ ಶುಕ್ಲ । ಸಕಲನಿರ್ಜರೆಯು ಮಾಡುವುದು ॥
ವಿಕಲನಿರ್ಜರೆಯಿಂದ ಸುರಲೋಕಸಂಪದ । ಸಕಲನಿರ್ಜರೆಯಿಂದ ಮೋಕ್ಷಾ ॥ ೫೦ ॥

ಒಂದುಜನ್ಮದೊಳೆ ಧರ್ಮದೊಳಿರ್ದು ಶುಕ್ಲಕೆ । ಬಂದು ಕೆಲರು ಮುಕ್ತರಹರು ॥
ಮುಂದೆ ಹತ್ತದೆ ಧರ್ಮದೊಳಗಿರ್ದು ಸ್ವರ್ಗಕೆ । ಸಂದು ಪಲರು ಬಾಳುತಿಹರು ॥ ೫೧ ॥

ಈ ಕಾಲವಾಕಾಲವೆನಬೇಡ ನಿಶ್ಚಯ । ದೇಕಧರ್ಮವ ಮಾಡಿದವರು ॥
ಲೌಕಾಂತಿಕದಕ್ಷಿಣೇಂದ್ರರೆನಿಸಿ ಪುನ । ರೇಕಜನ್ಮಕೆ ಮುಕ್ತರಹರು ॥ ೫೨ ॥

ವ್ಯವಹಾರಧರ್ಮವ ಮಾಡಿದವರಿಗೊಮ್ಮೆ । ದಿವಿಜಪದವಿ ತಪ್ಪದಹುದು ॥
ಭವನಾಶವಿಷ್ಟೆಂಬ ಮಿತವಿಲ್ಲ ಹಂಸಾನು । ಭವವೊಂದೆ ಅದಕದು ನಿಯಮಾ ॥ ೫೩ ॥

ನಿಶ್ಚಯಧರ್ಮ ಬಾರದರೇನು ತನ್ನ ಚೇ । ತಶ್ಚಿರದೊಳಗದ ನಂಬಿ ॥
ದುಶ್ಚರಿತವ ಬಿಟ್ಟು ಶುಭದೊಳು ನಡೆದರೆ । ನಿಶ್ಚಯವನೆ ನಾಳೆ ಪಡೆವಾ ॥ ೫೪ ॥

ನಿಶ್ಚಯ ತನಗೆ ಬಾರದು ನಂಬನನ್ಯರು । ನಿಶ್ಚಯವಿಡಿದರವರಿಗೆ ॥
ವೃಶ್ಚಿಕನಾಗುವ ದೂಷಣಮಾಡುವ । ದುಶ್ಚಿತ್ತಗಿಲ್ಲಾತ್ಮಸಿದ್ಧಿ ॥ ೫೫ ॥

ಸಾರಭವ್ಯರು ಧ್ಯಾನದೊಳು ಕಾಣ್ಬರಾತನ । ದೂರಭವ್ಯರು ಕಾಣರಹುದು ॥
ಸಾರಭವ್ಯರ ನಡೆಗೊಡಬಡುವರು ನಾಳೆ । ಸಾರುವರಾತ್ಮಸಿದ್ಧಿಯನು ॥ ೫೬ ॥

ಸಾರಭವ್ಯರು ಹಂಸನನು ನೋಳ್ಪೆವೆಂದರೆ । ದೂರಭವ್ಯರು ಮೆಚ್ಚಲದಕೆ ॥
ವೈರವ ತಾಳಿ ನಿರ್ಭವ್ಯರು ನಿಂದಿಸಿ । ನಾರಕಗತಿಗೆ ಬೀಳುವರು ॥ ೫೭ ॥

ವ್ಯವಹಾರದೊಳಗೊಂದ ನಡೆದರೆ ನುಡಿದರೆ । ಲವಲವಿಕೆಯ ಮಾಡುತಿಹರು ॥
ಸುವಿಶುದ್ಧ ನಿಶ್ಚಯವೆಂಬಾಗ ತೆರಳುವ । ರವಮನ್ನಣೆಯ ಮಾಡುತಿಹರು ॥ ೫೮ ॥

ತವಗಾತ್ಮಯೋಗ ಬಾರದು ಹಂಸಯೋಗಾನು । ಭವಿಗಳ ಕಂಡರೇಡಿಪರು ॥
ಅವರ ನಿಂದಿಸದಿದ್ದರೇಕಹುದವರಿಗೆ । ಧ್ರುವ ತಪ್ಪದುಗ್ರಸಂಸಾರಾ ॥ ೫೯ ॥

ಅಂಗ ಪನ್ನೆರಡರೊಳೊಂದುಳಿದೇಕಾದ । ಶಾಂಗಮುಟ್ಟೋದುವರವರು ॥
ಸಂಗವ ತೊರೆದು ನಿರ್ಗ್ರಂಥರಾದರು ಬಹಿ । ರಂಗದಾಚರಣೆಯೊಳಿಹರು ॥ ೬೦ ॥

ಮೆಯ್ಯ ನಿರ್ವಾಣವಾಳ್ಪುದು ದೇಹನಿರ್ವಾಣ । ಮೆಯ್ಯೊಳಗಿರ್ದ ಹಂಸನನು ॥
ಮೆಯ್ಯೆಂಬ ಹೊದಪಿಂದ ಬೇರ್ಮಾಡಿ ನೋಳ್ಪುದೆ । ಮೆಯ್ಯಿಲ್ಲದಾತ್ಮನಿರ್ವಾಣಾ ॥ ೬೧ ॥

ಮೂರ್ತಿನಿರ್ವಾಣವಿಡಿದು ಹಂಸನಿರ್ವಾಣ । ವರ್ತಿಗಳಾದರೆ ಮುಕ್ತಿ ॥
ಧೂರ್ತರವರು ಹಂಸನಿರ್ವಾಣಕೊಪ್ಪರು । ಮೂರ್ತಿನಿರ್ವಾಣಕೊಪ್ಪಿಹರು ॥ ೬೨ ॥

ಒಳಗೆ ಬಿಡದೆ ಹೊರಗೇನ ಬಿಟ್ಟರು ಹೆರೆ । ಗಳೆದರೆ ಸರ್ಪ ನಿರ್ವಿಷನೆ ॥
ತಿಲಮಾತ್ರಮೋಹರಾಗದ್ವೇಷವಿಲ್ಲದೆ । ನಿಲಬೇಕು ತನ್ನೊಳು ತಾನೆ ॥ ೬೩ ॥

ಇಂತೆಂಬ ನುಡಿಗೆ ನಿರ್ಭವ್ಯರೊಪ್ಪರು ಧ್ಯಾನ । ಕಂತಿಂತು ಗುಂಜ ನುಡಿವರು ॥
ಎಂತು ಕಂಡಪರಿವರಾತ್ಮನನಾತ್ಮ ತಾ । ನೆಂತಿಹನೆಂದು ಹೋರುವರು ॥ ೬೪ ॥

ಇವನಿಗಿಲ್ಲವನಿಗಿಲ್ಲೀ ಕಾಲವಾ ಕಾಲ । ವಿಪು ಬೇಕು ಮತ್ತವು ಬೇಕು ॥
ನಿವಗೆ ತವಗೆ ಧ್ಯಾನವೆಯೆಂಬರಾ ಧ್ಯಾನ । ತವಗೆ ಬಾರದ ಕಿಚ್ಚಿನಿಂದ ॥ ೬೫ ॥

ಒಡಲ ದಂಡಿಸುವರೋದಿಸುವರೋದುವರು ಸಂ । ಗಡಬಡುವರು ಸಂಜೆಗಳೊಳು ॥
ಪಡೆವರದರೊಳಿಷ್ಟು ಸಂಸಾರಸುಖವನು । ಪಡೆಯರೆಂದಿಗು ಮುಕ್ತಿಪದವಾ ॥ ೬೬ ॥

ದೇವ ಬಿನ್ನಹ ತನ್ನ ತಾ ನೋಡಿದಲ್ಲದೆ । ಕೈವಲ್ಯವಿಲ್ಲೆನಲೇಕೆ ॥
ಆವಾಗ ನಿನ್ನ ಭಕ್ತಿಯೊಳಿರಲವರಿಗೆ । ಜೀವಸಿದ್ಧಿಯದೇನು ಘನವೆ ॥ ೬೭ ॥

ನಮ್ಮ ಮೇಲಣ ಭಕ್ತಿ ಮುಕ್ತಿಕಾರಣವಹು । ದೆಮ್ಮ ಭಕ್ತಿಗೆ ಯುಕ್ತಿ ಬೇಕು ॥
ನಮ್ಮವಾಕ್ಯವ ಕೇಳ್ದು ನಡೆದರೆಮ್ಮಯ ಭಕ್ತಿ । ತಮ್ಮಿಚ್ಛೆಯದು ಮೂರ್ಖಭಕ್ತಿ ॥ ೬೮ ॥

ತಮ್ಮಿಚ್ಛೆಯೆಂತಾಯ್ತು ಸ್ವಾಮಿ ತವಗೆ ತಾವು । ತಮ್ಮಾತ್ಮನೆಂದು ನುಡಿದರೆ ॥
ತಮ್ಮ ಮುಕ್ತಿಗೆ ಜಿನ ಶರಣೆಂದು ನಡೆದರೆ । ನಿಮ್ಮ ಮೇಲಣ ಭಕ್ತಿಯಲ್ತೆ ॥ ೬೯ ॥

ಅಲ್ಲವೊ ರವಿಕೀರ್ತಿ ನಿನ್ನಾತ್ಮಯೋಗ ನ । ವ್ಮಲ್ಲಿಗೊಪ್ಪುವ ಭಕ್ತಿಯೆಂದು ॥
ಬಲ್ಲೆಯಂತಾಗಿಯು ಕೇಳುತಿದ್ದಪೆಯಾಗ । ಲೆಲ್ಲವನೊರೆವೆವು ಕೇಳು ॥ ೭೦ ॥

ಯುಕ್ತಿಯರಿದು ಭಕ್ತಿಮಾಡಿದರವರಿಗೆ । ಮುಕ್ತಿಯಹುದು ನೇಮದಿಂದ ॥
ಯುಕ್ತಿಯಿಲ್ಲದ ಭಕ್ತಿ ಭವವ ಮಾಡುವುದಾಗಿ । ಭಕ್ತಿಯ ನೆಲೆಗಾಣಬೇಕು ॥ ೭೧ ॥

ಎಂದರಾ ಯುಕ್ತಿಯ ಭಕ್ತಿಯೆಂತಾ ಯುಕ್ತಿ । ಕುಂದಿದ ಭಕ್ತಿ ತಾನೆಂತು ॥
ಮಂದಮತಿಗಳೇನ ಬಲ್ಲೆವು ನವಗವ । ರಂದವನರುಹು ಸರ್ವಜ್ಞಾ ॥ ೭೨ ॥

ಆದರೆ ಕೇಳೆಲೆ ಭವ್ಯ ಮತ್ತಾ ಭಕ್ತಿ । ಭೇದಾಭೇದವೆಂದೆಂಬ ॥
ಭೇದದೊಳಿತ್ತೆರನಾಗಿಹುದವನರಿ । ದಾದರಿಸಿದರೆ ವಿಮುಕ್ತಿ ॥ ೭೩ ॥

ಇಲ್ಲಿ ನಾವಿರುತಿಹೆವೆಂದರಿದಾ ಸಿದ್ಧ । ರಲ್ಲಿ ಮುಕ್ತಿಯೊಳಿಹರೆಂದು ॥
ಮೆಲ್ಲನೆ ಬೇರಿಟ್ಟು ಭಾವಿಪುದರ್ಚಿಪು । ದೆಲ್ಲವಂತದು ಭೇದಭಕ್ತಿ ॥ ೭೪ ॥

ನಮ್ಮನು ಸಿದ್ಧರನಿಲ್ಲಲ್ಲಿ ನಿಲಿಸದೆ । ತಮ್ಮಾತ್ಮನೊಳು ತಾವು ನಿಲಿಸಿ ॥
ಜುಮ್ಮನೆ ಭಾವಪೂಜೆಯ ಮಾಡುತಿರೆ ಪರ । ಬೊಮ್ಮದಭೇದಭಕ್ತಿಯದು ॥ ೭೫ ॥

ಬೇರಿಟ್ಟು ನಮ್ಮ ಕಂಡರೆ ಭೇದಭಕ್ತಿ ಪೆಂ । ಪೇರಿ ತಮ್ಮಾತ್ಮನೊಳೆಮ್ಮಾ ॥
ಬೇರುಮಾಡದೆ ಕಂಡರದು ಕರ್ಮಗಳ ಸುಟ್ಟು । ತೂರುವ ನಿರ್ಭೇದಭಕ್ತಿ ॥ ೭೬ ॥

ಲೆಪ್ಪದೊಳಗೆ ಕಂಚಿನೊಳು ಕಣಿಯೊಳಗೆಮ್ಮ । ನೆಪ್ಪುಗಾಣಿಸೆ ಭೇದಭಕ್ತಿ ॥
ಒಪ್ಪವಿಟ್ಟಾತ್ಮನೊಳೆಮ್ಮ ನೋಡಿದರೆಮ । ಗೊಪ್ಪುವ ನಿರ್ಭೇದಭಕ್ತಿ ॥ ೭೭ ॥

ಸಿದ್ಧರಂತರುಹನಂತೆನ್ನಾತ್ಮನತ್ಯಂತ । ಶುದ್ಧನೆಂದೊಳಗೆ ನೋಡಿದರೆ ॥
ಸಿದ್ಧಭಕ್ತಿಯು ತಾನೆ ನಮ್ಮ ಭಕ್ತಿಯು ತಾನೆ । ಸಿದ್ಧರು ನಾವಿಪ್ಪೆವಲ್ಲಿ ॥ ೭೮ ॥

ಭೇದಭಕ್ತಿಯ ಹಲಬರು ಮಾಡಬಹುದು ನಿ । ರ್ಭೇದಭಕ್ತಿಯ ಮಾಡಲರಿದು ॥
ಭೇದಭಕ್ತಿಯ ಮೊದಲಭ್ಯಾಸಿಸಿ ಮತ್ತ । ಭೇದಭಕ್ತಿಯ ಮಾಡಬೇಕು ॥ ೭೯ ॥

ನಿರ್ಭವ್ಯರೆಲ್ಲ ಮಾಳ್ಪರು ಭೇದಭಕ್ತಿಯ । ನಿರ್ಭೇದಭಕ್ತಿಯಸಾಧ್ಯಾ ॥
ನಿರ್ಭಾಗ್ಯರಿಗೇಕೆ ಬಹುದದು ಮೋಕ್ಷಸಂ । ದರ್ಭವ ಮಾಳ್ಪ ಸುಭಕ್ತಿ ॥ ೮೦ ॥

ಭಕ್ತಿ ಬಾರದರೇನು ಮನಸೊಡಬಟ್ಟರಾ । ಭಕ್ತಿ ಬಹುದು ನಾಳೆ ತಾನೆ ॥
ಭಕ್ತಿ ಬಾರದು ಭಕ್ತಿಗೊಡಬಡರದರಿಂದ । ಮುಕ್ತಿಗೆ ದೂರರಾಗಿಹರು ॥ ೮೧ ॥

ಎರವಿನ ಭಕ್ತಿಯೆಂದರು ಭೇದಭಕ್ತಿಯೆಂ । ದರು ಸರಿ ಬೇರೆಮಾಳ್ಪುದದು ॥
ಎರವುಗಾಣದ ಭಕ್ತಿ ನಿರ್ಭೇದಭಕ್ತಿಯೆಂ । ದರು ಸರಿ ಬೇರೆಮಾಡದದು ॥ ೮೨ ॥

ಇದಕೊಂದು ದೃಷ್ಟಾಂತವನು ಕೇಳು ಗುರುವಿದ್ದ । ಸದನಕೆ ಹೋಗಿ ಪೂಜಿಸಲು ॥
ಅದು ಭಕ್ತಿಯಹುದು ಮನೆಗೆ ಕರೆತಂದರ್ಚಿ । ಪುದು ಘನತರಭಕ್ತಿಯಲ್ತೆ ॥ ೮೩ ॥

ಭಕ್ತಿಗಳೊಳು ಹೆಚ್ಚು ಭೇದವಿಲ್ಲದ ಭಕ್ತಿ । ಮುಕ್ತಿ ಹೆಚ್ಚಖಿಳಸಂಪದಕೆ ॥
ಮುಕ್ತಿಗೆ ತಕ್ಕ ಭಕ್ತಿಯ ಮಾಡಬೇಕಿದು । ಯುಕ್ತಿಗೂಡಿದ ಭಕ್ತಿ ಭವ್ಯಾ ॥ ೮೪ ॥
ಭಿನ್ನಭಕ್ತಿಗೆ ಸ್ವರ್ಗ ನಿರ್ಭಿನ್ನಕಪವರ್ಗ । ಭಿನ್ನವಿಲ್ಲದ ಭಕ್ತಿ ತಾನು ॥
ಮುನ್ನ ಸಗ್ಗವನಿತ್ತು ಮತ್ತೆ ಮುಕ್ತಿಯ ಮಾಳ್ಪ । ದೆನ್ನಾಜ್ಞೆಯಿದು ನೆರೆ ನಂಬು ॥ ೮೫ ॥
ಭೇದರತ್ನತ್ರಯ ವ್ಯವಹಾರ ಶುಭಯೋಗ । ಭೇದಭಕ್ತಿಗಳೆಂದರೊಂದೆ ॥
ಭೇದವಡಗಿದ ನಿಶ್ಚಯ ಶುದ್ಧಯೋಗ ನಿ । ರ್ಭೇದಭಕ್ತಿಗಳೆಂದರೊಂದೆ ॥ ೮೬ ॥
ಶುಭಯೋಗವಾ ಧ್ಯಾನದಭ್ಯಾಸಕಾಲದೊ । ಳಭಿನುತವೆನಿಸಲಾಚರಿಸಿ ॥
ಕ್ಷುಭಿತವಳಿದ ಚಿತ್ತದೊಳು ಮತ್ತೆ ಮಾಳ್ಪುದು । ಅಭಯಶುದ್ಧೋಪಯೋಗವದು ॥ ೮೭ ॥
ಚೇತನವಿಲ್ಲದ ಶಿಲೆಯೊಳಗೆನ್ನನು । ದ್ಯೋತಿಸೆ ಸಾಮಾನ್ಯಭಕ್ತಿ ॥
ಚೈತನ್ಯದಾತ್ಮನೊಳೆನ್ನನುದ್ಧರಿಸುವ । ರೀತಿ ವಿಶೇಷಭಕ್ತಿಯದು ॥ ೮೮ ॥
ಪಾಷಾಣ ಚೇತನವಲ್ಲವಹುದು ಮಲ । ದೂಷಣವಿಲ್ಲದರಲ್ಲಿ ॥
ದೋಷವುಳ್ಳೊಡಲೊಳು ನಿಮ್ಮ ಸ್ಥಾಪಿಸಲದು । ಭೂಷಣವಹುದೆ ಜಿನೇಶಾ ॥ ೮೯ ॥
ದೇಹ ಕಲ್ಮಷವಹುದಾ ದೇಹದೊಳಗೆಮ್ಮ । ರೂಹ ಕಲ್ಪಿಸಹೇಳಿತಿಲ್ಲ ॥
ದೇಹದೊಳಿರುತಿಹ ಶುದ್ಧಹಂಸನೊಳೆಮ್ಮ । ರೂಹನುದ್ಧರಿಸೆಂದೆವರಿಯಾ ॥ ೯೦ ॥
ಹಂಸನೊಳಗೆ ಶುದ್ಧನಹುದು ಹೊರಗೆ ತೋರ್ಪ । ಮಾಂಸಾಸ್ಥಿಮಲಪೂರ್ಣದೊಡಲ ॥
ಸಂಸರ್ಗದೋಷವಿಲ್ಲವೆ ನಿಮ್ಮನದರೊಳು । ಸಂಸಿದ್ಧಿಸುವೆನೆಂತು ಗುರುವೆ ॥ ೯೧ ॥
ಮರೆದೆಯ ಕೆಚ್ಚಲೊಳಿರ್ದ ಪಾಲಂತಾತ್ಮ । ನುರೆ ಶುದ್ಧನೆಂದು ಪೇಳ್ವುದನು ॥
ಅರಿದಿನ್ನು ತನುಸೋಂಕಿ ಸೋಂಕನುತ್ತಮನೆಂದು । ನಿರಿಸಾತ್ಮನೊಳು ನಮ್ಮ ರೂಪಾ ॥ ೯೨ ॥
ಗೋವಿನ ಗರ್ಭದೊಳಿರ್ದ ಗೋರೋಚನ । ಪಾವನವಲ್ತೆ ಲೋಕದೊಳು ॥
ಜೀವನು ತನುವಿನೊಳಿರ್ದರೇನಮಲಸ್ವ । ಭಾವನೆಂದನುದಿನ ನೋಡು ॥ ೯೩ ॥
ಮೃಗದ ನಾಭಿಯೊಳಿರ್ದರೇನು ಕತ್ತುರಿಯದು । ಜಗಕೆ ಮಹಾಸೇವ್ಯವಲ್ತೆ ॥
ಒಗಡಿಕೆಯಂಗದೊಳಿರ್ದರೇನಾತ್ಮನ । ಬಗೆಯೆಂಬುದದು ಸುಪವಿತ್ರಾ ॥ ೯೪ ॥
ಮುಕ್ತಾಫಲವದು ಚಿಪ್ಪಿನೊಳಿರ್ದರು । ಯುಕ್ತಿಗುತ್ತಮವೆನಿಪಂತೆ ॥
ರಕ್ತಮಾಂಸದ ಮೈಯೊಳಿರ್ದರೇನಾತ್ಮ ವಿ । ರಕ್ತನುತ್ತಮನಿದ ನಂಬು ॥ ೯೫ ॥
ಚಿತ್ತುಗಳಲ್ಲದ ಗೋವಿತ್ತ ಪಾಲ್ಮುತ್ತು । ಕತ್ತುರಿಗಳು ಪವಿತ್ರಗಡಾ ॥
ಚಿತ್ತು ಮೆಯ್ಯಾದಾತ್ಮವಸ್ತು ಮೈಯೊಳಗಿದ್ದ । ರುತ್ತಮನೆಂದರೇಕೆಣಿಕೆ ॥ ೯೬ ॥
ಅಜ್ಞಾನಿಯ ನೋಟಕಪವಿತ್ರನಹುದಾತ್ಮ । ಸುಜ್ಞಾನಿಗೆ ಸುಪವಿತ್ರಾ ॥
ಅಜ್ಞಾನಭಾವನೆಯಿಂದಹುದಜ್ಞಾನ । ಸುಜ್ಞಾನದಿಂದ ಸುಜ್ಞಾನಾ ॥ ೯೭ ॥

ಎಂದುಮುಟ್ಟಾತ್ಮನು ಬದ್ಧನೆಂದೆ ಕಂಡ । ನಂದುಮುಟ್ಟಲು ಭವಬದ್ಧಾ ॥
ಎಂದಾತ್ಮ ಶುದ್ಧನೆಂದರಿದು ನೋಡಿದನವ । ನಂದುತೊಡಗಿ ಮೋಕ್ಷಪಥಿಕಾ ॥ ೯೮ ॥

ಒಡಲು ನಾನೆಂಬವ ಬಹಿರಾತ್ಮನಾತ್ಮ ಬೇ । ರೊಡಲು ಬೇರೆನಲಂತರಾತ್ಮಾ ॥
ಒಡಲಿಲ್ಲದವ ಪರಮಾತ್ಮನಾತ್ಮನ ನೋಡು । ವೆಡೆಯೊಳು ಪರಮಾತ್ಮರೆಲ್ಲ ॥ ೯೯ ॥

ಬಹಿರಾತ್ಮ ಬದ್ಧನು ಪರಮಾತ್ಮ ಶುದ್ಧನು । ಸ್ವಹಿತಾಂತರಾತ್ಮನೆಂಬವನು ॥
ಬಹಿರಂಗಚಿಂತೆಯೊಳಿಪ್ಪಾಗ ಬದ್ಧನು । ವಹಿಸಿ ಧ್ಯಾನಿಸುವಾಗ ಶುದ್ಧಾ ॥ ೧೦೦ ॥



ತನ್ನಾತ್ಮನಲ್ಪನೆಂದೆಣಿಸುವನಲ್ಪನು । ತನ್ನಾತ್ಮನಧಿಕನೆಂದರಿದು ॥
ಮನ್ನಿಸುವವನಲ್ಪನಲ್ಲ ನನ್ನಂತಹ । ನೆನ್ನಾಜ್ಞೆಯಿದು ನೆರೆ ನಂಬು ॥ ೧೦೧ ॥

ದರುಶನ ಸುಜ್ಞಾನ ಚಾರಿತ್ರ ತಪನೆಂದು । ನೆರಹಿ ನಾಲ್ಕನೆ ವ್ಯವಹಾರಾ ॥
ಪರಮಾತ್ಮಯೋಗವೆಂದೆಂಬಾಗಲಡಕ ನಿ । ರ್ಧರಿಸಿದು ನಿಶ್ಚಯಮಾರ್ಗಾ ॥ ೧೦೨ ॥

ಮೂಲಗುಣಗಳು ಮತ್ತುತ್ತರಗುಣವೆಂಬ । ಸಾಲುಮಾತಿವು ವ್ಯವಹಾರಾ ॥
ಮೂಲಗುಣಗಳೆಂಟು ನಾನೆಂದು ತಾ ತನ್ನೊ । ಳೋಲಾಡಲದು ನಿಶ್ಚಯಾರ್ಥಾ ॥ ೧೦೩ ॥

ದೇವತಾವಂದನೆ ತಾನೆ ನಾನಾವ್ರತ । ಭಾವನೆ ತಾನೆ ಬಲ್ಲವಗೆ ॥
ಆವ ವಿಕಲ್ಪವಿಲ್ಲದೆ ಧ್ಯಾನದೊಳು ನಿಂದ । ಭಾವಕನೆನ್ನ ಕಂಡವನು ॥ ೧೦೪ ॥

ಮಾರುತನಂತೆ ಸಂಚಲಿಪ ಚಿತ್ತವನಾತ್ಮ । ದಾರಿಯೊಳಗೆ ನಿಲಿಸಿದರೆ ॥
ಘೋರತಪಸು ತಾನೆ ಉಗ್ರತಪಸು ತಾನೆ । ಸಾರತಪಸು ತಾನೆ ನಂಬು ॥ ೧೦೫ ॥

ಅಧ್ಯಾತ್ಮವನ್ನರಿದಾತ್ಮನೊಳಗೆ ಚಿತ್ತ । ಸಾಧ್ಯವ ಮಾಡಿ ನಿಂದವಗೆ ॥
ಸ್ವಾಧ್ಯಾಯ ತಾನೆ ಪಂಚಾಚಾರ ತಾನೆ ಮ । ಹಾಧ್ಯಾನ ಜಪವೆಲ್ಲ ತಾನೆ ॥ ೧೦೬ ॥

ಪಾದರಸಂಬೊಲು ಪರಿವ ಚಿತ್ತವ ತಂದು । ವೇದಿಸಿದರೆ ಹಂಸನೊಳಗೆ ॥
ದ್ವಾದಶಾಂಗದ ಶಾಸ್ತ್ರ ತಾನೆ ಚತುರ್ದಶ । ಭೇದಪೂರ್ವೆಗಳದು ತಾನೆ ॥ ೧೦೭ ॥

ಸಾಮ್ಯಭಾವನೆಯಿಂದ ಚಿತ್ತವ ತಡೆದಾತ್ಮ । ಗಮ್ಯವ ಮಾಡಿ ನಿಂದವಗೆ ॥
ಸಮ್ಯಕ್ತ್ವ ತಾನೆ ಸಮ್ಯಗ್ಜ್ಞಾನ ಚಾರಿತ್ರ । ಸಾಮ್ಯದ ತಪಸೆಲ್ಲ ತಾನೆ ॥ ೧೦೮ ॥

ಭಿನ್ನಭಿನ್ನದೊಳತ್ತಲಿತ್ತಲೋಡುವ ಚಿತ್ತ । ತನ್ನಾತ್ಮನೊಳು ನಿಂದರವಗೆ ॥
ನನ್ನ ಮುದ್ರೆಯು ತಾನೆ ತೀರ್ಥವಂದನೆ ತಾನೆ । ನನ್ನ ಪೂಜೆಯು ತಾನೆ ನಂಬು ॥ ೧೦೯ ॥

ದುರ್ಜಯಚಿತ್ತವ ಜಯಿಸಿ ವಿಕಲ್ಪವ । ವರ್ಜಿಸಿ ತನ್ನ ನೋಳ್ಪವಗೆ ॥
ನಿರ್ಜರೆ ತಾನೆ ಸಂವರೆ ತಾನೆ ಆತ್ಮ ತಾ । ನೂರ್ಜಿತಸನ್ಮೋಕ್ಷ ತಾನೆ ॥ ೧೧೦ ॥

ದಾಕ್ಷಿಣ್ಯವಿಲ್ಲದೆ ಜಡಿದು ಚಿತ್ತವನಾತ್ಮ । ಸಾಕ್ಷಿಯಿಂದೊಳಗೆ ನೋಡಿದರೆ ॥
ಮೋಕ್ಷಪದ್ಧತಿ ತಾನೆ ಮೋಕ್ಷಸಂಪದ ತಾನೆ । ಮೋಕ್ಷ ತಾನೆ ನಂಬು ನಂಬು ॥ ೧೧೧ ॥

ಪರಮರಹಸ್ಯವಿದಾತ್ಮಚಿಂತನೆಯೆಂಬು । ದೆರವಿಲ್ಲದೆನ್ನ ಮುಟ್ಟಿಹುದು ॥
ದುರುಳಚಿತ್ತವನಾರು ಗೆಲ್ದರವರಿಗೆ ಗೋ । ಚರಿಸಿಹುದೆಲೆ ರವಿಕೀರ್ತಿ ॥ ೧೧೨ ॥

ಜಿನನಾಥ ಬಿನ್ನಹವಿನಿತು ಸಾಮರ್ಥ್ಯವು । ಳ್ಳನುಪಮಾತ್ಮನು ದೇಹದೊಳಗೆ ॥
ಕುನ್ನಿದಿರಲೇಕೆ ಹುಟ್ಟಲದೇಕೆ ಸಾಯಲೇ । ಕನಘಮುಕ್ತಿಯೊಳಿರಬೇಡ ॥ ೧೧೩ ॥

ಸಾಮರ್ಥ್ಯವುಳ್ಳವನಹುದಾತ್ಮ ತಾಂ ತನ್ನ । ಸಾಮರ್ಥ್ಯವರಿಯದೆ ಕೆಟ್ಟ ॥
ಪ್ರೇಮರಾದ್ರವ ಬಿಟ್ಟು ತನ್ನ ನೋಡಿದರೆ ಸು । ಕ್ಷೇಮದೊಳಿಹನೆಲೆ ಭವ್ಯಾ ॥ ೧೧೪ ॥

ವೃಕ್ಷವ ಸುಡುವ ಸಾಮರ್ಥ್ಯವುಂಟಗ್ನಿಗೆ । ವೃಕ್ಷದೊಳಡಗಿರುತಿಹುದು
ವೃಕ್ಷದಿ ವೃಕ್ಷವ ಹೊಸೆದರೆ ತಾನಿದ್ದ । ವೃಕ್ಷವ ತಾನೆ ಸುಡುವುದು ॥ ೧೧೫ ॥

ಕರ್ಮವ ಸುಡುವ ಸಾಮರ್ಥ್ಯವುಂಟಾತ್ಮಗೆ । ಕರ್ಮದೊಳಡಗಿರುತಿಹನು ॥
ಕರ್ಮವರಿದು ತಾನೆ ತನ್ನ ನೋಡಿದರೆಂಟು । ಕರ್ಮವ ಸುಟ್ಟುರುಹುವನು ॥ ೧೧೬ ॥

ಶಕ್ತಿಯೆಂಬುದು ಶಕ್ತಿಗತವಾಗಿ ನಿಂದುದು । ವ್ಯಕ್ತಿಗಿನ್ನದ ತರಬೇಕು ॥
ಶಕ್ತಿಯೊಳಿರ್ದುದ ವ್ಯಕ್ತಿಮಾಳ್ಪುದಕೆ ವಿ । ರಕ್ತಿಗೂಡಿದ ಧ್ಯಾನವೊಂದೆ ॥ ೧೧೭ ॥

ಅಂಕುರ ಬೀಜದೊಳಿರುತದೆ ಭೂಮಿಯು । ಸೋಂಕದಿರ್ದರೆ ವೃಕ್ಷವಹುದೆ ॥
ಪಂಕಭೂಮಿಯು ಸೋಂಕಲಾ ಬೀಜದಿಂದೊಡೆ । ದಂಕುರಿಪುದು ವೃಕ್ಷವಹುದು ॥ ೧೧೮ ॥

ಜ್ಞಾನಸಾಮರ್ಥ್ಯ ಶರೀರದೊಳಡಗಿತು । ಧ್ಯಾನವಿಲ್ಲದೆ ಪೊಣ್ಮದದನು ॥
ಆನಂದರಸದ ಸುಧ್ಯಾನದೊಳಿಡೆ ತನ್ನ । ತಾನೆ ಮೂಜಗವ ಹಬ್ಬುವುದು ॥ ೧೧೯ ॥

ಘನಮೂಲಿಕಾಸಾರವೆರೆದು ಕೋವೆಯೊಳಿಟ್ಟು । ತನಿಗಿಚ್ಚಿನಿಂದ ಕಾಸಿದರೆ ॥
ತನಗೆ ತಾನೆ ಕಿಟ್ಟ ಕಾಳಿಕೆ ಜಾರಿ ಭೋಂ । ಕನೆ ಕೀಳುಚಿನ್ನ ಮೇಲಹುದು ॥ ೧೨೦ ॥

ತನು ಕೋವೆ ಮೂಲಿಕೆ ಮೂರುರನ್ನಗಳಲ್ಲಿ । ಗನಲ ಸುಧ್ಯಾನವಿಂತಿವನು ॥
ಅನುಗೂಡಿದರೆ ಕರ್ಮ ಕೆಟ್ಟಾತ್ಮರೆಲ್ಲರು । ಜಿನರೆನಿಪಪರಂಜಿಯಹರು ॥ ೧೨೧ ॥

ಕೀಳು ಚಿನ್ನವನಪರಂಜಿ ಮಾಳ್ಪಾಗಲ್ಲಿ । ಮೂಲಿಕೆ ಬೇರಗ್ನಿ ಬೇರೆ ॥
ಕಾಳಿಕೆ ಕಿಟ್ಟ ಬೇರಾ ಕೋವೆ ಬೇರದ । ಥಾಳಿಪ ಸಿದ್ಧನು ಬೇರೆ ॥ ೧೨೨ ॥

ಆ ಹೇಮಪುಟದಂದವಲ್ಲಾತ್ಮನೆನಿಸಿಕೊಂ । ಬೀ ಹೇಮಪುಟವಿದು ಚಿತ್ರ ॥
*ಯೋಹಿ ಸಿದ್ಧೋ ನನು ಸೋಹವೆಂಬವರಿಗು । ದಾಹರಿಸುವೆವು ಕೇಳದನು ॥ ೧೨೩ ॥

ಚೆನ್ನಾಗಿ ತಿಳಿ ಕೋವೆ ಕಿಟ್ಟ ಕಾಳಿಕೆಯಿಷ್ಟೆ । ಭಿನ್ನವಲ್ಲದೆ ಹಂಸಪುಟಕೆ ॥
ಚಿನ್ನ ತಾನೌಷಧಿ ತಾನಗ್ನಿ ತಾನಲ್ಲಿ । ಸನ್ನದ್ಧಸಿದ್ಧನು ತಾನೆ ॥ ೧೨೪ ॥

---

* ಊಹಿಸಿದೊಡನನು

ವಸ್ತುಸ್ವಭಾವವಿದೆಣಿಕೆಮಾಡದಿರು ಸ । ಮಸ್ತತತ್ತ್ವದೊಳಾತ್ಮತತ್ತ್ವ ॥
ಆಸ್ತಾನ್ಯಸಂಗವಾಗಿಹುದದ ಕಂಡಲ್ಲಿ । ನಾಸ್ತಿ ಮತ್ತೊಂದು ವಿಕಲ್ಪ ॥ ೧೨೫ ॥

ನಿಕ್ಷೇಪ ನಯ ಸುಪ್ರಮಾಣವೆಲ್ಲಾತ್ಮಪ । ರೀಕ್ಷೆಯ ಕಾಲದೊಳುಂಟು ॥
ಪಕ್ಷವೆಲ್ಲವ ಬಿಟ್ಟು ಧ್ಯಾನದೊಳಾತ್ಮನ । ನೀಕ್ಷಿಪಕಾಲದೊಳಿಲ್ಲ ॥ ೧೨೬ ॥

ಮದಗಜ ತಪ್ಪಿಹೋದರೆ ಹಜ್ಜೆಹಜ್ಜೆತ । ಪ್ಪದೆ ಹರಿದರಸುವರೆಲ್ಲ ॥
ಇದಿರೊಳಾ ಮದಗಜ ತೋರಿದ ಮೇಲೆ ಮ । ತ್ತದರ ಹಜ್ಜೆಯನರಸುವರೆ ॥ ೧೨೭ ॥

ನಾನಾಶಾಸ್ತ್ರಚಿಂತನೆಯೆಂಬುದಾತ್ಮನ । ತಾನರಸುವ ಪರಿಯರಿಯಾ ॥
ಧ್ಯಾನದೊಳಾತ್ಮನ ಕಂಡನೋಲವಗೇಕೆ । ನಾನಾವಿಕಲ್ಪ ವಿಭ್ರಾಂತಿ ॥ ೧೨೮ ॥

ತರ್ಕಪುರಾಣೋಕ್ತಿ ಮೊದಲಾದುವಾತ್ಮಸಂ । ಪರ್ಕವುಳ್ಳವಗೆ ಸೊಗಸವು ॥
ಅರ್ಕನೊತ್ತಿನೊಳಿರ್ದು ದೀಪವೇತಕೆ ರಾಜ । ಶರ್ಕರೆಗಧಿಕವೆ ಹಿಂಡಿ ॥ ೧೨೯ ॥

ಇದು ನನ್ನ ಮೆಚ್ಚು ಸಿದ್ಧರ ಮೆಚ್ಚು ನಾನೆಂದ । ರಿದು ಮತ್ತಿದೆಂದರೆ ನಾನು ॥
ಅದರಿಂದ ನೀನಿದ ನಚ್ಚು ಮೆಚ್ಚೀಕ್ಷಿಸು । ಅದು ನನ್ನ ಭಕ್ತಿ ನನ್ನಾಜ್ಞೆ ॥ ೧೩೦ ॥

ಮುನ್ನಾದ ಸಿದ್ಧರೆಲ್ಲಿಂತುಟಾಚರಿಸಿ ನಿ । ಷ್ಪನ್ನರಾದರು ನಾವು ಮತ್ತೆ ॥
ಇನ್ನಪ್ಪ ಸಿದ್ಧರಿಗಿದು ತಾನೆ ಪದ್ಧತಿ । ನನ್ನಾಜ್ಞೆ ದೃಢವಿದು ಭವ್ಯಾ ॥ ೧೩೧ ॥

ಕೇಳಾದರಿನ್ನೊಂದು ಕಲೆಯ ಕರ್ಮಗಳಹ । ಧೂಳ ತುಂಬಿಹುದಿನ್ನು ಲೋಕಾ ॥
ಧೂಳೆಂಬ ಜಲದೊಳು ಮಿಾಂಗಳಂತಖಿಳಜೀ । ವಾಳಿಯು ಮುಳುಗಿಯಿದ್ದಪುದು ॥ ೧೩೨ ॥

ನಂಟು ಮುನಿಸು ಮೋಹ ಜೀವಾಳಿಗಾ ಧೂಳಿ । ಗಂಟುಬಿರುಬುಬೆರಕೆಗಳು ॥
ಗಂಟಿಕ್ಕಿಕೊಂಡೆಂಟುಕರ್ಮವಪ್ಪಾಗಳಾ । ಗಂಟ ಬಿಡಿಸುವರಾರ್ಗಳವು ॥ ೧೩೩ ॥

ತನ್ನೊಳು ತಾ ನಿಂದು ಬಿಡಿಸಬೇಕಲ್ಲದೆ । ತನ್ನ ಕರ್ಮದ ಗಂಟು ಪರಗೆ ॥
ಭಿನ್ನವಾಗದು ಬಿಡಿಸುವೆನೆಂದರದು ಪ್ರೀತಿ । ತನ್ನ ಹತ್ತುವುದಾಗ ರಜಸು ॥ ೧೩೪ ॥

ಬಿಡಿಸುವೆನೆಂಬೊರ್ವ ನೆನೆಯಲಾತಗೆ ಸ್ನೇಹ । ದೊಡನೆ ಬಂಧವದಪ್ಪುದಾಗಿ ॥
ಬಿಡಹೋಗಿ ಮೂರುಗಂಟಿಕ್ಕಿದಂತಹುದೆಂದು । ಮಿಡುಕದಿಪ್ಪರು ವಿವೇಕಿಗಳು ॥ ೧೩೫ ॥

ಆದರಿಂದ ಹಲವನರಿದು ತೊರೆದಾತ್ಮಯೋ । ಗದೊಳಿರೆ ಸುಖವೆಂದೆವರಿಯಾ ॥
ಇದನರಿದಣುಮಾತ್ರವಾದರು ಭಾವಕ । ರ್ಮದೊಳೊಂದದಿರು ಧ್ಯಾನಿಯಾಗು ॥ ೧೩೬ ॥

ನಿನಗೆ ನಿನ್ನೊಡಹುಟ್ಟಿದರಿಂಗೆ ನಿನ್ನಯ್ಯಗೆ । ಘನವಲ್ಲವೀ ಜನ್ಮದೊಳಗೆ ॥
ಘನಮುಕ್ತಿಯಹುದೆಲೆ ರವಿಕೀರ್ತಿಯೆಂದನಾ । ಜಿನನಾಥನಮೃತವಾಕ್ಯದೊಳು ॥ ೧೩೭ ॥

ನಗೆ ಹುಟ್ಟಿತಾಗಳೆ ತನು ಗುಡಿಗಟ್ಟಿ ಕೈ । ಮುಗಿದು ನಮೋ ನಮಯೆಂದಾ ॥
ಬಗೆದಟ್ಟಿತರುಹ ಸಂಶಯ ಹೋಯ್ತು ಭಕ್ತಿಯ । ಬಗೆಯ ಕಂಡೆನು ಗೆಲ್ದೆನೆಂದಾ ॥ ೧೩೮ ॥

ಚಿದ್ರೂಪ ಜಿನನೆಂಬುದುತ್ತಮಭಕ್ತಿಯಾ । ಚಿದ್ರೂಪ ನೋಡವೆ ತಮ್ಮ ॥
ಕ್ಷುದ್ರಶರೀರದ ಹೊದಪು ಬಿಟ್ಟುದು ಜಿನ । ಮುದ್ರೆಯೆಂಬುದಿದಾವ ಭಕ್ತಿ ॥ ೧೩೯ ॥
ಶಿಲೆಯನು ಜಿನನೆನ್ನಬಹುದೊಮ್ಮೆ ಶುದ್ಧಾತ್ಮ । ಕಲೆಯುದೆಂತೂ ಜಿನನಹುದು ॥
ಮಲಪೂರ್ಣದೊಡಲ ವಸ್ತ್ರವ ಹಾಕಿ ಜಿನನೆಂಬು । ದೆಲೆ ದೇವ ಮೂರ್ಖಭಕ್ತಿಯದು ॥ ೧೪೦ ॥
ಹಂಸಮುದ್ರೆಯು ಮೆಚ್ಚಿದರೆ ದೇಹಮುದ್ರೆಯು । ಸಂಸಿದ್ಧಸಹಕಾರಿಯಹುದು ॥
ಹಂಸಮುದ್ರೆಯ ಬಿಟ್ಟು ತನ್ನನೆ ಹಿಡಿದರೆ । ಸಂಸಾರವಲ್ಲದೇನುಂಟು ॥ ೧೪೧ ॥
ಯುಕ್ತಿಯಿಲ್ಲದ ಭಕ್ತಿಯದು ಬೇಡ ನಮಗೆ ಸು । ಯುಕ್ತಿಗೂಡಿದ ಭಕ್ತಿ ಸಾಕು ॥
ವ್ಯಕ್ತವಾದುದು ಮೋಕ್ಷಮಾರ್ಗವೆಮಗೆ ನಿನ್ನ । ಭಕ್ತಿಗೆಣೆಯೆ ಜಿನನಾಥಾ ॥ ೧೪೨ ॥
ಚಕ್ರವರ್ತಿಗೆ ದೇವರಂದೊಮ್ಮೆ ಕರುಣಿಸಿ । ದೀ ಕ್ರಮ ಹೊಳೆದುದೆನ್ನೊಳಗೆ ॥
ಆಕ್ರಮಿಸಿದುದೀಗ ದ್ವಿಗುಣವಾದುದು ಬುದ್ಧಿ । ವಿಕ್ರಮರಾದೆವೆನ್ನೊಡೆಯಾ ॥ ೧೪೩ ॥
ಕರ್ಮಕರ್ದಮದೊಳಗದ್ದಿದವರನೆತ್ತಿ । ಧರ್ಮವಾರಿಯ ಮೀಯಲೆರೆದು ॥
ನಿರ್ಮಲಮಾಡುವ ಕರುಣಾಳು ನೀನಲ್ಲ । ದಾರ್ಮತ್ತೆ ಲೋಕದೊಳುಂಟು ॥ ೧೪೪ ॥
ವಿಷಯದ ಸೊಕ್ಕೆಂಬ ವಿಷವೇರಿದವರಿಗೆ । ತುಷಮಾಷಬೋಧಮಂತ್ರದೊಳು ॥
ವಿಷವನುಳುಹಿ ಶಾಂತಿಮಾಡುವ ಪರಮನಿ । ರ್ವಿಷರೂಪ ನೀನಲ್ಲದುಂಟೆ ॥ ೧೪೫ ॥
ಎಂಟುಕರ್ಮಗಳೆಂಬ ಸರ್ಪಗಳೆಂಟರ । ಗಂಟಲೊಳಿರ್ದ ಜೀವರಿಗೆ ॥
ಕಂಟಕವನು ಪರಿದಿಟ್ಟು ಮುಕ್ತಿಯನೀವ । ರುಂಟೆ ನೀನಲ್ಲದೆ ಸ್ವಾಮಿ ॥ ೧೪೬ ॥
ಭವವೆಂಬ ಜಲಧಿಯ ಸುಳುಹಿನೊಳಗೆ ಸಿಕ್ಕಿ । ಜವನೆಂಬ ಮೊಸಳೆಯ ಬಾಯ್ಗೆ ॥
ಕವಳವಾದಾತ್ಮರ ಹಿಡಿದೆತ್ತಿ ಮೋಕ್ಷದೋ । ರುವ ದಕ್ಷ ನೀನಲ್ಲದುಂಟೆ ॥ ೧೪೭ ॥
ಬದುಕಿದೆವೆಲೆ ಸ್ವಾಮಿ ನಿನ್ನ ಪಾದವ ಕಂಡು । ಸದರಗಾಣಿಸಿತಾತ್ಮಸಿದ್ಧಿ ॥
ಇದರಿಂದ ಹೆಚ್ಚಿನ ಲಾಭವಿಲ್ಲೆಮಗೆಮ್ಮ । ಹದನ ನಾವಿನ್ನು ಯೋಚಿಪೆವು ॥ ೧೪೮ ॥

ಕೇಳ್ದಿಯ ಶತ್ರುಂಜಯಾತ್ಮ ಮಹಾಜಯ । ಕೇಳ್ದಿಯ ಪೇಳರಿಂಜಯನೆ ॥
ಕೇಳ್ದಿರೆ ರತಿವೀರ್ಯ ಮೊದಲಾದರೆಲ್ಲರೆ । ಮ್ಮಾಳ್ದನ ದಿವ್ಯವಾಕ್ಯವನು ॥ ೧೪೯ ॥
ಕೇಳ್ವ ಕೃತಾರ್ಥನು ನೀನಾತ್ಮಸಿದ್ಧಿಯ । ಪೇಳ್ವ ಸಾಮರ್ಥ್ಯನಾ ಸ್ವಾಮಿ ॥
ಕೇಳ್ವುದನೇನ ಬಲ್ಲೆವು ನೀನು ಪೇಳ್ದಂತೆ । ಕೇಳ್ವುದೊಂದೆ ಕಾರ್ಯ ನಮಗೆ ॥ ೧೫೦ ॥
ಪರಮನ ದಿವ್ಯನಿರೂಪವೆಂಬುದು ಕರ್ಮ । ಧರಣಿಯೊಳಗೆ ಹೂಣಿ ಹೋದ ॥
ಪರಮಾತ್ಮನಿಧಿಯ ಕಾಣಿಸುವ ದಿವ್ಯಾಂಜನ । ದಿರವಾಗುತದೆ ನಮಗೆಲ್ಲ ॥ ೧೫೧ ॥
ಆ ಪರಮೇಶನ ವಾಕ್ಯವೆಂಬುದು ದೇಹ । ಕೂಪಪಾಪಾಂಧಕಾರದೊಳು ॥
ರೂಪಳಿದಾತ್ಮನ ನಿಜವ ತೋರುವ ರತ್ನ । ದೀಪದಂತೆಮಗೆ ತೋರುತದೆ ॥ ೧೫೨ ॥

ಕಲಿಲಹರನ ವಾಕ್ಯವೆಂಬುದು ಭವವೆಂಬ । ಬಲುಬಿಸಿಲೊಳು ಬೆಮರೇರಿ ॥
ತೊಳಲುವವಗೆ ಮುಂದೆ ಹೊಳೆದೊಂದು ಪನ್ನೀರ। ಹೊಳೆಯಂತೆ ಹೊಳೆವುದೆಮ್ಮೊಳಗೆ ॥ ೧೫೩ ॥

ಒಡಲೊಳೆಮಗೆ ಪರಬೊಮ್ಮವು ತೋರಿತು । ಕಡೆಗೆಟ್ಟ ಭವವೆಂಬ ಕಡಲಾ ॥
ಕುಡಿತೆಮಾಡಿತು ಜಿನವಾಕ್ಯ ನಾವಿದ ಕಂಡು । ತಡೆದಿಹುದಿನ್ನೆಮ್ಮ ಕೊರತೆ ॥ ೧೫೪ ॥

ಹಿರಿಯಣ್ಣ ನಡೆದೋಜೆ ಮನೆಗೆಲ್ಲವೆಂಬೊಂದು । ಪರಿಭಾಷೆಯುಂಟದರಿಂದ ॥
ಹಿರಿಯ ನೀನೇನ ಕಂಡುದು ನಮ್ಮ ಕಾಣ್ಕೆ ನಿ । ರ್ಧರಿಸಿಕೊಂಡೆಮ್ಮನುದ್ಧರಿಸು ॥ ೧೫೫ ॥

ಲೇಸನಾಡಿದಿರಿಷ್ಟು ಸಾಕು ನಾವಿನ್ನು ಕೈ । ಲಾಸನಾಥನ ಹಸ್ತದಿಂದ ॥
ಭಾಸುರದೀಕ್ಷೆಯ ಕೈಕೊಂಬವೆನಲದು । ಲೇಸುಲೇಸೆನುತೆದ್ದರೊಡನೆ ॥ ೧೫೬ ॥

ದೇವನ ಪೂಜಿಸಿ ಗಣದನುಮತದಿಂದ । ನಾವು ದೀಕ್ಷೆಯ ಕೊಂಬವೆಂದು ॥
ತಾವು ತಮ್ಮೊಳಗೆ ಯೋಚಿಸಿಯೊಡಬಟ್ಟಾದಿ । ದೇವನರ್ಚನೆಗೆಳಸಿದರು ॥ ೧೫೭ ॥

ಮಾರ್ಗವಿದರು ವ್ಯವಹಾರನಿಶ್ಚಯಮೋಕ್ಷ । ಮಾರ್ಗವ ಕೇಳ್ದು ಪೂಜೆಯನು ॥
ಮಾರ್ಗದಿ ತೊಡಗಿದರೆಂಬಲ್ಲಿಗಿದು **ಮೋಕ್ಷ । ಮಾರ್ಗದ ಸಂಧಿ** ಸುಗಂಧಿ ॥ ೧೫೮ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೫೯ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದಮೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೬೦ ॥

ಸಕಲವಿಕಲ್ಪವರ್ಜಿತ ವಿಶ್ವತತ್ತ್ವದೀ । ಪಕ ದಿವ್ಯಸುಜ್ಞಾನರೂಪಾ ॥
ಅಕಲಂಕ ನನ್ನೆದೆಯೊಳಗಿರು ತ್ರಿಭುವನ । ಮುಕುರಾ ಚಿದಂಬರಪುರುಷಾ ॥ ೧೬೧ ॥

ಮೋಕ್ಷಮಾರ್ಗಸಂಧಿ ಸಂಪೂರ್ಣಂ

# ದೀಕ್ಷಾಸಂಧಿ

ಶ್ರೀಳಿವೆಳಗಿನ ತೀರ್ಥರೂಪನೆ ತಿಂಗಳ । ಬೆಳಗಿನೊಳಾದ ಪುತ್ಥಳಿಯೆ ॥
ತಳುವಾಡದೆನಗೆ ಸನ್ಮತಿದೋರು ಸುಜ್ಞಾನ । ನಿಳಯಾ ನಿರಂಜನಸಿದ್ಧಾ ॥ ೧ ॥

ಜಿನಜಿನ ಭರತಚಕ್ರಿಯ ತನೂಜರದೊಂದು । ವಿನಯುವನೇನ ಬಣ್ಣಿಪೆನು ॥
ಜಿನಬೋಧೆಗೇಳ್ವರು ಪೂಜಿಸಿದಲ್ಲದೆ । ಜಿನದೀಕ್ಷೆಯನು ಬೇಡಿತಿಲ್ಲ ॥ ೨ ॥

ಪೂಜೆಯ ಮೇಲೆ ಜಿನಗೆ ಕಾಂಕ್ಷೆಯಿಲ್ಲದ । ನಾ ಜಾಣರುರೆ ಬಲ್ಲರಹುದು ॥
ಪೂಜಿಸಿದರು ಮಂಗಳಾರ್ಥಕೆ ವ್ಯವಹಾರ । ದೋಜೆಯೆ ಮೊದಲೊಮ್ಮೆ ಬೇಕು ॥ ೩ ॥

ನಿಮಿಷದೊಳಗೆ ಮಿಂದು ಕೂಡೆ ಸಿಂಗರಿಸಿಯು । ತ್ತಮವಸ್ತುಚಯುವ ಸಂಗ್ರಹಿಸಿ ॥
ಅಮರೇಂದ್ರನನುಮತದಿಂದ ಸ್ವಾಮಿಯ ಪೂಜೆ । ಗಮಲಚಿತ್ತರು ತೊಡಗಿದರು ॥ ೪ ॥

ಸಾರಿ ಪೂಜಿಪರು ಕೆಲಬರು ತಮ್ಮೊಳು ಪರಿ । ಚಾರಕರಲ್ಲಿ ಕೆಲಬರು ॥
ಸಾರವಸ್ತುವ ನೀಡಿ ಕೊಡುವರು ಕೆಲಬರಿಂ । ತಾರಾಧಿಸಿದರಾದಿಜಿನನಾ ॥ ೫ ॥

ಸಕಲಚಿಂತೆಯು ಬಿಟ್ಟು ಕಾಯವಾಙ್ಮನಸೆಂಬ । ತ್ರಿಕರಣಶುದ್ಧಿಯ ಪಡೆದು ॥
ಸಕಲೀಕರಣವನು ಮಾಡಿಕೊಂಡಿಷ್ಟದಾ । ಯಕನ ಪೂಜಿಸಿದರಿಚ್ಛೆಯೊಳು ॥ ೬ ॥

ಓಂಕಾರಪೂರ್ವಕವಾಗಿ ಮಂತ್ರವನೆತ್ತಿ । ಹ್ರೀಂಕಾರಮರುಹಂಕಾರ ॥
ಹೂಂಕಾರ ಸೂಚನೆಯಿರೆ ಭೃಂಗನಿಕರದ । ಝೀಂಕಾರವೆನಲೆಸಗಿದರು ॥ ೭ ॥

ಕರಯುಗದಿಂದಪರಂಜಿಯ ಗಿಂಡಿಯ । ನಿರದೆತ್ತಿ ಮಂತ್ರಸಾಕ್ಷಿಯೊಳು ॥
ಪರಿಮಳಜಲಧಾರೆಮಾಡಿದರರುಹಗೆ । ಸುರರೆಲ್ಲ ಜಯಜಯಯೆನಲು ॥ ೮ ॥

ಸುರಭೇರಿ ಸಿತಶಂಖಮೊದಲಾಗಿ ದ್ವಾದಶ । ವರಕೋಟಿವಾದ್ಯಗಳೆಲ್ಲ ॥
ತರತರದೊಳು ಕೂಡಿ ಘೂರ್ಣಿಸಿದುವು ಬಲು । ಶರನಿಧಿ ಘೂರ್ಣಿಸುವಂತೆ ॥ ೯ ॥

ಗಂಧಗಜಾರಿಯ ಮೇಲಣ ಕಮಲಸು । ಗಂಧಕೆ ಗಂಧವಾದವಗೆ ॥
ಗಂಧರ್ವರೆಲ್ಲರು ಜಯಯೆನೆ ದಿವ್ಯಸು । ಗಂಧವನವರರ್ಚಿಸಿದರು ॥ ೧೦ ॥

ಅಕ್ಷಯಮಹಿಮಗೆ ವಿಮಲಾಕ್ಷನಿಗೆ ವಿಜಿ । ತಾಕ್ಷಗವರು ಭಕ್ತಿಯಿಂದ ॥
ಅಕ್ಷತೆಗಳ ತೆಗೆದರ್ಚಿಸಿದರು ಸಿದ್ಧ । ಯಕ್ಷರು ಜಯಜಯಯೆನಲು ॥ ೧೧ ॥

ಪುಷ್ಪವಂತರು ಕೋಟಿಸುಪ್ರಭಗಭಿನವ । ಪುಷ್ಪಬಾಣರು ತೆಗೆತೆಗೆದು ॥
ಪುಷ್ಪವನರ್ಚನೆಮಾಡಿದರೊಡನೆ ವ । ಪುಷ್ಪುಳಕಿಸುತಿರೆ ತವಗೆ ॥ ೧೨ ॥

ಪರಸಂಗವಿಲ್ಲದೆ ನಿಜದೊಳುಣ್ಬಾವ ಸುಖ । ಭರಿತಗವರು ರಾಗದಿಂದ ॥
ಪರಮಾನ್ನವನು ಸಮರ್ಪಿಸಿದರು ಹೊಸಹೊನ್ನ । ಹರಿವಾಣದೊಳು ಹಸ್ತವೆತ್ತಿ ॥ ೧೩ ॥

ಸೂರ್ಯಗೆ ಸೊಡರನೆತ್ತುವವೊಲು ಮೂಲೋಕ । ಸೂರ್ಯಗವರು ಲೀಲೆಯಿಂದ ॥
ಆರ್ಯರೆಲ್ಲರು ಜಯಜಯಯೆನೆ ಕರ್ಪೂರ । ದಾರ್ಯದಾರತಿಯನೆತ್ತಿದರು ॥ ೧೪ ॥

ಸ್ವಾಮಿಗೆ ಧೂಪವನಿಕ್ಕಿದರಾ ಧೂಪ । ಧೂಮ ಕಪ್ಪಳಿದ ಕಾಂತಿಯೊಳು ॥
ವ್ಯೋಮಕೆ ನೆಗೆದುದು ಕಂಪುಗೂಡಿದನೊಂದು । ಕಾಮನ ಬಿಲ್ಲಿದ್ದುದೆನಿಸಿ ॥ ೧೫ ॥

ವಿಫಲವಾಗುವ ಜನ್ಮ ನಿನ್ನ ಕಂಡುದರಿಂದ । ಸಫಲವಾದುದು ಜಿನನಾಥಾ ॥
ಅಫಲವಾಗಲಿ ಕರ್ಮ ಮುಕ್ತಿ ಫಲಿಸಲೆಂದು । ಸುಫಲವಸ್ತುವನರ್ಚಿಸಿದರು ॥ ೧೬ ॥

ವರರತ್ನದೀಪಗಳಿಂದ ಕನಕರತ್ನ । ವಿರಚಿತಫಲಪುಷ್ಪದಿಂದ ॥
ಸುರಗಿರಿಯಂತೆ ಸಿಂಗರಿಸಿದರ್ಘ್ಯಗಳ ಸಿಂ । ಗರಿಗರೆತ್ತಿದರಾದಿಜಿನಗೆ ॥ ೧೭ ॥

ಸಂತಾಪಬಡುತಿಹ ಸರ್ವಜೀವರ ದುಃಖ । ಶಾಂತಿಯಾಗಲಿಯೆಂದು ಜಿನಗೆ ॥
ಶಾಂತಿಧಾರೆಯನೊಲ್ದು ಮಾಡಿದರದು ಮುಕ್ತಿ । ಕಾಂತೆಯ ಕೈಧಾರೆಯಲ್ತೆ ॥ ೧೮ ॥

ರಂಜಿಪ ಪೊಮ್ಮಡಿ ಬೆಳ್ಳಿಯ ಪೂವಪ । ರಂಜಿಯ ಪೂಗಳ ತಂದು ॥
ಮಂಜುಳಪುಟತುಂಬಿ ತೆಗೆದಾದಿಜಿನಗೆ ಪು । ಷ್ಪಾಂಜಲಿಮಾಡಿದರೊಡನೆ ॥ ೧೯ ॥

ವೆಜ್ಜವಾಗದ ಮುತ್ತು ಪವಳ ಮಾಣಿಕ ಪಚ್ಚೆ । ಸಜ್ಜಾತಿನೀಲ ಗೋಮೇಧಿ ॥
ಬಜ್ಜರ ವೈಡೂರ್ಯ ಪುಷ್ಯರಾಗಗಳ ಕೆಂ । ಬಜ್ಜೆಗಳೆಡೆಗೆ ಸೂಸಿದರು ॥ ೨೦ ॥

ವಾದ್ಯನಿರ್ಘೋಷ ನಿಂದುದು ವಿಭುವಿನ ಮುಂದೆ । ವಿದ್ಯಾನಂದರು ನಿಂದು ॥
ಆದ್ಯ ವಯಂ ಸುಖಿನೋಭೂಮ ದೇವಯೆಂ । ದುದ್ಯುಕ್ತರಾದರು ಸ್ತುತಿಗೆ ॥ ೨೧ ॥

ಜಯಜಯ ಜಾತಿಜರಾತಂಕಮೃತ್ಯುಸಂ । ಚಯದೂರ ದುಃಖಸಂಹಾರಾ ॥
ಜಯಜಯ ನಿಶ್ಚಿಂತ ಶಾಂತ ನಿರ್ಲೇಪ ನಿ । ನ್ನಯ ಪಾದಗಳೆ ಶರಣೆಮಗೆ ॥ ೨೨ ॥

ಪಾಪಾಂಧಕಾರವಿದ್ರಾವಣ ಮದನದ । ರ್ಪಾಪಹರಣ ಭವಮಥನಾ ॥
ಕೋಪಾಗ್ನಿಶೀತಲಜಲಧರ ನಮ್ಮ ಸಂ । ತಾಪವ ಕೆಡಿಸಾದಿನಾಥಾ ॥ ೨೩ ॥

ಕರ್ಮಮಹಾರಣ್ಯದಾವಾಗ್ನಿ ದಶವಿಧ । ಧರ್ಮೋದ್ಧಾರ ಸುಸಾರಾ ॥
*ಧರ್ಮಧರ್ಮಿಯನೊಂದುಮಾಡಿ ಕಾಣಿಸಿ ನಮ್ಮ । ನಿರ್ಮಲರೆನಿಸಾದಿವಸ್ತು ॥ ೨೪ ॥

ಜಗವೆ ವಿಶಾಲವೀ ಜಗದಿಂದ ನೋಡಲಾ । ಗಗನ ವಿಶಾಲ ಮತ್ತದನು ॥
ಮಿಗುವ ಸುಜ್ಞಾನ ವಿಶಾಲ ನಿನ್ನನು ನಾವು । ಪೊಗಳಬಲ್ಲೆವೆ ಮಹಾದೇವಾ ॥ ೨೫ ॥

ಸುರಭೂಜ ಕೊಡುವ ದಿವ್ಯಾನ್ನಕೆ ಲೇಸಾದ । ನಿರುಪಮನಿಜಸುಖ ನಿನಗೆ ॥
ತರುಫಲಭಕ್ಷ್ಯವನರ್ಚಿಪುದೆಮ್ಮಯ । ತರಳರ ಭಕ್ತಿಯಿದಲ್ತೆ ॥ ೨೬ ॥

---

*ಧರ್ಮಾಧರ್ಮ ಸ್ವರೂಪವ ಕಾಣಿಸು । ನಿರ್ಮಲ ನೀನಾದಿವಸ್ತು ॥

ಧ್ಯಾನದೊಳಾತ್ಮನೊಳಗೆ ನಿಮ್ಮ ತಂದು ಸಂ । ಧಾನಿಸಿ ಭಾವಶುದ್ಧಿಯೊಳು ॥
ಜ್ಞಾನಪೂಜೆಯ ಮಾಡಲಾರದನ್ನೆಗ ನಿಮ್ಮ । ನೀ ನವ್ಯಫಲವೊಳರ್ಚಿಸೆವು ॥ ೨೭ ॥

ತಿರುಗಿ ತಿರುಗಿ ಸಾಷ್ಟಾಂಗವೆರಗಿ ನಿಂದು । ಕರಗಳ ಮುಗಿದು ಕೀರ್ತಿಸುತ ॥
ಹರುಷದೊಳೋಕುಳಿಯಾಡುತ ಬಲಗೊಂಡು । ಬರುತಿರ್ದರವರು ಭಕ್ತಿಯೊಳು ॥ ೨೮ ॥

ಹೇಮಗಿರಿಯ ಸುತ್ತಿ ಬರುತಿರ್ದ ಸಂಪೂರ್ಣ । ಸೋಮಸೂರ್ಯರ ಪೌಜಿನಂತೆ ॥
ಹೇಮವರ್ಣರು ಬಲಗೊಂಡರು ನೋಳ್ಪರೆ । ಲ್ಲಾ ಮಝು ಭಕ್ತಿ ಲೇಸೆನಲು ॥ ೨೯ ॥

ಉಕ್ಕಿ ಹರಿದು ಜಿನತನುಕಾಂತಿ ಸಭೆಯೊಳೆ । ತೆಕ್ಕನೆ ತುಂಬಿರಲಲ್ಲಿ ॥
ಹೊಕ್ಕು ನಡೆದರೊಂದು ಕಾಂತಿಯ ತೀರ್ಥವ । ಹೊಕ್ಕು ಹೋಹಂತೆ ಲೀಲೆಯೊಳು॥ ೩೦ ॥

ತಂಪಿನ ಬಿಸಿಲ ಹೆದ್ದೊರೆಯಲ್ಲಿ ಹೋಹಂತೆ । ತಂಪುಕಂಪಿನ ಸೊಡರುಗಳ ॥
ಗುಂಪಿನೊಳಗೆ ನಡೆವಂತೆ ನಡೆದರೊಂದು । ಸಂಪತ್ತನೇನೆಂಬೆನವರ ॥ ೩೧ ॥

ರತ್ನಸುವರ್ಣನಿರ್ಮಿತಗಂಧಕುಟಿಯೊಳು । ರತ್ನಗರ್ಭರು ಜಿನರೆಂಬ ॥
ರತ್ನಗಳಿರುತಿರೆ ನಡೆದರಿದೊಂದು ಸು । ರತ್ನದ ದೀವಿಯೆಂದೆನುತ ॥ ೩೨ ॥

ಜಿನವಿಭುವಿನ ಸಿಂಹಪೀಠವ ಬಳಸಿರ್ದ । ಜಿನರನೆಲ್ಲರನು ವಂದಿಸುತ ॥
ವಿನಯರತ್ನರು ನಡೆದರು ರವಿಕೀರ್ತಿರಾ । ಜನ ಮುಂದುಮಾಡಿಕೊಂಡಾಗ ॥ ೩೩ ॥

ಜಿನಗಣದೊಳು ಮುನ್ನ ತನಗೆ ಪೊಲಂಬುಳ್ಳ । ಜಿನರ ಕಂಡವರ ಪೂರ್ವವನು ॥
ಅನುಜರರಿಯಲೆಂದು ಪೆಸರುಗೊಂಡೆರಗುತೊ । ಯ್ಯನೆ ಬಂದನಾ ಹಿರಿಯಣ್ಣ ॥ ೩೪ ॥

ಆ ಮುಹಿಮರ ಮೊತ್ತದೊಳು ಕಂಡನೊರ್ವನಾ । ಸೋಮಸೂರ್ಯರ ನಗುತಿಹನಾ ॥
ಸ್ವಾಮಿಗಕಂಪಜಿನಗೆ ನಮಿಸುವೆನೆಂದ । ನಾಮೋದಿರವಿಕೀರ್ತಿರಾಜಾ ॥ ೩೫ ॥

ಅರಿದರಾಗಳೆ ಈತ ವಾರಾಣಸಿಯ ಪುರ । ದೊರೆಯನಕಂಪಭೂವರನು ॥
ತೊರೆದು ತಪಸುಮಾಡಿ ಜಿನನಾದನೆಂದೊಡ । ನೆರಗಿದರವರು ಭಕ್ತಿಯೊಳು ॥ ೩೬ ॥

ಯುವರಾಜನೆನಿಪರ್ಕಕೀರ್ತಿರಾಜಗೆ ತನ್ನ । ಕುವರಿಯನಿತ್ತು ರಾಜ್ಯವನು ॥
ಕುವರಗಿತ್ತಿಂತುಟಾದನು ತಪಸಿಂದಿನ್ನು । ನವಗಿದೆ ದೃಷ್ಟಾಂತವಲ್ತೆ ॥ ೩೭ ॥

ಎಂದು ನೆನೆವುತ ಮುಂದಕೆ ಪೋಗಲಾ ಜಿನ । ವೃಂದದೊಳಿರ್ವರು ಮತ್ತೆ ॥
ಇಂದುರವಿಗಳಿಂತು ಜಿನರೂಪ ಕೈಕೊಂಡು । ನಿಂದರೊಯೆನಲಿರ್ದರಲ್ಲಿ ॥ ೩೮ ॥

ಸೋಮಪ್ರಭಜಿನ ಜಯಜಯ ಶ್ರೇಯಾಂಸ । ಸ್ವಾಮಿ ನಮೋ ನಮೋಯೆಂದಾ ॥
ಆ ಮಾತಿನಿಂದ ತಮ್ಮಂದಿರವರ ಜನ್ಮ । ಭೂಮಿ ಮುಂತಾಗೆ ತಿಳಿದರು ॥ ೩೯ ॥

ಸೋಮಪ್ರಭರಾಜಶ್ರೇಯಾಂಸನೃಪರೆಂಬ । ನಾಮವಾಂತೊಡಹುಟ್ಟಿದವರು ॥
ಭೂಮಿಸಂಪದವ ಮೋಕ್ಷೇಶ್ವರಗಂದಿತ್ತು । ಈ ಮಹಿಮೆಯನಾಂತರಲ್ತೆ ॥ ೪೦ ॥

ಜಿನ ಜಿನ ಜಿನದೀಕ್ಷೆ ಸದರವೆ ಲೋಕಪಾ । ವನವಲ್ಲವೆಯೆಂದು ನೆನೆದು ॥
ಅನುರಾಗದಿಂದವರಿರ್ವರಿಗೆರಗಿ ಮೆ । ಲ್ಲನೆ ನಡೆತಂದರು ಮುಂದೆ ॥ ೪೧ ॥

ಆ ಕಾಂಕ್ಷೆಯೊಳೆ ಮತ್ತೆ ಕಂಡನಿರ್ವರನು ಮ । ಹಾಕಾಂತಿವೆತ್ತ ಚಿನ್ಮಯರಾ ॥
ಶ್ರೀಕಚ್ಛಜಿನಗೆ ಮಹಾಕಚ್ಛಜಿನಗೆ ಸ । ದಾಕಾಲ ನಮಿಸುವೆನೆಂದಾ ॥ ೪೨ ॥



ಇವರು ಚಕ್ರೇಶನ ಸೋದರವೂವಂದಿ । ರವಧೂತಕಲ್ಮಷರಾಗಿ ॥
ಧ್ರುವವ ಪಡೆದರೆಂದು ತಮ್ಮಂದಿರರಿದು ತಾ । ವವರಿರ್ವರಡಿಗೆರಗಿದರು ॥ ೪೩ ॥

ಮುಂದೊರ್ವ ಜಿನನ ಕಂಡರು ತೋರ್ಪರಿಗೆಲ್ಲ । ರಿಂದ ಹೆಚ್ಚಾದ ಮೂರ್ತಿಯನು ॥
ಅಂದಿನ ಕಾಲದ ಕಾಮದೇವನ ತಪ । ಸಿಂದ ಮತ್ತುರುಹನಾದವನಾ ॥ ೪೪ ॥

ಪಚ್ಚೆಗಿರಿಯು ತಾನೆ ಜಿನರೂಪವಾಂತು ಪ । ಳಚ್ಚನೆ ನಿಂದುದೆಂದೆನಿಸಿ ॥
ಅಚ್ಚುಗ ನೋಡುವರಿಗೆ ಭುಜಬಲಿಜಿನ । ಗಚ್ಚರಿವಟ್ಟೆರಗಿದರು ॥ ೪೫ ॥

ಭರತೇಶನೊಡಹುಟ್ಟಿದವರಹುದಾತಗೆ । ಕರವ ಮುಗಿಯಲೊಲ್ಲೆವೆಂದು ॥
ಉರುದೀಕ್ಷೆವಡೆದ ನೂರ್ವರೊಳಲ್ಲಿ ಕಂಡರು । ಅರುಹರಾದವರ ಕೆಲಬರಾ ॥ ೪೬ ॥

ಜನಕರೆಲ್ಲರು ದೀಕ್ಷೆವಡೆದು ಶುಭಧ್ಯಾನ । ದನುಭಾವದೊಳು ಕರ್ಮವಳಿದು ॥
ಜಿನರಾದರಿಂತಾಗಬೇಡವೆ ನಾವೆಂದು ; ನೆನೆವುತೆಲ್ಲರಿಗೆರಗಿದರು ॥ ೪೭ ॥

ಒಳಗಣ ಲಕ್ಷ್ಮೀಮಂಟಪದೊಳು ಪುಗುತವೆ । ನಲಿದು ಮೂರ್ಸಾಳ್ವಲವಂದು ॥
ಘಳಿಲನೆ ಹೊರಗಣ ಲಕ್ಷ್ಮೀಮಂಟಪ । ಕೊಲವಿಂದ ನಡೆದರೊಪ್ಪದೊಳು ॥ ೪೮ ॥

ಅಲ್ಲಿ ಮೆರೆಯುವ ಪನ್ನೆರಡುತೆರದ ಸಭೆ । ಯಲ್ಲಿ ಮೊದಲ ಸಭೆಯೆನಿಪ ॥
ಸಲ್ಲಲಿತಾಚಾರ್ಯಸಭೆಯ ಹೊಕ್ಕರು ಮನ । ದುಲ್ಲಾಸಗೂಡಿ ಕೋವಿದರು ॥ ೪೯ ॥

ನೆರೆದ ಸಕಲಮುನಿವರರೊಳೆಂಭತ್ತುನಾ । ಲ್ವರು ಮುಖ್ಯರಾ ಮುಖ್ಯರೊಳಗೆ ॥
ಹಿರಿಯರೆನಿಸಿಕೊಂಡ ವೃಷಭಸೇನಾರ್ಯರ್ಗೆ । ಹಿರಿದುಭಕ್ತಿಯೊಳೆರಗಿದರು ॥ ೫೦ ॥

ಸಾರ್ವಭೌಮಗೆ ತಮ್ಮನುಳಿದ ಕುವರರೊಳು । ಸರ್ವರಿಗಣ್ಣನಾಗಿರ್ದ ॥
ಸರ್ವಜ್ಞನಗ್ರಸಚಿವನಾದ ಯೋಗಿಗ । ಪೂರ್ವಭಕ್ತಿಯೊಳೆರಗಿದರು ॥ ೫೧ ॥

ಮತ್ತಿನ ಗಣಧರರೆಲ್ಲರಿಗೆರಗುತ । ಸುತ್ತಿ ಬಹಾಗ ಗೋಷ್ಠಿಯೊಳು ॥
ಚಿತ್ತವಿಶೋಧಿಮಾಳ್ಪನ ಕಂಡರಲ್ಲಿಯೆ । ಪ್ಪತ್ತೊಂದನೆಯ ಗಣಧರನಾ ॥ ೫೨ ॥

ಜಯಜಯ ಮೋಕ್ಷೇಶ್ವರಯೋಗಿ ನೀನು ವಿ । ಸ್ಮಯಪೂರುಷನಲಾಯೆಂದು ॥
ಭಯಭಕ್ತಿಯಿಂದೆರಗಿದರು ವಿರಕ್ತಿ ತ । ನ್ಮಯ ಚಿತ್ತದೊಳು ಕುಣಿದಾಡೆ ॥ ೫೩ ॥

ವಿಜಯಯೋಗಿಯನು ಜಯಂತಯೋಗಿಯನು ಭಾ । ವಜರೂಪರಭಿವಂದಿಸಿದರು ॥
ನಿಜವಾದುದೆಮಗೆ ದೀಕ್ಷೆಯ ಕಾರ್ಯವಿನ್ನು ದಿ । ಗ್ವಿಜಯವೆಂದುಬ್ಬಿದರೊಡನೆ ॥ ೫೪ ॥

ಮುನಿಸಮುದಾಯವೆಲ್ಲಕೆ ವಿನಯವ ಮಾಡಿ । ಅನಿಮಿಷರಾಜನ ಕಂಡು ॥
ವಿನಯನಿಧಾನರಾತನ ಕೂಡೆ ತಮ್ಮಯ । ಮನದನುಭವವ ಪೇಳಿದರು ॥ ೫೫ ॥
ಬಿಡುಗಣ್ಣನಾಡಿನೊಡೆಯ ಕೇಳು ನೀನು ನಿ । ನ್ನೊಡೆಯಗೆ ಬಿನ್ನಹಮಾಡಿ ॥
ಕೊಡಿಸು ನಮಗೆ ಜಿನದೀಕ್ಷೆಯ ನಿನಗದು । ಕೊಡುವುದು ಮುಂದೆ ಮುಕ್ತಿಯನು ॥ ೫೬ ॥
ನೋಡಲರಿಯೆವು ಸ್ವಾಮಿಯನೊಮ್ಮೆ ಬಿನ್ನಹ । ಮಾಡಲರಿಯೆವು ನೀನೆಮ್ಮಾ ॥
ನೋಡುತ ಸುಮ್ಮನಿಪ್ಪುದು ಲೇಸೆ ಬಾ ಮೇಲು । ನಾಡಿನರಸೆ ಸ್ವಾಮಿಗುಸುರು ॥ ೫೭ ॥
ನಿಮ್ಮನುಭವ ನಿಮ್ಮ ತಿಟ್ಟವೆಂಬುದು ಪರ । ಬೊಮ್ಮವ ತುಡುಕಿ ತೂಗುತಿದೆ ॥
ನಮ್ಮ ಕೇಳಲದೇಕೆ ನೀವೆಸಗಿದ ಕಾರ್ಯ । ನಮ್ಮ ಸಮ್ಮತವೆಂದನಿಂದ್ರಾ ॥ ೫೮ ॥
ಎನಲೊಡನಲ್ಲಿಂದ ನಡೆದು ವೃಷಭಸೇನ । ಮುನಿಗೆ ಮತ್ತೊಮ್ಮೆ ತಾವೆರಗಿ ॥
ಜಿನನಾಥನಿಂದ ದೀಕ್ಷೆಯ ಕೊಡಿಸೆಮಗೆಲೆ । ಮುನಿನಾಥಯೆಂದರಾ ನೃಪರು ॥ ೫೯ ॥
ಕೊಡಿಸುತಿರ್ದಪುದು ನಿಮ್ಮಯ ಪುಣ್ಯ ತನ್ನ ತಾ । ನೊಡಗೊಂಡು ಬಂದು ದೀಕ್ಷೆಯನು ॥
ಎಡಬಲನನು ಹಾರಲೇಕೆ ನೀವೆ ಜಗ । ದೊಡೆಯನ ಬೇಡಿರಿತ್ತಪನು ॥ ೬೦ ॥
ನಮ್ಮನುಮತವದು ದ್ವಾದಶಗಣಕೆಲ್ಲ । ಸುಮ್ಮಾನ ಲೋಕದ ಪುಣ್ಯಾ ॥
ನಿಮ್ಮ ಕಾರ್ಯವ ನೀವು ಮಾಳ್ಪುದೆಂದಾ ಯೋಗಿ । ಸುಮ್ಮನೆ ಬೀಳ್ಕೊಟ್ಟನವರಾ ॥ ೬೧ ॥

ಗಣದನುಮತದಿಂದ ನಡೆದು ಸ್ವಾಮಿಯ ಮುಂದೆ । ಪಣೆಗೆ ಕೈಗಳ ಸಾರ್ಚಿ ನಿಂದು ॥
ಫಣಿಸುರನರಲೋಕಗತಿ ವಿಶ್ವಜೀವರ । ಕ್ಷಣನೆ ಬಿನ್ನಹವೆಂದರಿಂತು ॥ ೬೨ ॥
ಸಂದುದನಾದಿಯಾಗಿರೆ ಕಾಲವದರೊಳು । ಬಂದೆವು ಬಲುಭವದೊಳಗೆ ॥
ನೊಂದೆವು ನೊಂದವರೆಮ್ಮ ಹುಯ್ಯಲನಿಂತು । ತಂದೆವು ನಿನಗೆ ಕೃಪಾಳು ॥ ೬೩ ॥
ನಿನ್ನ ಕಾಣದ ಮುನ್ನ ನೋವದುಂಟಾದುದು । ನಿನ್ನ ಕಂಡಿನ್ನು ನೋವುಂಟೆ ॥
ಇನ್ನಿಲ್ಲವದ ಬಲ್ಲೆವದರಿಂದ ನೀನೆಮ್ಮ । ಬಿನ್ನಹವೊಂದ ಚಿತ್ತೈಸು ॥ ೬೪ ॥
ಕಾಲನನಟ್ಟಿ ಕಾಮನ ಮೆಟ್ಟಿ ದುಷ್ಕರ್ಮ । ಜಾಲವೆಲ್ಲವ ಹುಟ್ಟುಗುಟ್ಟಿ ॥
ಧಾಳಿಮಾಡುವೆವು ಮುಕ್ತಿಗೆ ಜಿನದೀಕ್ಷೆಯ । ಪಾಲಿಸಬೇಕೆಮಗರುಹಾ ॥ ೬೫ ॥
ದಂಡಿಸಿ ಮನವನಾತ್ಮನೊಳಿಟ್ಟು ಧ್ಯಾನದ । ಖಂಡೆಯದಿಂದ ಕರ್ಮಗಳಾ ॥
ತುಂಡುತುಂಡಿಗೆ ಹೊಯ್ದು ತೋರ್ಪೆವು ತ್ವದ್ದೀಕ್ಷೆ । ಗೊಂಡ ಬಳಿಕ ನೋಡು ಸ್ವಾಮಿ ॥ ೬೬ ॥
ಬಡವರಹುದು ಸ್ವಾಮಿ ನಿನ್ನ ದೀಕ್ಷೆಯ ಹಸ್ತ । ವಿಡಿದ ಮೇಲೆಮಗಿದಿರಾರು ॥
ನುಡಿದಿನ್ನು ತೋರಲದೇಕೆ ದೀಕ್ಷೆಯನೊಲ್ದು । ಕೊಡು ಕೊಟ್ಟ ಮೇಲೆ ನೋಡೆಮ್ಮಾ ॥ ೬೭ ॥
ಮೊಗಸಿದ ಕರ್ಮವ ಸುಟ್ಟು ಚಂದ್ರಾರ್ಕಕೋ । ಟಿಗಳ ಕಾಂತಿಯನಾಂತು ನಿನ್ನ ॥
ಬಗೆಯಂತೆ ಮೆರೆಯದಿರ್ದೊಡೆ ಲೋಕದೊಡೆಯನ । ಮಗನ ಮಕ್ಕಳೆ ನೋಡು ನಮ್ಮಾ ॥ ೬೮ ॥

ಆರುಖಂಡವ ಗೆಲ್ದ ನಮ್ಮಯ್ಯನರುವತ್ತ । ಮೂರುಕರ್ಮವ ಗೆಲ್ದನಜ್ಜ ॥
ಮೂರುಲೋಕದ ಕರ್ಮ ನಮಗಿದಿರೆ ದೀಕ್ಷೆ । ದೋರೆಂದು ಮುದ್ದುದೋರಿದರು ॥ ೬೯ ॥

ಮೋಕ್ಷಕೆ ಕಾರಣ ಧ್ಯಾನವದಕೆ ಬಾಹ್ಯ । ರಕ್ಷೆಯಲ್ಲವೆ ಜಿನದೀಕ್ಷೆ ॥
ದೀಕ್ಷಾಂ ದೇಹಿಯೆಂದೆಲ್ಲರು ಸಾಷ್ಟಾಂಗ । ಲಕ್ಷಿತವೆನಲೆರಗಿದರು ॥ ೭೦ ॥

ಮುಗಿದು ನೀಡಿದ ತೋಳು ನಿಮಿರಿ ಪಾಸಿದ ಕಾಲು । ಮಿಗೆ ಭೂಮಿಮುಟ್ಟಿದ ನೊಸಲು ॥
ಜಗದೀಶನಿದಿರೊಳಿದ್ದರು ಮಿಸುಕದೆ ಹೊನ್ನ । ಹೊಗರ ಪುತ್ತಳಿಗಳೆಂಬಂತೆ ॥ ೭೧ ॥

ಅಸ್ತು ಭವ್ಯಾಸ್ಸಮುತ್ತಿಷ್ಠತಯೆಂದಾದಿ । ವಸ್ತು ನಿರೂಪಿಸಲೊಡನೆ ॥
ಮಸ್ತಕವೆತ್ತಿ ನಿಂದರು ಕೆಲಬಲದ ಸು । ರಸ್ತೋಮ ಜಯಜಯಯೆನಲು ॥ ೭೨ ॥

ಅಮರದುಂದುಭಿ ಮೊಳಗಿತು ಸುರಕಾಂತೆಯ । ರಮೃತಶೋಭನವ ಪಾಡಿದರು ॥
ಸಮಯವನರಿದು ವೃಷಭಸೇನಯೋಗಿಯು । ಅಮರರಾಜನು ಸಾದರವರಾ ॥ ೭೩ ॥

ಬಿಡುಮುತ್ತಿನಕ್ಷತೆಯಿಂದ ನೀಲದ ನೆಲ । ಕಡರಿದ ಸ್ವಸ್ತಿಕಾಳಿಯೊಳು ॥
ಬಡಗ ಮೂಡಲು ಮುಖವಾಗಿ ನೂರ್ವರನು ಕೈ । ವಿಡಿದು ಕುಳ್ಳಿರಿಸಿದರೊಸೆದು ॥ ೭೪ ॥

ಹಸ್ತಗಳೊಳಗೆ ರತ್ನತ್ರಯಯಂತ್ರವ । ಸ್ವಸ್ತಿಕವೆಸೆಯಲುದ್ಧರಿಸಿ ॥
ಪ್ರಸ್ತುತಪುಷ್ಪಫಲಾಕ್ಷತೆಗಳನು ವಿ । ನ್ಯಸ್ತವ ಮಾಡಿದರಲ್ಲಿ ॥ ೭೫ ॥

ಗಲಭೆ ನಿಂದುದು ಸುಕುಮಾರರು ಸ್ವಾಮಿಯ । ಗೆಲವಾಂತು ನಿಟ್ಟಿಸಲೊಡನೆ ॥
ಜಲಧರಪಟಲದ ಮೊಳಗಿನಂತಾಗಲು । ಜ್ಚಳಿಸಿತು ದಿವ್ಯನಿನಾದಾ ॥ ೭೬ ॥

ಭವದ ಮೂಲವ ಭವನಾಶದ ಮೂಲವ । ಧ್ರುವಸಿದ್ಧಿಸಾಧ್ಯಸಾಧನವಾ ॥
ಕಿವಿಗೊಟ್ಟು ಕೇಳುತಿರ್ದರು ಸುಕುಮಾರರು । ವಿವರಿಸುತಿರ್ದನಾ ಸ್ವಾಮಿ ॥ ೭೭ ॥

ಮೋಕ್ಷಮಾರ್ಗದ ಸಂಧಿಯೊಳು ನಾವು ಪೇಳ್ದುದೆ । ಮೋಕ್ಷದುಪಾಯ ಭವ್ಯರಿರಾ ॥
ಈ ಕ್ಷಣದೊಳಗೆ ಪರಿಗ್ರಹವಳಿದುದೆ । ದೀಕ್ಷೆಯೆಂದನು ಮೋಕ್ಷನಾಥಾ ॥ ೭೮ ॥

ಹೊರಗೆ ಪರಿಗ್ರಹ ಪತ್ತುಂಟು ಪದಿನಾಲ್ಕು । ತಿರುಗಿಕೊಂಡಿಹುವಾತ್ಮನೊಳಗೆ
ಹೊರಗೊಳಗಿಪ್ಪತ್ತನಾಲ್ಕು ಪರಿಗ್ರಹ । ಪರಿಪಟ್ಟಿರದು ಜಿನದೀಕ್ಷೆ ॥ ೭೯ ॥

ಹೊಲ ಮನೆ ಧನ ಧಾನ್ಯ ಸೇವಕ ಪಶುಗಳಂ । ದಳ ಪಾಸು ವಸ್ತ್ರ ಭಂಡಾರಾ
ತೊಲಗಿಸಬೇಕವು ಹತ್ತು ಪರಿಗ್ರಹ । ಗಳು ಹೊರಗಿಹುವೆಂದನರುಹಾ ॥ ೮೦ ॥

ಮೋಹ ರಾಗ ದ್ವೇಷ ಹಾಸ್ಯ ಮುಂತಾಗಾರು । ಮೋಹದ ನಾಲ್ಕು ಕಷಾಯಾ ॥
ಮೋಹಿವೆಣ್ಣಾಸೆಯಿಂತೀರೇಳ ಬಿಡಬೇಕು । ಮೋಹಿಸಿದೊಳಗಂಟುಗಳನು ॥ ೮೧ ॥

ದಟ್ಟದರಿದ್ರರು ಮೊದಲಾಗಿ ಹತ್ತನು । ಬಿಟ್ಟಿಹರುಂಟು ಬಾಹ್ಯದೊಳು ॥
ಬಿಟ್ಟಿರಲರಿದೊಳಗಣ ಗಂಟುಹದಿನಾಲ್ಕ । ಬಿಟ್ಟಿರಾದರೆ ಕರ್ಮ ಬಿಡದೆ ॥ ೮೨ ॥

ಆದರಿಂದ ಹೊರಗೆ ಬಿಟ್ಟುದೆ ಬಿಟ್ಟುದೆಂದು ಸ । ಮ್ಮದವಡೆದಿರಬೇಡಿ ನೀವು ॥
ಆದರ ಸಹಾಯದಿಂದೊಳಗಂಟ ಬಿಟ್ಟು ಧ್ಯಾ । ನದೊಳಿರೆ ಸುಖಸಿದ್ಧಿಯಹುದು ॥ ೮೩ ॥

ತನುವೆರವೆಂಬುದ ದೃಢವಮಾಳ್ಪುದಕೆ ಲೋಚು । ತೊನೆವಿಂದ್ರಿಯವ ತಗ್ಗಿಪುದಕೆ ॥
ಮುನಿಗೇಕಭುಕ್ತ ಬೇಕೆಂದು ಕುಮಾರರಿ । ಗನುವದಿಸಿದನಾದಿದೇವಾ ॥ ೮೪ ॥

ಶೌಚಾರ್ಥ ಬೇಕು ಕಮಂಡಲು ಜೀವರ । ಕ್ಷಾಚರಣೆಗೆ ಬೇಕು ಕುಂಚಾ ॥
ಆಚಾರಸೂತ್ರ ಬೇಕಿವು ಯೋಗಿಗಳಿಗೆ ಯ । ಥೋಚಿತದುಪಕರಣಗಳು ॥ ೮೫ ॥

ನೆಲವಕ್ಕೆ ಮೊದಲಾದ ಮೂಲಗುಣಗಳು ಮೆ । ಗ್ಗಳಿಸಿದುತ್ತರಗುಣನಿಚಯಾ ॥
ಹಲವಿವು ಧ್ಯಾನಕೆ ಹೊರಸಹಕಾರಿಗ । ಳೆಲೆ ಭವ್ಯರಿರ ಕೇಳಿರೆಂದಾ ॥ ೮೬ ॥

ಉಪದೇಶ ಸಾಕಿನ್ನು ನೀವೆಲ್ಲ ನಿಮ್ಮಯ । ವಪುವ ಪೂಜಿಸಿದ ಪೂಜೆಯನು ॥
ಅಪಸರಣವ ಮಾಡಿ ರಾಜವೇಷವ ಬಿಟ್ಟು । ತಪಸಿವೇಷವ ತಾಳಿರೆಂದಾ ॥ ೮೭ ॥

ಇಚ್ಛಾಮಿ ಇಚ್ಛಾಮಿಯೆಂದು ಹಸ್ತದ ಫಲ । ಗುಚ್ಛವನಾ ಪುರುಜಿನನ ॥
ಸುಚ್ಛವಿಪೀಠದೊಳಿರಿಸೆಂದು ಕೊಟ್ಟರು । ಇಚ್ಛೆವಟ್ಟಾಂತಮರರಿಗೆ ॥ ೮೮ ॥

ಹೊದೆದ ದುಕೂಲವ ಬಿಸುಟರು ತೆಗೆದರು । ಪದಕವ ಕಳೆದರು ಉಳಿಯಾ ॥
ಒದೆದಾಡುತಿಹ ಕರ್ಣದಾಭರಣಗಳ ಶಾಂ । ತದೊಳು ಸಡಿಲಿಸಿ ಹಾಕಿದರು ॥ ೮೯ ॥

ಉಂಗುರಗಳನುದುರಿಸಿದರು ಕಂಕಣ । ರಂಗಳ ಪರಿದು ಚೆಲ್ಲಿದರು ॥
ಮುಂಗೆಯ್ಯ ಕಡಗ ಹೊನ್ನುಡಿದಾರ ಪಾದಸ । ರಂಗಳ ತೆಗೆದಿಟ್ಟರಿಳೆಗೆ ॥ ೯೦ ॥

ಪೆಂಡೆಯು ಹಾರ ಹೀರಾವಳಿ ಮಾಣಿಕ । ಗೊಂಡೆಯು ರತ್ನಮುದ್ರಿಕೆಯಾ ॥
ಕಂಡಕಡೆಗೆ ಸೂಸಲಿದ್ದುವು ತಂಪಿನ । ಕೆಂಡವ ಕೆದರಿದಂದದೊಳು ॥ ೯೧ ॥

ತಿಲಕವ ತೊಡೆದರು ಯಜ್ಞೋಪವೀತವ । ತೊಲಗಿಸಿದರು ತವತವಗೆ ॥
ತಲೆ ಸುತ್ತ ತೆಗೆದೊಡನೀಡಾಡಲಾ ಕೇಶ । ನೆಲದೊಳಿರ್ದುದು ತೆಕ್ಕೆಗಟ್ಟಿ ॥ ೯೨ ॥

ಕೌಶಲಗೆಟ್ಟ ಮೈಯೂರು ನಾವಾರೆಂದು । ಆ ಸುತರುರೆ ತಾವೆ ತಮ್ಮ ॥
ಕೇಶವ ಪರಿಪರಿದಿಟ್ಟರು ಮನದ ಸಂ । ಕ್ಲೇಶವ ಪರಿದಿಡುವಂತೆ ॥ ೯೩ ॥

ಕೇಶಪಾಶವ ಪರಿದಿಟ್ಟರು ದುರ್ಮೋಹ । ಪಾಶವ ಪರಿದಿಡುವಂತೆ ॥
ಆಶಾಪಾಶವ ಪರಿವಂತೆ ಮಾಯಾ । ಪಾಶವ ಪರಿದಿಡುವಂತೆ ॥ ೯೪ ॥

ಹುಟ್ಟಿದಂದದಿ ಜಾತರೂಪರಾದರು ಮರೆ । ಬಿಟ್ಟು ಹೋದುದು ದೇಹದಿಂದ ॥
ಹುಟ್ಟಿತಾ ಕ್ಷಣವೊಂದು ಪೊಸಕಾಂತಿ ಮಾಣಿಕ । ಸುಟ್ಟರೆ ರಂಗೇರುವಂತೆ ॥ ೯೫ ॥

ಕಾಂತಿಯೊಳಗೆ ಜಾತರೂಪರಾದರು ಕೂಡೆ । ಶಾಂತಿಯೆ ಜಾತರೂಪಾಯ್ತು ॥
ಕಾಂತಿಯೆಂಬುದು ಮುನ್ನಿನಿಂದ ಹೆಚ್ಚಿತು ಮಝು । ನೋಂತವರಾರವರಂತೆ ॥ ೯೬ ॥

ಪುರುಪರಮೇಶ್ವರ ದೀಕ್ಷಾಗುರು ರೂಪ್ಯ । ಗಿರಿ ದೀಕ್ಷೆಗೊಂಬ ಸುಕ್ಷೇತ್ರಾ ॥
ಸುರಪತಿಗಣಧರರುಗಳು ಸಹಾಯರಾ । ಸಿರಿಗೆಣೆಯುಹ್ಮಸಿರಿಯುಂಟೆ ॥ ೯೭ ॥

ಸ್ವಸ್ತಿಕದಿಂದೆಲ್ಲರೆದ್ದು ನಡೆದರಾದಿ । ವಸ್ತುವಿನಂಘ್ರಿಯುಗಲಕೆ ॥
ಮಸ್ತಕವಿಟ್ಟೆರಗಿದರಾತ್ಮಸಿದ್ಧಿರೇ । ವಾಸ್ತುಯೆಂದನು ವೀತರಾಗಾ ॥ ೯೮ ॥

ಕರೆದರಾಗಳೆ ಸುರರಾಕಾಶದೊಳು ನಿಂದು । ನರುಗಂಪ ಕರೆವ ಪೂಮಳೆಯಾ ॥
ತುರುಗಿ ಸೂಳೈಸಿದುವೆಲ್ಲ ವಾದ್ಯಗಳು ಲೇ । ಸರಿದು ಮಂಗಲವ ಪಾಡಿದರು ॥ ೯೯ ॥

ವೃಷಭಸೇನಾಚಾರ್ಯನುಪಕರಣಗಳನು । ವೃಷಭೇಶನಿದಿರಿನೊಳಿಡಲು ॥
ವೃಷಭನಾಥಾಯ ನಮೋಸ್ತೆಂದು ನೂತನ । ಋಷಿಗಳು ಕೈಕೊಂಡರೊಸೆದು ॥ ೧೦೦ ॥

ಕುಂಚವ ಪಿಡಿದರು ಮುಕ್ತಿಯೊಲ್ದಟ್ಟಿದ । ಲಂಚವ ಪಿಡಿವ ರೀತಿಯೊಳು ॥
ಕುಂಚಗಳೆಸೆದುವವರ ಹಸ್ತಸೋಂಕಿಂದ । ಮಿಂಚಿನ ಗೊಂಚಲೆಂಬಂತೆ ॥ ೧೦೧ ॥

ಪಳುಕಿನ ಬಟ್ಟಕಮಂಡಲುವಿಡಿದರು । ಬೆಳಗ ಕೈವಿಡಿವ ರೀತಿಯೊಳು ॥
ಎಳೆವರೆಯುದ ಮುನಿಗಳು ನೂರ್ವರರುಹನ । ಬಳಿಕ ಬೀಳ್ಕೊಂಡರೋಜೆಯೊಳು ॥ ೧೦೨ ॥

ನಡೆದರು ವೃಷಭಸೇನಾಚಾರ್ಯಬಳಿವಿಡಿ । ದೊಡನೆ ಮುನೀಂದ್ರಸಭೆಯೊಳು ॥
ಎಡಬಲದೊಳು ಜಯಜಯಯೆನುತಿರ್ದರು । ಕಡಲುಕ್ಕಿ ಘೂರ್ಣಿಸುವಂತೆ ॥ ೧೦೩ ॥

ರವಿಕೀರ್ತಿಯೋಗಿ ಬಾ ಗಜಸಿಂಹಯೋಗಿ ಬಾ । ದಿವಿಜೇಂದ್ರಯೋಗಿ ಬಾರೆಂದು ॥
ಅವರವರೆಲ್ಲರ ಹೆಸರುಗೊಂಡಾ ಯೋಗಿ । ನಿವಹ ಕರೆದುಕೊಂಡುದೊಳಗೆ ॥ ೧೦೪ ॥

ಬೆಂಬಳಿಯೊಳಗಿಂದ್ರನೆಯ್ತಂದು ಯೋಗಿಕ । ದಂಬದೊಳಿರ್ದ ಯೋಗಿಗಳ ॥
ಕೆಂಬಜ್ಜೆಗಳಿಗೆರಗಿದನೊಲವಿಂದ ತ । ನ್ನಂಬುಜಾನನೆ ಸಹವಾಗಿ ॥ ೧೦೫ ॥

ಶುದ್ಧ ಚಿತ್ತದೊಳು ನಮೋಸ್ತುಗೈದರೆ ಧರ್ಮ । ವೃದ್ಧಿಯೆಂದುರೆ ಹರಸಿದರು ॥
ವೃದ್ಧಿ ತಪ್ಪದು ನಿಮ್ಮ ಹರಕೆಯಿಂದೆನುತ ನಿ । ಬದ್ಧಿಸಿ ಬೀಳ್ಕೊಂಡನಿಂದ್ರಾ ॥ ೧೦೬ ॥

ಯಕ್ಷರು ಗರುಡರು ಗಂಧರ್ವರು ಸುರರು । ನಕ್ಷತ್ರರಮರರು ನರರು ॥
ಆ ಕ್ಷಣದೊಳು ಬಂದು ನಮಿಸಿ ಬೀಳ್ಕೊಂಡರು । ದೀಕ್ಷಿತರಾದ ಯೋಗಿಗಳಾ ॥ ೧೦೭ ॥

ಮುನಿಕುವರರು ಬಿಟ್ಟ ವಸ್ತ್ರಾಭರಣ ಲೋ । ಚಿನ ಕೇಶಗಳನೊಯ್ದು ಸುರರು ॥
ವನಧಿಯೊಳಿಂಬಿಟ್ಟರವರ ವಿರಕ್ತಿಯ । ಮನದೊಳು ಮೆಚ್ಚಿ ಹೊಗಳುತ ॥ ೧೦೮ ॥

ಚಿಕ್ಕಹರೆಯದೊಳು ಚೊಕ್ಕರೂಪಿನೊಳಿಂತು । ಚಿಕ್ಕನೆ ತೊರೆದರಾರೆಂದು ॥
ತೆಕ್ಕೆತೆಕ್ಕೆಯೊಳು ನಿಂದಲ್ಲಲ್ಲಿ ನರಸುರ । ರಕ್ಕರು ಮಿಗೆ ಪೊಗಳಿದರು ॥ ೧೦೯ ॥

ಸಾವಿರಹೊನ್ನು ಸಿಕ್ಕಿದರೆ ಸಾಕದ ತಿಂದು । ಸಾವರಲ್ಲದೆ ತೊರೆದಪರೆ ॥
ಭೂವಲಯುವನೊಂದೆ ಕೊಡೆಯೊಳಾಳ್ವನ ಮಕ್ಕ । ಳೀ ವಿಧವಹುದರಿದಲ್ತೆ ॥ ೧೧೦ ॥

ಮುಪ್ಪಾದ ವಿಾಸೆಗೆ ಕಪ್ಪನಿಟ್ಟಾದರು । ಚಪ್ಪರಿದಾಡುವರುಂಟು ॥
ತುಪ್ಪುಳುವಿಾಸೆಯೊಳಗೆ ತೊರೆದತಿಥಿಗ । ಳಪ್ಪವರಾರಿವರಂತೆ ॥ ೧೧೧ ॥

ಮುಂಬಲ್ಲು ಬಿದ್ದು ವೀಳೆಯವ ಕಲ್ಲೊಳು ಜೆಜ್ಜಿ । ತಿಂಬರಲ್ಲದೆ ಬಿಟ್ಟರಾರು ॥
ಕೆಂಬಲ್ಲ ಚೆನ್ನಿಗರಿಂತು ತೊರೆದು ದೀಕ್ಷೆ । ಗೊಂಬುದು ವಿಸ್ಮಯವಲ್ತೆ ॥ ೧೧೨ ॥

ಚಚ್ಚಹುಚ್ಚಂಗವನಂದಚಂದವ ಮಾಡಿ । ಮೆಚ್ಚಿ ಕೈವಿಡಿದಿಹರುಂಟು ॥
ಉಚ್ಚಳಿಸುವ ಚೆಲ್ವಿನಂಗವ ತಪಸಿಗೆ । ವೆಚ್ಚಿಪರಾರಿವರಂತೆ ॥ ೧೧೩ ॥

ಬಂಡಹುಂಡಿನ ಮೈಯ ಬಣ್ಣಬೆಳಕುಮಾಡಿ । ಕೊಂಡು ಕೈವಿಡಿದಿಹರುಂಟು ॥
ಗಂಡು ಗಂಡಿಗೆ ಮೋಹಿಸುವ ಚೆನ್ನಿಗರು ದೀಕ್ಷೆ । ಗೊಂಡವರಾರಿವರಂತೆ ॥ ೧೧೪ ॥

ಭರತಚಕ್ರಿಯದೊಂದು ಸೇವೆ ಸಿಕ್ಕಿದರದು । ಸಿರಿಯೆಂದು ಬೆರೆದಿಹರುಂಟು ॥
ಧರೆಯೊಳಾತನ ಸುತರಾಗಿ ಸಂಪದವನು । ವಿರಸಗಂಡುದು ಚಿತ್ರವಲ್ತೆ ॥ ೧೧೫ ॥

ಮೋಕ್ಷವಿವರಿಗಾವ ಗಹನವೆಂದೊಲ್ದು ವಿ । ವಕ್ಷಿಸುತಿರ್ದರಲ್ಲಲ್ಲಿ ॥
ದೀಕ್ಷಿತರಾತ್ಮಯೋಗದೊಳಿರ್ದರಿಲ್ಲಿಗೆ । **ದೀಕ್ಷಾಸಂಧಿ** ಸುಗಂಧಿ ॥ ೧೧೬ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ।
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೧೭ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೧೮ ॥

ಹಿಂದು ಮುಂದೆಡ ಬಲ ಪೊರಗೊಳಗಡಿ ಕಡೆ । ಯೆಂದೆನ್ನದಮೃತಸ್ವರೂಪಾ ॥
ಎಂದೆಂದು ನನ್ನ ಚಿತ್ತದೊಳಿರು ಸಚ್ಚಿದಾ । ನಂದ ಚಿದಂಬರಪುರುಷಾ ॥ ೧೧೯ ॥

ದೀಕ್ಷಾಸಂಧಿ ಸಂಪೂರ್ಣಂ

# ಕುಮಾರವಿಯೋಗಸಂಧಿ

ಅಣಿಮಾದಿಗುಣವೆಂಟ ತೃಣಕೆಣೆಗಾಣ್ಬ ಸ । ದ್ಗುಣವೆಂಟನೊಡಗೂಡಿದಭವಾ ॥
ಮಣಿಮುಕುರಂಬೊಲು ಮತಿದೋರು ಲೋಕದ । ಪೂರ್ಣನೆ ನಿರಂಜನಸಿದ್ಧಾ ॥ ೧ ॥

ಒಡೆಯರೆಲ್ಲರು ದೀಕ್ಷೆಗೊಂಡಮೇಲೊಡನಿರ್ದ । ಕಡುಹಿತದೂಳಿಗದವರು ॥
ಹಡಗ ನೀಗಿದ ಪರದರು ಮಗುಳ್ವಂತೂರ । ಕಡೆಗೆ ಮಗುಳ್ದರೇನೆಂಬೆ ॥ ೨ ॥

ಬೆಳ್ಳಿಯ ಬೆಟ್ಟವನಿಳಿದಮೇಲೊಡಲೊಳು । ದಳ್ಳುರಿಯೆದ್ದುದು ಶೋಕಾ ॥
ಹಳ್ಳಿಗಳೊಳು ತಡೆವುತ ಕೇಳ್ದರೆದೆಗಳ । ಕೊಳ್ಳಿಯೊಲ್ಸುಡುತ ಸಾಗಿದರು ॥ ೩ ॥

ಅಳುತಳುತೊಡೆಯರ ಸುದ್ದಿವೇಳ್ವರು ಸರ್ವ । ರಳುತಳುತಲ್ಲಲ್ಲಿ ಕೇಳೆ ॥
ಇಳೆಯನೆಲ್ಲವ ಸುಡುತೆಯ್ತಂದು ಚಕ್ರಿಯ । ಪೊಳಲ ಸಾರಿದರು ಸೇವಕರು ॥ ೪ ॥

ರವಿಕೀರ್ತಿರಾಜನೂಳಿಗದರವಿಂದನೆಂ । ಬವರನೆಲ್ಲರು ಮುಂದುಮಾಡಿ ॥
ಧವರ ನೀಗಿದ ವಿಪ್ರಸತಿಯರಂತೂರ ಹೊ । ಕ್ಕವರೆಯ್ದುತಿರ್ದರುಬ್ಬೆಯೊಳು ॥ ೫ ॥

ಕಳೆಗೆಟ್ಟ ಮೋರೆ ಪಟುತ್ವಗುಂದಿದ ನಡೆ । ಇಳಿವ ಕಣ್ಣೀರು ಬಾಯ್ಮುದ್ರೆ ॥
ತಲೆಗಿಟ್ಟ ಮುಸುಕಿಂದ ಬೀದಿಯೊಳ್ಬರೆ ಕಂಡು । ತಳಹೊಳಗೊಂಡಿತು ನಗರಾ ॥ ೬ ॥

ಕಂಕುಳೊಳವುಚಿದ ಖಂಡೆಯ ಪುಸ್ತಕ । ಸಂಕುಳವೆರಸಿ ಸೇವಕರು ॥
ಮಂಕು ಹೊಯ್ದಂತೆಯ್ದುತಿರೆ ಪುರದವರು ತ । ಳ್ಳಂಕದಿ ಸಾರಿ ಕೇಳಿದರು ॥ ೭ ॥

ಅರಸುಗಳೆಲ್ಲಿದ್ದರಕಟ ನೀವಿಂತೇಕೆ । ಬರುತಿರ್ದಿರೆಂದು ಕೇಳಿದರೆ ॥
ಎರಡುತುಟಿಯ ಮಿಸುಕದೆ ಹೋಗುತಿರ್ದರಂ । ದರಮನೆಗಾಗಿ ಸೇವಕರು ॥ ೮ ॥

ಜಾಣರಾಗಳೆ ತಿಳಿದರು ದೀಕ್ಷೆಗೊಂಡ ಬಿ । ನ್ನಾಣವಿದೆಂತುಟೆಂದೆನಲು ॥
ಕಾಣರೆ ತಿರುಗಿದ ಖಡ್ಗಕಠಾರಿಯು । ವೀಣೆಯುನವು ತಾನೆ ಸಾಕ್ಷಿ ॥ ೯ ॥

ಇವರೊಡೆಯರ ಬಿಟ್ಟು ಬಾರರೆಮ್ಮೊಡೆಯನ । ಕುವರರ್ಗೆ ಪರಬಾಧೆಯಿಲ್ಲ ॥
ಇವರ ಭಾವವೆ ಹೇಳುತಿದೆ ದೀಕ್ಷೆಗೊಂಡರೆಂ । ದವರು ನಿಶ್ಚೈಸಿದರೊಡನೆ ॥ ೧೦ ॥

ಅಲ್ಲವೆಂಬರು ಕೆಲರಹುದೆಂಬರನಿಬರು । ಸೊಲ್ಲಿಸರವರು ನಮ್ಮೊಡನೆ ॥
ಅಲ್ಲಿ ಭೂವರಗುಸುರುವರ್ಯೈಸೆ ಕೇಳ್ವವೆಂ । ದೆಲ್ಲರೆಯ್ದಿದರು ಬೆಂಬಿಡದೆ ॥ ೧೧ ॥

ಕಡೆಯ ಚಾವಡಿಯೊಳಿರ್ದನು ಚಕ್ರಧರನಾಗ । ನಡೆತಂದು ಪೊರ್ದಿ ಸೇವಕರು ॥
ಪಿಡಿದ ಕಠಾರಿಖಂಡೆಯುಗಳ ಮುಂದಿಟ್ಟು । ಕೆಡೆದರು ಮೈನೀಡಿ ಮುಂದೆ ॥ ೧೨ ॥

ಹಮ್ಮುಖವೋದುದು ಸಭೆಯೆಲ್ಲ ಭರತೇಶ । ಸಮ್ಮುಖಗೊಟ್ಟು ನೋಡಿದನು ॥
ದಿಮ್ಮನೆದ್ದರು ಕೂಡೆ ಸೇವಕರೆಲ್ಲರಾ । ಗುಮ್ಮನವ ಕಂಬನಿಗೂಡಿ ॥ ೧೩ ॥

ನೆರೆದರೆಲ್ಲರು ಸುಮ್ಮನಿರ್ದರಾಗರವಿಂದ । ಕರಗಳ ಮುಗಿದೆಲೆ ಸ್ವಾಮಿ ॥
ಸಿರಿವೆತ್ತ ಕುವರರು ನೂರ್ವರು ದೀಕ್ಷೆಗೆ । ತೆರಳಿದರವಧಾನವೆಂದಾ ॥ ೧೪ ॥
ವೀಳೆಯಡೆಲೆ ಹಸ್ತದಿಂ ಬಿದ್ದುದೆದೆಯಲ್ಲಿ । ಬಾಳ ಬೀಸಿದ ತೆರನಾಯ್ತು ॥
ಗೋಳಿಟ್ಟುದಾಸ್ಥಾನ ಕೈಸನ್ನೆಯಿಂದ ಭೂ । ಪಾಲಕ ನಿಲಿಸಿ ಕೇಳಿದನು ॥ ೧೫ ॥
ಹೇಳೆಂತುಟೆಲವೊ ಹಾ ಹೋದರೆ ಸ್ವಾಮಿ ನಾ । ಕೈಲಾಸದೊಳು ಕಂಡು ಬಂದೆ ॥
ಮೇಲಲ್ಲಿ ದೀಕ್ಷೆಗೊಂಡರು ಧರ್ಮವೃದ್ಧಿಯೆಂ । ದಾಲಾಪಿಸಿದರಿಂದ್ರನೆರಗೆ ॥ ೧೬ ॥
ಮೋರೆ ಕಂದಿತು ಮಾತು ನಿಂದಿತು ಹನ್ನನೆ । ಹಾರಿತು ನೃಪನೆದೆ ಕೂಡೆ ॥
ತೋರಿತು ಮರುಕ ಮಕ್ಕಳು ತೋರುತಿದ್ದಿದ್ದು । ಹಾರಿ ದೀಕ್ಷೆಯ ಕೊಂಡರೆನಲು ॥ ೧೭ ॥
ಮೂಗಿನ ಮೇಲೆ ಬೆರಳನಿಟ್ಟು ಮಕುಟವ । ತೂಗಿ ತಾನುಸ್ಸೆಂದು ಸುಯ್ದು ॥
ಆಗಳೆ ಕಣ್ಣ ನೀರ್ಗ್ಗಳಗುಳನೊಕ್ಕವು । ಬೇಗೆ ಹೆಚ್ಚಿದುದೊಡಲೊಳಗೆ ॥ ೧೮ ॥
ಉಕ್ಕುವುದಳಲದನೊಯ್ಯನಾರಿಸುವನು । ಬಿಕ್ಕಳುಬಹುದ ನಿಲ್ಲಿಸುವಾ ॥
ಚಕ್ಕನೆ ಮೂರ್ಛೆದಟ್ಟುವುದಟನೊದರುವ ಸಿಕ್ಕಿ । ಸಿಕ್ಕನು ಶೋಕದೊಳಗೆ ॥ ೧೯ ॥
ಮಕ್ಕಳುಗಳ ಮೋಹ ಹೆಚ್ಚಹುದವರು ಕೈ । ಮಿಕ್ಕ ಮೇಲೇಗೈಯಬಹುದು ॥
ಮಿಕ್ಕು ಶೋಕಿಸುವುದು ಮಕ್ಕಳಾಟಿಕೆಯೆಂದು । ಹೊಕ್ಕ ಶೋಕವ ನೂಂಕಿ ನಿಂದಾ ॥ ೨೦ ॥
ಮೊದಲೊಮ್ಮೆ ಕಣ್ಣ ನೀರೊಕ್ಕುವಹುದು ಕೂಡೆ । ಪದುಳಚಿತ್ತದಿ ನಿಲಿಸಿದನು ॥
ಎದೆಯೊಳು ಶೋಕಾಗ್ನಿಯೇಳುತಿರ್ದುದು ಮೆಲ್ಲ । ನದ ಶಾಂತಿಯೊಳು ನಂದಿಸಿದನು ॥ ೨೧ ॥
ಇಟ್ಟೆಡೆ ಬಂದಾಗ ಧೈರ್ಯ ಶೋಕಾನಲ । ತಟ್ಟಿದಾಗರಿವಿರಬೇಕು ॥
ಬಿಟ್ಟುದರೊಳು ಹೇಯ ತೊಟ್ಟುದರೊಳು ವೃಥ । ಹುಟ್ಟಬೇಕಧಿಕನಾದವಗೆ ॥ ೨೨ ॥
ತನು ಬೇರಾತ್ಮ ಬೇರೆಂದರಿದಾತ್ಮಭಾ । ವನೆಯ ಮಾಡುವ ಭಾವಕರಿಗೆ ॥
ಕನಸಿನೊಳಗು ಭ್ರಾಂತಿ ಬಾರದು ಬಂದರೊ । ಯ್ಯನೆ ಜಾರುವುದು ನಿಲ್ಲದಲ್ಲಿ ॥ ೨೩ ॥
ಆತ್ಮವೇದಿಗೆ ದುಃಖ ತಾಗದು ತಾಗಿದ । ರಾತ್ಮನ ಕಂಡರೋಡುವುದು ॥
ಆತ್ಮಭಾವನೆಯು ಮುಂದಜ್ಞಾನವುಂಟೆ ಗ । ರುತ್ಮನಿದಿರೊಳುಂಟೆ ಸರ್ಪ ॥ ೨೪ ॥

ಕವಿದ ಮೋಹಾಂಧಕಾರವನು ಸುಜ್ಞಾನದ । ರವಿಯು ಶಕ್ತಿಯೊಳೊತ್ತಿ ನಿಲಿಸಿ ॥
ಅವನೀಶನೊಂದೆರಳ್ಗಳಿಗೆಯ ಮೇಲೆ ಸಂ । ತವಿಸಿಕೊಂಡೊಡನಿಂತು ನುಡಿದಾ ॥ ೨೫ ॥
ಜಿನಜಿನ ಜಿನಸಿದ್ಧ ಗುರುಹಂಸನಾಥನೊ । ಬ್ಬನೆ ಬಲ್ಲನವರ ಸಾಹಸವಾ ॥
ತನುಜರ ಹರೆಯವೇನಿದು ದೀಕ್ಷೆಗೆಳಸುವ । ದಿನವೆ ಮಾಮಾ ಚಿತ್ರವೆಂದಾ ॥ ೨೬ ॥
ತುಪ್ಪುಳುಮಿಸೆ ರೇಖೆಗೆ ಬಂದುದಿಲ್ಲ ವೈ । ದಪ್ಪ ಸಂಪೂರ್ಣವಾಯ್ತಿಲ್ಲ ॥
ನೆಪ್ಪುದೋರಿತು ಪ್ರಾಯ ನೆರೆವರಿನ್ನವರೆನು । ತಿಪ್ಪನಿತರೊಳಿಂತುಟಾಯ್ತೆ ॥ ೨೭ ॥

ತಾಯಿಕ್ಕಲುಂಡೂಟವಲ್ಲದಿವರು ತಮ್ಮ । ಸ್ತ್ರೀಯಿಕ್ಕಲುಂಡೂಟವಿಲ್ಲ ॥
ಪ್ರಾಯದೋರಿತು ಮದುವೆಯ ಮಾಡಬೇಕೆಂದು । ದಾಯಗೊಂಡಿರ್ದೆವಿಂತಾಯ್ತೆ ॥ ೨೮ ॥

ಅಣ್ಣತಮ್ಮಂದಿರ ಕೇಳಿಯೊಳಲ್ಲದೆ । ಹೆಣ್ಣೊಳೊಂದಿರುಳಿದ್ದುದಿಲ್ಲ ॥
ಕಣ್ಣಹಬ್ಬವ ಕಾಣ್ಬೆನಿವರ ಮದುವೆಗೆಂದು । ಕಣ್ಣೊಳಿಟ್ಟಿರ್ದೆವಿಂತಾಯ್ತೆ ॥ ೨೯ ॥

ಸುಜಯನ ಬಿಟ್ಟು ಸುಕಾಂತನಿರನು ರಿಪು । ವಿಜಯನೊಡನೆ ಮಹಾಜಯನು ॥
ಅಜಿತಂಜಯನೊಳರಿಂಜಯನಿಹನೆಂದು । ನಿಜತನುಭವರ ನೆನೆದನು ॥ ೩೦ ॥

ವೀರಂಜಯ ಶತ್ರುವೀರ್ಯನು ರತಿವೀರ್ಯ । ನಾ ರವಿಕೀರ್ತಿಯುಮೊಂದೆ ॥
ಆರಿಗೂ ಸರಿಯವರಲ್ಲೆಂದು ತನ್ನ ಕು । ಮಾರರ ಗುಣವ ನೆನೆದನು ॥ ೩೧ ॥

ರಾಜಮಾರ್ತಾಂಡನಾನೆಯ ಮೇಲೆ ಬಲ್ಲಿದ । ತೇಜಿಗಳೊಳು ವಿಕ್ರಮಾಂಕಾ ॥
ರಾಜಮಂದರನಾನೆಕುದುರೆಯೇರಾಟದಿ । ಪೂಜಿತನೆಂದು ಕಂಡಿರ್ದೆ ॥ ೩೨ ॥

ರಥದಲ್ಲಿ ರತ್ನರಥಗೆ ಪದ್ಮರಥಗತಿ । ರಥಮಹಾರಥರಿದಿರಲ್ಲ ॥
ಪೃಥಿವಿಗಗ್ಗಳರೆನ್ನ ಪುತ್ರರೆಂದಿದ್ದೆನು । ಕಥೆಯ ಮಾಡಿದರು ಲೋಕದೊಳು ॥ ೩೩ ॥

ನೋಂಪಿಯ ನೋಂತು ಮಕ್ಕಳು ಬೇಕುಬೇಕೆಂದು । ಮುಂ ಪಂಚಪದಗಳ ಜಪಿಸಿ ॥
ಪೆಂಪೇರಿ ಪೆತ್ತ ತಮ್ಮಯ ತಾಯ್ಗಳುದರಕೆ । ತಂಪು ಮಾಡಿದರಹೊಯೆಂದಾ ॥ ೩೪ ॥

ಹಗಲಿರುಳರುಹಂತದೇವನ ಜಪಿಸಿ ಯೋ । ಗಿಗಳ ಪಾದಾರ್ಚನೆಮಾಡಿ ॥
ಮಗನಾಗಬೇಕೆಂದು ಪರಸಿ ಪೆತ್ತರಿಗೆ ತ । ಣ್ಣಗೆ ಮಾಡಿದರಲಾ ಹಾಯೆಂದಾ ॥ ೩೫ ॥

ಈ ಪೆಂಗಳೆಂತುಪವಾಸನೋಂಪಿಗಳ ಮ । ಹಾಪರಾಕ್ರಮವೆತ್ತಲೆಂದು ॥
ಭಾಪು ಭಾಪೆನೆ ನೋಂತು ಪಡೆದ ಮಕ್ಕಳು ಹೋಗೆ । ಭಾಪುಭಾಪೆನೆ ಲಂಘಿಸಿದರು ॥ ೩೬ ॥

ನೋಂತುದು ಚೆನ್ನಾಯ್ತು ನೋಂತ ಫಲಕೆ ಪುತ್ರ । ಸಂತತಿಯಾಯ್ತುದು ಚೆನ್ನು ॥
ನೋಂತ ನೋಂಪಿಯ ಫಲ ಜನನಿಯಗಾಯ್ತಿಲ್ಲ । ಸಂತಾನಕಾಯ್ತುದು ಚಿತ್ರಾ ॥ ೩೭ ॥

ಬಾಲೆಯರೊಡನಾಡಿ ಕಡೆಗೆ ತಾಳದೆ ಬಾಲ್ಯ । ಕಾಲದಿ ತಪಸುದಾಳ್ವಾಗ ॥
ಬಾಳದೆ ಬಸದಿಯ ಹೊಗಿರೆಂದು ತಾಯ್ಗಳು । ಹಾಲನೆರೆದರೆ ಹಾಯೆಂದಾ ॥ ೩೮ ॥

ನಂದನರಿಂದೊಂದು ಕೊರತೆಯಿಲ್ಲದು ನಾನು । ಹಿಂದೆ ಮಾಡಿದ ಕರ್ಮವಕಟಾ ॥
ನೊಂದುಕೊಳ್ಳಲದೇಕೆ ಸಾಕೆನುತೊಡನರ । ವಿಂದನೊಳಿಂತು ತಾ ನುಡಿದಾ ॥ ೩೯ ॥

ಎಲವೊ ನೀವೀಗ ಬಂದೆಮಗರಿಪುವರು ಮು । ನ್ನಲೆ ಹೇಳಬೇಡವೆ ಬಂದು ॥
ಎಲೆ ಸ್ವಾಮಿ ನಾವೆಂತು ಬರಬಹುದವರೆಮ್ಮ । ಬಲಿದೊಯ್ದ ಬಗೆಯ ಚಿತ್ತೈಸು ॥ ೪೦ ॥

ಹಿಂದುಳಿದರೆ ಹರಿದಪ್ಪಾಜಿಗರಿಪುವ । ರೆಂದು ನಮ್ಮೆಲ್ಲರ ಕರೆದು ॥
ಮುಂದೆ ನಡೆಸುವರು ತಾವು ಪಿಂತೆಯ್ತುಹ । ರೆಂದು ನುಡಿದನಳುತಳುತ ॥ ೪೧ ॥

ಎಡಬಲದಲಿ ಜಾರಿಹೋದರಾದರೆ ತಂದೆ । ಯೊಡನೆ ಸೂಚಿಪರೆಂದು ತಮ್ಮ ॥
ನಡುವೆ ನಡೆಸುವರು ಬಳಸಿಕೊಂಡಿಹರೆಂದು । ನುಡಿದನು ಕಣ್ಣೀರನಿಡುತ ॥ ೪೨ ॥

ಸಾಕೆಂದು ತಪಸಿಗೆಯ್ದುವರೊಡನೆವುಗಾಸೆ । ಯೇಕೆಂದು ನಾವು ಜಾರುವೆವು ॥
ದಾಕಿಟ್ಟು ಹತ್ತೆಂಟುಹಜ್ಜೆಯ ತಾವೆಯ್ದಿ । ತಾಕಿ ಕೈವಿಡಿದೊಯ್ದರೆಮ್ಮಾ ॥ ೪೩ ॥

ನುಡಿವರಿಚ್ಛೆಯ ಮಾತ ತಮ್ಮ ಹಸ್ತದೊಳಿರ್ದ । ಕಡಗವ ತೆಗೆದೆಮ್ಮ ಕೈಗೆ ॥
ತೊಡಿಸುವರಿದು ನಿಮಗೆಂಬರು ಕೈಲಾಗು । ವಿಡಿವ ನೆವದೊಳೊಯ್ದರೆಮ್ಮಾ ॥ ೪೪ ॥

ಝುಂಕಿಸಿ ನುಡಿಯರು ಕೋಪಿಸರೆಮ್ಮ ತ । ಳ್ಪಂಕವ ನೋಡಿ ನಗುವರು ॥
ಹೂಂಕೊಂಬರೆಮ್ಮ ಮಾತನು ತಾವು ನುಡಿವರು । ಬಿಂಕದಿಂದವರೆಯ್ದುತಿಹರು ॥ ೪೫ ॥

ಊಳಿಗದವರ ನಮ್ಮೆಲ್ಲರ ಮೋರೆಯು । ಕಾಳಾಗಿ ಕಂದಿಕೊಂಡಿಹುದು ॥
ಹೇಳಲೇನರಸ ನೋಡವರ ಮೊಗಕೆ ಕಾಂತಿ । ಥಾಳಿಸುತಿಹುದಾಗ ಚಿತ್ರಾ ॥ ೪೬ ॥

ಸ್ವಾಮಿ ಚಿಕ್ಕಂದೇಕೆ ದೀಕ್ಷೆ ಸೈರಿಸಿರೆಂದು । ಸ್ತೋಮಕೆ ನಾವು ಕೈಮುಗಿಯೆ ॥
ಆ ಮಾತ ಮರೆಸಿ ಮತ್ತೊಂದು ಪ್ರಸಂಗವ । ನೇಮಿಸುತೊಯ್ಯನೆಯ್ದಿದರು ॥ ೪೭ ॥

ಸುರಸೇನ ವರಸೇನ ಪುಷ್ಪಕ ಕರುವಿಂದ । ಅರವಿಂದ ಬಾರೆಂದು ನಮ್ಮಾ ॥
ಕರೆದೊಂದು ಕಥೆಯ ಕೇಳೆಂದುಸುರುತ ಪೋಪ । ರರಸ ನೋಡವರ ತಂತ್ರವನು ॥ ೪೮ ॥

ರಾಮ ರಂಜಕ ರನ್ನ ಸೋಮ ಹೊನ್ನಲ ಹೊನ್ನ । ಭೀಮಾಂಕ ಬಾರೆಂದು ನಮ್ಮಾ ॥
ನಾಮವಿಡಿದು ಕರೆದೊಂದು ಪ್ರಸಂಗಾಭಿ । ರಾಮದೋರುತ ಸಾಗುತಿಹರು ॥ ೪೯ ॥

ಅಣ್ಣಾಜಿ ನಿನ್ನ ಸೇವಕ ಸುಮುಖನು ತಮ್ಮ । ಬಣ್ಣವುಳ್ಳವನು ನಿನ್ನವನು ॥
ಬಣ್ಣಿಸಿ ನುಡಿಯಲೇಕೆಲ್ಲರುತ್ತಮರೆಂದು । ಬಣ್ಣಿಸುವರು ತಾವು ನಮ್ಮಾ ॥ ೫೦ ॥

ಎಂದೆಂದು ನಮ್ಮೊಡನೊಂದೆರಳ್ಮೂರುಮಾ । ತಿಂದ ವೆಗ್ಗಳವ ಸೊಲ್ಲಿಸರು ॥
ಇಂದೇನೊ ಲೆಕ್ಕವಿಲ್ಲದ ವಾಕ್ಯದೋರುವ । ರಂದಕಾರರು ನಿಮ್ಮ ಸುತರು ॥ ೫೧ ॥

ಅರಿಯೆವೆ ನಾವವರಾಟವ ತಾವೆಮ್ಮ । ಮರವೆಗೊಡ್ಡಿದ ಮಾಯಾತಂತ್ರಾ ॥
ಅರಿದರೇನೇನೆನ್ನಬಹುದೊಡೆಯರು ಕಂಡ । ತೆರಕೆ ನಾವಿದಿರಾಗಬಹುದೆ ॥ ೫೨ ॥

ಬಪ್ಪೆಲ್ಲ ಪ್ರಜೆಗಳಿಗಲ್ಲಲ್ಲಿ ನಾವೆಣಿ । ಸಿಪ್ಪುದ ಪೇಳ್ದರೆ ನಿಮಗೆ ॥
ಅಪ್ಪಾಜಿಯಾಣೆಯೆಂದೆಮ್ಮ ಬಾಯ್ಗಳ ಕಟ್ಟಿ । ತೆಪ್ಪಗೆಯ್ದಿದರೆಲೆ ಸ್ವಾಮಿ ॥ ೫೩ ॥

ಆದೀಶನೇಕೆ ಪಾಲಿಪನು ದೀಕ್ಷೆಯ ಬುದ್ಧಿ । ವೇದಿಸಿ ಕಳುಹುವನೆಂದು ॥
ಹೋದೆವಿಷ್ವಾಸೆಯೊಳಾ ಸ್ವಾಮಿ ನೃಪರ ಮೆ । ಚ್ಚಾದರ್ಥವನೆ ಕೊಟ್ಟನೊಡೆಯಾ ॥ ೫೪ ॥

ಪರಮಪಾಪಿಗಳು ನಾವೆಂಬ ಬಿಕ್ಕಳಿಸುವ । ಸುರಿವ ಕಂಬನಿದೊಡೆದಳುವ ॥
ಅರವಿಂದ ರವಿಕೀರ್ತಿರಾಜನನಗಲಿರ್ದ । ನರವಿಂದ ರವಿಯಗಲ್ದಂತೆ ॥ ೫೫ ॥

ತಿರಿಗಿ ತನ್ನವರ ನೋಡುವನವರುರೆ ತನ್ನ । ಪರಿಯೊಳೆ ಶೋಕಿಸುತಿಹರು ॥
ನರನಾಥನದ ಕಂಡು ನಿವಗಿಷ್ಟು ನೋವೇಕೆ । ತರಹರಗೊಳ್ಳಿರೈಯೆಂದಾ ॥ ೫೬ ॥
ಪಡೆವರ ಮತೆವಂತೆ ಸಲಹಿದರಿಷ್ಟಾರ್ಥ । ಗೊಡುತ ತೇಜದಿ ನಡೆಸಿದರು ॥
ಪೊಡವಿಗಗ್ಗಳವೊಡೆಯುರು ಪೋದರಳಲೆಂತು । ತಡೆವುದೊಡೆಯುಯೆಂದರವರು ॥ ೫೭ ॥
ವಿಸ್ತರಿಸೇತರಿಂದವರ್ಗೆ ವಿರಕ್ತಿಯು । ಪಾಸ್ತಿಯಾಯ್ತುರವಿಂದಯೆಂದಾ ॥
ಹಸ್ತಿನಾಪುರದರಸರ ದೀಕ್ಷೆಗೇಳ್ದು ಸ । ನ್ಯಸ್ತಿವಡೆವರೆಂದನವನು ॥ ೫೮ ॥
ತಡೆದು ದೀಕ್ಷೆಯು ಕೊಂಬೆವೆಂದೊತ್ತಿ ರವಿಕೀರ್ತಿ । ನುಡಿಯದಾದನೆ ಸೊಲ್ಲಿಸೆಂದಾ ॥
ಒಡೆಯು ಚಿತ್ತೈಸಾತನೀಗ ನವ್ಮೆಲ್ಲರ । ಕೆಡಿಸಿದ ದೊರೆಯೆಂದನವನು ॥ ೫೯
ಧ್ಯಾನವ ಕೊಂಡಾಡಿ ದೀಕ್ಷೆಯು ಕೊಂಡಾಡಿ । ಮಾನಿಸವಾಳ ಜರೆದನು ॥
ಆನಂದಬಟ್ಟರಾ ನುಡಿಗೆಲ್ಲರಾತನಿಂ । ದೀ ನಾಡ ತಳ್ಳಿಯಾಯ್ತೆಂದಾ ॥ ೬೦ ॥
ಅನುದೋರಿತದು ಸಾಕು ತಪಸಿಗೆಂದವರು ಯೋ । ಚನೆಯು ಮಾಳ್ಪಾಗವರಲ್ಲಿ ॥
ಜನಕಗೆ ಪೇಳ್ವೆವೆಂದೊಬ್ಬೊಬ್ಬರಾದರು । ನೆನೆದುದಿಲ್ಲವೆ ನಮ್ಮನೆಂದಾ ॥ ೬೧ ॥
ಕೆಲಬರಪ್ಪಾಜಿಗರುಹಿ ಬಪ್ಪೆವೆಂದರು । ಕೆಲಬರಪ್ಪಾಜಿ ಕೇಳಿದರೆ ॥
ಫಲಿಸದು ದೀಕ್ಷೆಯೆಂದರು ಕೂಡೆ ಯೋಚನೆ । ಸುಳಿದುದವರೊಳಿಲೆ ಸ್ವಾಮಿ ॥ ೬೨ ॥
ತಾತನನೊವ್ಮೆ ಬೀಳ್ಕೊಳಬಹುದೆಂದರು । ಮಾತೆಯುರ್ಬಿಡರೆಂದರೊಡನೆ ॥
ಏತಕಾ ತೊಡಕು ನಾವಾರವರಾರೆಂದು । ಮಾತಾಡುತೆಯ್ದಿದರೆಂದಾ ॥ ೬೩ ॥
ಆ ನುಡಿಗೇಳುತೆನ್ನೊಳಗನ್ನು ಬಲ್ಲರ । ಲ್ಲಾ ನೋಡು ಭಾಪೆಂದು ನಕ್ಕಾ ॥
ಏನೆಂದರೇನೆಂದರಿನ್ನೊವ್ಮೆ ಹೇಳುಹೇ । ಳಾ ನುಡಿಯನೆ ಮಗುಳ್ದೆಂದಾ ॥ ೬೪ ॥
ಕಡೆಪಟ್ಟು ದೀಕ್ಷೆಗೆ ನಡೆವರಪ್ಪಾಜಿಯು । ತಡೆಯುನೊಯ್ಯನೆ ಕಳುಹುವನು ॥
ಜಡರೆಮ್ಮ ಜನನಿಯುರ್ಮೋಕ್ಷಾಂತರಾಯುದ । ಗೊಡವೆಗೆಣಿಪರೆಂದರೊಡೆಯು ॥ ೬೫ ॥
ಪ್ರಾಯದೊಳಿವರು ಕಿರಿಯರಲ್ಲದಾತ್ಮಾಭಿ । ಪ್ರಾಯದಿ ಕಿರಿಯುವರಲ್ಲ ॥
ಈ ಯುಕ್ತಿಯುಂಟೆಂದು ಮುನ್ನ ನಾನರಿಯೆನೆಂ । ದೊಯ್ಯಾರ ಮಿಗೆ ಮುಂಡೆಯೊಲೆದಾ ॥ ೬೬ ॥
ರನ್ನದ ಕಣೆಯುಲ್ಲಿ ಜನಿಸಿದ ಮಣಿಗಳ್ಗೆ । ಭಿನ್ನವೆ ಸುಪ್ರಭೆ ನೃಪತಿ ॥
ನಿನ್ನ ಪುತ್ರರಿಗೆ ವಿವೇಕಾಂಶು ನಿಜವೆಂದು । ಬಿನ್ನವಿಸಿದರಾಗ ಸಖರು ॥ ೬೭ ॥
ಸಾಗರ ದಕ್ಷಿಣ ನೋಡು ನೋಡದಕಲ್ಲ । ಹೋಗಲ್ಬೈ ಹೋದರೇನವರು ॥
ಹೋಗುವಾಗಖಿಲಪ್ರಪಂಚವ ತಿಳಿದ ನಿ । ಯೋಗಕೆ ಮೆಚ್ಚಿದೆನೆಂದಾ ॥ ೬೮ ॥
ಊಳಿಗದವರನಂಜಿಸದೊಯ್ದು ಬಗೆಗೆನ್ನ । ಕೇಳದೆಳಸಿ ಮಾತೆಯುರಿಗೆ ॥
ಆಲೋಚಿಸದೆ ಹೊರತೆಗೆದ ಬಗೆಗೆ ಚಿತ್ತ । ಕೋಳುಹೋಗದೆ ತನಗೆಂದಾ ॥ ೬೯ ॥

ಯುಕ್ತಿಸಾಮಾನ್ಯರಾದವರಿಪ್ಪು ಪ್ರಾಯದಿ । ಮುಕ್ತಿಗುಜ್ಜುಗಿಪರೆ ಸ್ವಾಮಿ ॥
ದಿಕ್ತಟಗಳ ದಾಂಟಿ ಕೀರ್ತಿಸಿ ಪುರೆಯೆಂದು । ಸೂಕ್ತಿದೋರಿದರಾಗ ಸಖರು ॥ ೭೦ ॥

ಪೂಜ್ಯದೊಳಯ್ಯ ರಾಜ್ಯವನಾಳಲಮೃತಸಾ । ಮ್ರಾಜ್ಯವ ನಾವಾಳ್ವವೆಂದು ॥
ಪ್ರಾಜ್ಯತಪಸುತಾಳ್ವರಹಹ ಲೇಸೆಂದು ವಿ । ಭ್ರಾಜ್ಯಮಾನದಿ ಮಂತ್ರಿ ನುಡಿದಾ ॥ ೭೧ ॥

ದೇವರನುಜರಂದು ನೂರ್ವರೆಯ್ದಿದರಿಂದು । ತಾವು ನೂರ್ವರು ಪೋಗಿ ನನಗೆ ॥
ನೋವಿಟ್ಟರೆಂದರ್ಕಕೀರ್ತಿರಾಜನು ವ್ಯಾಕು । ಲಾವೇಶದಿಂದೆದ್ದು ನುಡಿದಾ ॥ ೭೨ ॥

ಪಿರಿಯರು ನಾವು ದೀಕ್ಷೆಯ ತಾಳ್ದ ಬಳಿಕ ತಾ । ವಿರದೆ ದೀಕ್ಷೆಯ ತಾಳ್ವುದೋಜೆ ॥
ದುರುಳರವರು ಮುಂದೆ ಪೋದರೆನ್ನದೆ ಭಾಪು । ಪುರೆಯಿಟ್ಟು ಪೊಗಳ್ವಿರಿಯೆಂದಾ ॥ ೭೩ ॥

ಸೈರಿಸು ಮಗನೆ ನನ್ನನುಜರಂದದೊಳಹಂ । ಕಾರದಿ ಪೋದರೆ ಇವರು ॥
ಸಾರವಿರಕ್ತಿ ಕೊಂಡೊಯ್ದುದಿನ್ನದಕೆ ಕ । ಣ್ಣೀರಿಡಬೇಡೆಂದನಯ್ಯಾ ॥ ೭೪ ॥

ನಾನು ನೀವಿಬ್ಬರು ಶೋಕಗೈದಾಗೆಮ್ಮ । ಸೇನೆ ಮುಂತಾಗಿ ಶೋಕಿಪರು ॥
ಮಾನಿನಿಯರು ಮರುಗುವರಣ್ಣ ಸೈರಿಸೆಂ । ದಾ ನರನಾಥ ನಂಬಿಸಿದಾ ॥ ೭೫ ॥

ಅರವಿಂದ ಮೊದಲಾದರೆಲ್ಲರ ಕರೆದಿನ್ನು । ಕೊರಗಬೇಡೆಂದು ಸಂತೈಸಿ ॥
ಪಿರಿದು ಮನ್ನಣೆಯಿತ್ತು ಯುವರಾಜನೊತ್ತಿನೊ । ಳಿರಿಯೆಂದು ಕೂಡೆ ನೇಮಿಸಿದಾ ॥ ೭೬ ॥

ಮುನ್ನಿವರೊಡೆಯರು ಪೊರೆದುದ ಮಣಿವಂತೆ । ಚೆನ್ನಾಗಿ ಪೊರೆಯೆಂದು ಮಗಗೆ ॥
ಬಿನ್ನಾಣಗೈದವರೆಲ್ಲರನೆರಗಿಸಿ । ತನ್ನ ಮುಂದಿಟ್ಟಂಬುಗೈದಾ ॥ ೭೭ ॥

ಕಳುಹಿದನೆಲ್ಲರನೊಡನೆದ್ದು ಮಂದಿರ । ದೊಳಹೊಕ್ಕನಾ ಸಾರ್ವಭೌಮಾ ॥
ಬಲುಗಾಳಿ ಬಾಧಿಸಿದೆಳೆಲತೆಯಂತೆ ಹೆಂ । ಗಳು ಬಂದರಧಿಕಶೋಕದೊಳು ॥ ೭೮ ॥

ಬಂಬಳಬಾಡಿದ ದೇಹ ಕಟ್ಟಳಿದ ತು । ರುಂಬು ಕಂದಿದ ಮೊಗದಿಂದ ॥
ಕಂಬನಿಬಿಡುತೆಯ್ದಿ ಕಾಲಮೇಲ್ಕೆಡೆದು ಪ । ಲುಂಬಿದರೇನ ಬಣ್ಣಿಪೆನು ॥ ೭೯ ॥

ನಂದನರಗಲಿದರರಸ ಕಣ್ಮನಸಿಗಾ । ನಂದನಪೋ್ದರು ಹಾಹಾ ॥
ಮುಂದೆಮ್ಮ ಕಣ್ಣಾರ್ತಿಗೆಳಸಿರ್ದೆವವರಿಂದೆ । ಕೊಂದರೆಂದಳಲಿ ನುಡಿದರು ॥ ೮೦ ॥

ಕಾಣೆವು ಕಂದರ್ಪರೂಪಿನ ಮಕ್ಕಳ । ಮಾಣಿಕ್ಯಗಳನೇವೆ ಹಾಹಾ ॥
ಕ್ಷೋಣೀಶ ಗತಿಯಾವುದೆಂದೆದೆಬಿರಿದರು । ಬಾಣ ತಾಗಿದ ಹುಲ್ಲೆಯಂತೆ ॥ ೮೧ ॥

ಪೊಡವಿಯನಾಳ್ವರೆಂದಾವು ಕಂಡಿರ್ದೆವಿಂ । ದಡವಿಯನಾಳಲೆಯ್ದಿದರೆ ॥
ಕಡೆಯೊಳೆಳಸದೀಗ ದೀಕ್ಷೆಗೆಳಸಿ ನಮ್ಮ । ಕೆಡಿಸಿದರೆಂದೊರಲಿದರು ॥ ೮೨ ॥

ಲಲಿತವಿವಾಹದೊಳೆಮ್ಮ ಕಣ್ಣಾರ್ತಿಯ । ಸಲಿಸಿತಿಲ್ಲೆಂದಳಲಿದರು ॥
ಸಲಹಿದವರು ಫಲಬಪ್ಪವೇಳೆಗೆ ವೃಕ್ಷ । ತೊಲಗಿದರಳಲುವಂದದೊಳು ॥ ೮೩ ॥

ನಿನಗುಸುರದೆ ನವಗುಸುರದೆ ತಪಕೆ ಸು । ಮ್ಮನೆ ತಾವು ಪೋಪಾಗ ತಮ್ಮ ॥
ಮನಸಿಗೆ ನೋವ ನಾವೇನ ಮಾಡಿದೆವು ಹಾ । ಯೆನುತ ಶೋಕಿಸಿದರುಬ್ಬೆಯೊಳು ॥ ೮೪ ॥
ನೋಂಪಿಗಳರೆಯಾದುದಿಲ್ಲಿಮ್ಮ ಮನಸಿನ । ಲಂಪರೆಯಾದಲ್ಪಫಲವೊ ॥
ಸಂಪತ್ತು ತೋರಿ ತೊಲಗಿತೆಂದು ನೃಪನೆದೆ । ಜೊಂಪಿಸೆ ಹಳವಳಿಸಿದರು ॥ ೮೫ ॥

ತೋಯಜಾಕ್ಷಿಯರಿರ ಸೈರಿಸಿಯುವರೆಮ್ಮ । ನೋಯಿಸಿ ಹೋಗಬಂದವರು ॥
ಬಾಯುಳಿದಿನ್ನು ಶೋಕಿಸಿದರೇನಹುದೆಂದು । ರಾಯ ನುಡಿದನವರೊಡನೆ ॥ ೮೬ ॥
ಸೂನುಗಳೊಸಗೆಗಾವರ್ತಿಸುತಿರ್ದೆವಾ । ಸೂನುಗಳ್ಬೇರೆಣಿಸಿದರು ॥
ತಾನೊಂದ ನೆನೆದರೆ ವಿಧಿಯೊಂದ ನೆನೆವುದೆಂ । ಬೀ ನುಡಿ ಪ್ರತ್ಯಕ್ಷವಾಯ್ತು ॥ ೮೭ ॥
ನಾನಿವರಿಗೆ ತಕ್ಕ ಪೆಣ್ಗಳಿಲ್ಲುಂಟೆಂದು । ಜಾನಿಸುತಿರ್ದೆನಪ್ಸರೊಳು ॥
ನಾನೊಲ್ಲೆ ಪೆಣ್ಣ ನಮ್ಮಯ್ಯನಾರಿಗೆ ಪೆಣ್ಣ । ತಾ ನೋಳ್ಪನೆಂಬ ಮಾತಾಯ್ತು ॥ ೮೮ ॥
ಮೀರುವರಾರು ಕರ್ಮವನವರ್ಗೀ ಪ್ರಾಯ । ವೇರುವಂದಿಂತಹ ಪ್ರಾಪ್ತಿ ॥
ಮೀರಿದ ಕಾರ್ಯಕಿನ್ನಳಲಲೇಕೆಂದಳ । ಲಾರುವಂತೊರೆದನಾ ರಾಯಾ ॥ ೮೯ ॥
ಮರುಗಿದರವರಿನ್ನು ಬಪ್ಪರೆ ಬಾರರು । ಬರಿದತ್ತು ಬಾಯಾರಲೇಕೆ ॥
ಮರೆಯಬೇಕವರ ಚಿಂತೆಯನಲ್ಲದಾಗ ನಿ । ಮ್ಮರಿಕೆಯೇತರದು ಪೆಂಗಳಿರಾ ॥ ೯೦ ॥
ಮಾಣಿಗಳಿದ್ದಾಗ ಮಾಣಿಕಗಳಿಗೆಣೆ । ಗಾಣಬೇಕಗಲಿ ಹೋದಾಗ ॥
ಕಾಣಿಗೆ ಕಡೆಗಂಡು ಮರೆಯಬೇಕಲ್ಲದ । ರೂಣೆಯವದು ಬಲ್ಲತನವೆ ॥ ೯೧ ॥
ತಪಸಿಗೆಯ್ದಿದರೈಸೆ ಲೇಸೆನ್ನಿ ಬೇರೊಂದು । ಕುಪಥಕೆ ಹೋದವರಲ್ಲ ॥
ಅಪಕೀರ್ತಿ ಮಾಡಿದರಳಲಬೇಕಲ್ಲದೆ । ವಿಪುಲಾರ್ಥಕಿದಕೇಕೆ ನೋವು ॥ ೯೨ ॥
ಹೋ ಚಿತ್ರವಿನ್ನೊಂದು ತಪಸಾದರವರು ಮ । ರೀಚಿಯಂತನ್ಯಮಾರ್ಗವನು ॥
ಆಚರಿಸಿದರೆ ಅಜ್ಜನ ಸಾರ್ದರಿದಕೆ ಶೋ । ಕಾಚರಣೆಯೆ ನಿಮಗೆಂದಾ ॥ ೯೩ ॥
ಇನ್ನೊಂದ ಕೇಳಿರೌ ನೃಪರಾದರವರಿಗೆ । ನನ್ನ ರಾಜ್ಯವೆ ನಮಿಸುವುದು ॥
ಪನ್ನಗಾಮರನರಲೋಕವನೆರಗಿಸು । ವುನ್ನತಿವಡೆದರೀಗಲ್ತೆ ॥ ೯೪ ॥
ಸಾಲುವೆಂಗಳ ಮಕ್ಕಳಿಳೆಯನಾಳ್ದರು ನಿಮ್ಮ । ಬಾಲಕರಖಿಲಲೋಕವನು ॥
ಕಾಲಿಗೆರಗಿಸಿಕೊಂಡಧಿಕಸಂಪದವೊಂದೆ । ಸಾಲದೆ ನಿವಗೆ ಪೆಂಗಳಿರಾ ॥ ೯೫ ॥
ಶೋಕದಿಂದಂಗ ಕಂದುವುದಾಯು ಕೆಡುವುದು । ಭೀಕರಪಾಪ ಕಟ್ಟುವುದು ॥
ಪಾಕಿಗೆ ಚಿಂತಿಸಿ ಪಣವ ನೀಗಿದರೆಂಬ । ವಾಕಿಗೆ ಬಹರೆ ಸಾಕೆಂದಾ ॥ ೯೬ ॥
ವೀಣಾಜಿ ವಿದ್ರುಮವತಿ ಸುಮನಾಜಿ ಬಾ । ವೀಣಾದೇವಿ ಬಾರೆಂದು ॥
ಜಾಣರರಸನಪ್ಪಿ ಕಂಬನಿದೊಡೆದು ನ । ನ್ನಾಣೆ ಶೋಕಿಸದಿರಿಯೆಂದಾ ॥ ೯೭ ॥

ಮಾಣಿಕ್ಯದೇವಿ ಮಂದ್ರಾಣಿ ಚಂದ್ರಾಣಿ ಕ । ಲ್ಯಾಣಾಜಿ ಮಧುಮಾಧವಾಜಿ ॥
ಜಾಣಾಜಿ ಕಾಂಚನಮಾಲೆ ಬಾರೆಂದಪ್ಪಿ । ಮಾಣಿರೌ ಮರುಕವನೆಂದಾ ॥ ೯೮ ॥
ಮಂಗಲವತಿ ಮದನಾಜಿ ರತ್ನಾವತಿ । ಶೃಂಗಾರವತಿ ಪುಷ್ಪಮಾಲೆ ॥
ಭೃಂಗಲೋಚನೆ ನೀಲಲೋಚನೆ ಸುತರ ಶೋ । ಕಂಗಳ ಮರೆಯಿರೌಯೆಂದಾ ॥ ೯೯ ॥
ಮುಡಿಯ ಕಟ್ಟುವನು ಮೈದಡಹುತ ಕಂಬನಿ । ದೊಡೆವನು ಸವಿಮಾತ ನುಡಿವಾ ॥
ಒಡನಪ್ಪಿಕೊಂಬನಾ ಪೆಂಡಿರ ನೋವ ಕೀ । ಳ್ಬಡಿಸಿದನಖಿಲರೂಪಾಂತು ॥ ೧೦೦ ॥
ಅಕ್ಕಟ ಮಕ್ಕಳಅಗಲಿದರೇನಾಯಿತು । ಚೊಕ್ಕದಿ ನೀವೆನ್ನ ಭಜಿಸೆ ॥
ಮಕ್ಕಳ ಕೊಡುವೆನೌ ಮರುಗಬೇಡೆನೆ ಕೇಳ್ದು । ನಕ್ಕರಾಗವರೋರೆವೊಗದಿ ॥ ೧೦೧ ॥
ಅಳುವರ ನಗಿಸಿದರೆಂಬುದ ದೇವ ನಿ । ನ್ನೊಳೆ ಕಂಡೆವತ್ತ ಸಾರೆಂದು ॥
ನಳಿತೋಳ ತಕ್ಕೆಯ ಬಿಡಿಸಿಕೊಂಡವರಿಷ್ಟು । ತೊಲಗಿ ನಿಂದರು ನಗೆವೊಗದಿ ॥ ೧೦೨ ॥
ಹೊರಗೆಯ್ದಿದಾಗತಿಗುಟ್ಟೊಳಗೆಯ್ದಲೆ । ತ್ತರತತ್ತರಾಟ ದೇವರಿಗೆ ॥
ಕಿರಿಯ ಮಕ್ಕಳು ಹೋದ ನೋವಿಲ್ಲ ನುಡಿ ತಾನೆ । ಅರಿಪುತಿದ್ದಪುದೆಂದರವರು ॥ ೧೦೩ ॥
ದೂನಿಸುತಿರೆ ನಿಮ್ಮ ನಗಿಸಬೇಕಾಗಿ ಹಾ । ಸ್ಯಾನುವಾದದಿ ನಗಿಸಿದೆನೌ ॥
ಅನುದರದಿ ಶೋಕವಿಲ್ಲದೆ ತಾಳ್ದೆನೌ । ಏನಹುದಿನ್ನಳಲಿದರೆ ॥ ೧೦೪ ॥
ಒರ್ವೊರ್ವರಿಗೆ ನಿಮಗೋರೊರ್ವಕುವರರು । ಪರ್ವುಗೆಯಿಂದಾದ ನೋವು ॥
ನೂರ್ವರೆನಗೆ ಸರಿಯಲ್ತೆ ಸೈರಿಸಿದೆನೌ । ಬಿರ್ವಾಗಿ ನೊಂದರೇನಹುದು ॥ ೧೦೫ ॥
ಒಂದೊಂದು ಶಿಶುವಲ್ಲದೆನ್ನ ಪೆಂಡಿರಿಗೆ ಮ । ತ್ತೊಂದು ಶಿಶುಗಳಾಗವಿದನು ॥
ಮಂದಿಯೆಲ್ಲವು ಬಲ್ಲುದುಪಚಾರಕೊರೆದೆನೌ । ನೊಂದುಕೊಳ್ಳದಿರಿ ನೀವೆಂದಾ ॥ ೧೦೬ ॥
ನಾರಿಯರೆಲ್ಲರ ಸಂತೈಸಿ ನಿಜನಿಜಾ । ಗಾರಕೆ ಕಳುಹಿ ರಾಜೇಂದ್ರಾ ॥
ಗೌರವಲೀಲೆಯೊಳಿರ್ದನೆಂಬೆಡೆಗೆ **ಕು । ಮಾರವಿಯೋಗದ ಸಂಧಿ** ॥ ೧೦೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೦೮ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೦೯ ॥
ಸಂಸಾರದುಃಖನಿವಾರಣ ಸದ್ಗುಣೋ । ತ್ತಂಸ ನೀನೆನ್ನ ಭಾವದೊಳು ॥
ಅಂಶುವೆ ರೂಪಾಗಿ ಬೆಳಗುತಿರಮಲಬೋ । ಧಾಂಶು ಚಿದಂಬರಪುರುಷಾ ॥ ೧೧೦ ॥

ಕುಮಾರವಿಯೋಗಸಂಧಿ ಸಂಪೂರ್ಣಂ

# ಪಂಚೈಶ್ವರ್ಯಸಂಧಿ

ಅಚ್ಯುತಾನಂದ ಸದ್ಗುಣವೃಂದ ಚಂಡಮ । ರೀಚ್ಯವ್ಯುತಾಂಶುಪ್ರಕಾಶಾ ॥
ಸುಚ್ಯುತಕರ್ಮ ಸನ್ಮತಿದೋರು ಗುರುವೆ ನಿ । ರ್ವಾಚ್ಯ ನಿರಂಜನಸಿದ್ಧಾ ॥ ೧ ॥

ಮುದದಿಯುರಳಲನಾರಿಸಿ ಚಕ್ರಧರ ದೀಕ್ಷೆ । ವಡೆದ ಮಕ್ಕಳ ನೋಳ್ಪೆನೆಂದು ॥
ತಡೆಯದೆ ಮರುದಿನ ರಜತಾದ್ರಿಗೆದ್ದನು । ಪಡೆದೊಡಲೇನು ಸೈರಿಪುದೆ ॥ ೨ ॥

ಯುವರಾಜ ಮೊದಲಾದ ಬಹುಪುತ್ರರೊಡನೆಯ್ದಿ । ಪವನಮಾರ್ಗದಿ ಬೇಗ ಬಂದು ॥
ದಿವಿಜದೌವಾರಿಕರನುಮತದಿಂದ ಭೂ । ಧವ ಹೊಕ್ಕನರುಹನೋಲಗವಾ ॥ ೩ ॥

ದರುಶನವಿಕ್ಕಿ ಸಾಷ್ಟಾಂಗವೆರಗಿ ನಿಂದು । ದುರಿತಾರಿ ದುಃಖಸಂಹಾರಿ ॥
ಪುರುನಾಥ ಜಯಜಯಯೆಂದು ಕೈಮುಗಿದು ಪು । ತ್ರರುಗೂಡಿ ಕೂಡೆ ಕೀರ್ತಿಸಿದಾ ॥ ೪ ॥

ಯತಿಗಳಿಗೆರಗುತ ದೀಕ್ಷೆವಡೆದ ಯೋಗಿ । ಶತಕಕೆ ಸುತರೊಡಗೂಡಿ ॥
ನತನಾದರವರು ಪರಸಿದರು ಮರುಕವು । ದ್ಗತವಾದುದಿಲ್ಲ ವಿಚಿತ್ರಾ ॥ ೫ ॥

ಮನೆಯಲ್ಲಿ ನೋವಾಯ್ತು ಜಿನಸಭೆಯೊಳು ನೋವು । ಜನಿಸಿತಿಲ್ಲದು ಜಿನಮಹಿಮೆ ॥
ಘನಬುದ್ಧಿಸಾಗರಮುನಿಗೆ ಮೋಕ್ಷೇಶ್ವರ । ಮುನಿಗೂಡಿ ನೂರ್ವರ್ಗೆ ಮಣಿದಾ ॥ ೬ ॥

ಗೆದ್ದಿರಲಾಯೆಂದು ಪೊಗಳ್ದನವರು ಸುಮ್ಮ । ನಿದ್ದರು ಹರಸಿ ನಿಟ್ಟಿಸುತ ॥
ಇದ್ದರೆಲ್ಲರಿಗಿಂಪ ನುಡಿದಾದಿದೇವನ । ಹೊದ್ದಿ ಪುತ್ರರುಗೂಡಿ ಕುಳಿತಾ ॥ ೭ ॥

ನಿರವಿಸು ಸ್ವಾಮಿ ಮೋಕ್ಷಾವಾಪ್ತಿಯೆಂತೆಂದು । ಭರತೇಶಕೂಡೆ ಕೈಮುಗಿದಾ ॥
ಪರಮರಹಸ್ಯವನಾ ಚಕ್ರಧರಗೆ ದೇ । ವರ ದೇವನೊರೆದನೇನೆಂಬೆ ॥ ೮ ॥

ಮೋಕ್ಷವೆಂದರೆ ಬಿಡುಗಡೆಗೆ ಪೆಸರು ಕರ್ಮ । ಮೋಕ್ಷಪಟ್ಟಾತ್ಮನೆ ನಿಲಲು ॥
ಮೋಕ್ಷವೆಂಬರು ಕರ್ಮ ಕಡೆಸಾರ್ದು ಕೆಡೆನ ಪ । ರೀಕ್ಷೆ ಕೇಳೆಲೆ ಭವ್ಯಯೆಂದಾ ॥ ೯ ॥

ದೇಹ ಮೂರರೊಳಿರ್ದರಾತ್ಮ ಸಂಸಾರಿಯಾ । ದೇಹ ಮೂರಳಿದಾಗ ಮುಕ್ತಾ ॥
ದೇಹ ಬೇರಾನು ಬೇರೆಂದು ಧ್ಯಾನಿಸೆ ದೇಹ । ಹೋಹುವೈ ಶಿವವಹುದೆಂದಾ ॥ ೧೦ ॥

ಕಾಷ್ಠದೊಳಿರ್ದಗ್ನಿ ಹೊಸೆದರೆ ತಾನಿರ್ದ । ಕಾಷ್ಠವ ಸುಡುವುದು ತಾನೆ ॥
ನಿಷ್ಠಾತ್ಮ ತನ್ನ ತಾನೀಕ್ಷಿಸೆ ತನ್ನ ಕ । ನಿಷ್ಠಾಂಗ ಮೂರ ಸುಡುವನೈ ॥ ೧೧ ॥

ಕರ್ಮವೆಂದರು ದೇಹಮೂರೆಂದರೇಕಾರ್ಥ । ಧರ್ಮವೆಂದೆನಲಾತ್ಮ ತಾನೆ ॥
ಧರ್ಮವ ಹಿಡಿ ಕರ್ಮ ತನ್ನ ತಾ ಜರಿವುದು । ನಿರ್ಮಲಪದ ನಿನಗಹುದು ॥ ೧೨ ॥

ಬಾಹಿರಧರ್ಮವೆಲ್ಲುಪಚಾರಧರ್ಮ ಮ । ತ್ತೀ ಹಂಸನುತ್ಕೃಷ್ಟಧರ್ಮಾ ॥
ದೇಹಭೋಗಗಳದರಿಂದಹುವಿದರಿಂದ । ದೇಹವಳಿದು ಮುಕ್ತಿಯಹುದು ॥ ೧೩ ॥

ರನ್ನಮೂರೆಂದರು ತಾನೆ ಧ್ಯಾನಿಸಲದು । ಭಿನ್ನವಿಲ್ಲದ ನನ್ನ ಭಕ್ತಿ ॥
ನನ್ನ ಸಂಪದ ನಿನಗಹುದೊಲ್ದು ಧ್ಯಾನಿಸೈ । ನಿನ್ನಿಂದ ನೀ ನಿನ್ನ ನೋಡೈ ॥ ೧೪ ॥
ಬಾನದಂತವುಲಾತ್ಮ ಭೂಮಿಯಂತೀ ದೇಹ । ಬಾನ ಮಣೆಣ್ಣಿಳು ಮುದ್ದೆಯಾಯ್ತು ॥
ಏನಿದೊಂದಚ್ಚರಿಯೆಂದು ನಿಟ್ಟಿಸಲಾತ್ಮ । ಧ್ಯಾನಗೆ ತೋರುವನಾತ್ಮಾ ॥ ೧೫ ॥
ಹರಿವ ಚಿತ್ತವ ತಡೆದೆರಡುಕಂಗಳ ಮುಚ್ಚಿ । ವರಭಾವದೃಷ್ಟಿಯೊಂದರೊಳು ॥
ತಿರುಗಿ ತಿರುಗಿ ನೋಡಲೊಂದಚ್ಚ ಬೆಳಗಾಗಿ । ಪರಮಾತ್ಮ ತೋರ್ಪ ನೈಯೊಳಗೆ ॥ ೧೬ ॥
ಕುಳಿತು ಧ್ಯಾನಿಸುವಾಗ ಮೈಯೊಳು ಕುಳಿತೊಂದು । ಬೆಳಗಿನ ಪ್ರತಿಮೆಯಂತಿಹನು ॥
ಮಲಗಿರೆ ಮಲಗಿದಂದದಿ ನಿಲ್ಲೆ ನಿಂದ ಪು । ತ್ತಳಿಯಂತೆ ತೋರುವನಾತ್ಮಾ ॥ ೧೭ ॥
ನಿಂದು ಕುಳಿತು ಮೊದಲಭ್ಯಾಸ ಮಾಳ್ಪುದು । ಬಂದ ಮೇಲಾ ಧ್ಯಾನ ನಿನಗೆ ॥
ನಿಂದರು ಕುಳಿತರು ಮಲಗಿದರೆಡೆಯಾಡ । ಲೆಂದೆಂದು ಥಾಳಿಸುತಿಹುದು ॥ ೧೮ ॥
ಮನವಾತ್ಮರೂಪಿನೊಳೈಕ್ಯವಾದರೆ ಸಾಕು । ತನುವೆಂಬುದೆಂತಿರ್ದರೇನು ॥
ಮಿನುಮಿನುಗಾತ್ಮ ತೋರುವನದು ಸಾರಭ । ವ್ಯನ ಸೊಮ್ಮು ಮಿಕ್ಕವರ್ಗಿಲ್ಲ ॥ ೧೯ ॥
ಜ್ಞಾನಸಾರವಿದು ಚಾರಿತ್ರಸಾರವಿದು ನ । ವೀನಸಮ್ಯಕ್ತ್ವಸಾರವಿದು ॥
ಮಾನಿತತಪಸಿನ ಸಾರವಿದಮಲಾತ್ಮ । ಧ್ಯಾನವು ನಂಬೆಲೆ ಭವ್ಯಾ ॥ ೨೦ ॥
ಮತಿಮೊದಲಾಗಿ ಕೈವಲ್ಯಬೋಧಾಂತ್ಯವಾ । ದತುಳಪಂಚಜ್ಞಾನ ತಾನೆ ॥
ವಿತತಾಷ್ಟಗುಣ ತಾನೆ ಸಿದ್ಧನು ತಾನೆ ನಿ । ಶ್ಚಿತವಿದು ನನ್ನಾಜ್ಞೆ ನಂಬು ॥ ೨೧ ॥
ಕಿರಿಕಿರಿದಾಗಿ ಕಾರ್ಮುಗಿಲಳಿವಾಗ ನೇ । ಸರ ಕಾಂತಿ ಹೆಚ್ಚಿ ಬಹಂತೆ ॥
ಉರೆ ಕರ್ಮ ಜರಿದಷ್ಟಕಾದ ಬೋಧವನೈದು । ತೆರನೆಂದು ನುಡಿವರಾತ್ಮನಿಗೆ ॥ ೨೨ ॥
ಉಳಿವಿಲ್ಲದೆಲ್ಲ ಮುಗಿಲು ಜಾರಲೊಡನರ್ಕ । ತಳತಳಿಸಂತಾತ್ಮಯೋಗಿ ॥
ತುಳಿಯಲೈದಾವರಣವನಾಗ ವಿಶ್ವವ । ತಿಳಿವನಂತವೆ ಮಹಾಬೋಧಾ ॥ ೨೩ ॥
ಕಿಲುಬು ಜಾರಿದರೆ ಕನ್ನಡಿ ಕಾಣ್ಬ ತೆರದಿ ನಿ । ರ್ಮಲನಾತ್ಮಯೋಗಿ ಧ್ಯಾನದೊಳು ॥
ತೊಲಗಿಪನೊಂಭತ್ತು ಕರ್ಮವನಾಗ ಕಾ । ಣ್ಬಳವಿಯೆ ಕೈವಲ್ಯದೃಷ್ಟಿ ॥ ೨೪ ॥
ತನಗೆ ತನ್ನಾತ್ಮನಿಂದಧಿಕವಿಲ್ಲೆಂಬ ಬ । ಲ್ಪನಹ ಜಾರಿಪುದೇಳುಕರ್ಮಾ ॥
ಅನಿತನೀ ಧ್ಯಾನ ಖಂಡಿಪುದಾಗ ಕ್ಷಾಯಿಕ । ವೆನಿಪ ಸಮ್ಯಕ್ತ್ವವೆಂಬರದಾ ॥ ೨೫ ॥
ದೂರಿಸಿಪ್ಪತ್ತೊಂದುಕರ್ಮವೀ ಧ್ಯಾನದಿ । ಸೋರಲಾಗಾತ್ಮನೊಳ್ಮನಸು ॥
ನೀರೊಳುಪ್ಪಡಗುವಂತಡಗೆ ಯಥಾಖ್ಯಾತ । ಚಾರಿತ್ರವೆಂಬರೈ ಭವ್ಯಾ ॥ ೨೬ ॥
ರೋಗ ಕೆಟ್ಟರೆ ರೋಗಿ ತ್ರಾಣಿಯಪ್ಪಂತಾತ್ಮ । ಯೋಗಿ ಪಂಚಾಂತರಾಯಗಳಾ ॥
ನೀಗುವನಾಗ ಮೂಜಗವನೆತ್ತುವ ಶಕ್ತಿ । ಯಾಗಲನಂತವೀರ್ಯ್ಯವದು ॥ ೨೭ ॥

ಗೋತ್ರಕರ್ಮಗಳೆರಡಳಿಯಲಾತ್ಮನು ಸಿದ್ಧ । ಕ್ಷೇತ್ರದಗ್ರಕೆ ಸಂದು ಮತ್ತೆ ॥
ಧಾತ್ರಿಗೆ ಬೀಳುತೇಳನು ಗುರುಲಘುವಲ್ಲ । ಚಿತ್ರಾರ್ಥವೆನಲೊಪ್ಪುತಿಹನು ॥ ೨೮ ॥

ವೇದನಾಂಕಿತಗಳನೆರಡನು ಧ್ಯಾನದಿ । ಭೇದಿಸಿದಾಗಗ್ನಿ ಕೈದು ॥
ಭೇದಿಸಲಾರವವ್ಯಾಬಾಧವೆಂಬ ಗು । ಣೋದಿತಾರ್ಥದೊಳಾತ್ಮನಿಹನು ॥ ೨೯ ॥

ಮಹಿತಾತ್ಮಧ್ಯಾನದಿ ನಾಲ್ದೆರದಾಯುವ । ವಹಿಸಿದಾಗಾತ್ಮ ಯುಕ್ತಿಯೊಳು ॥
ಬಹುಸಿದ್ಧರೂಪ ತನ್ನೊಳಗಿಟ್ಟುಕೊಂಬವ । ಗಹನಗುಣದೊಳೊಪ್ಪುತಿಹನು ॥ ೩೦ ॥

ಸಂಚಿಸಿ ತೊಂಭತ್ತಮೂರುನಾಮವ ಹರಿ । ಹಂಚ ಮಾಳ್ಪನು ಧ್ಯಾನದಿಂದ ॥
ಪಂಚೇಂದ್ರಿಯಕ್ಕಳವಡದೊಂದು ಸೂಕ್ಷ್ಮವೆಂ । ಬಂಚಿತಾರ್ಥದೊಳಾತ್ಮನಿಹನು ॥ ೩೧ ॥

ನೂರನಾಲ್ವತ್ತೆಂಟುಕರ್ಮವೆಲ್ಲವ ಸುಟ್ಟು । ತೂರುವುದಮಲಾತ್ಮಯೋಗಾ ॥
ಮೂರುಲೋಕಾಗ್ರದೊಳಿರಬಹುದದರಿಂದ । ಬೇರೊಂದು ಮೋಕ್ಷಾಂಗವಿಲ್ಲ ॥ ೩೨ ॥

ನಾನಲ್ಲಿ ಸುಳಿವೆನು ಸಿದ್ಧರಲ್ಲಿಹರು ಬ್ರ । ಹ್ಮಾನಂದವದು ತಾನೆ ನಂಬು ॥
ನಾನಾರ್ಥವಳಿದು ನೀ ನಿನ್ನನೆ ನೋಡದು । ತಾನೆ ನಿರ್ವೃತಿಗೊಯ್ವುದೆಂದಾ ॥ ೩೩ ॥

ಭೂರಿಶಾಸ್ತ್ರವನೋದಿ ತಪಸುಮಾಡಿಯು ಧ್ಯಾನ । ದೂರವಾದರೆ ಮುಕ್ತಿಯಿಲ್ಲ ॥
ಸಾರಭವ್ಯರ ಕೃತ್ಯವಿದು ನಿತ್ಯಧ್ಯಾನಾಲಂ । ಕಾರನಾಗೆಲೆ ಭವ್ಯಯೆಂದಾ ॥ ೩೪ ॥

ಮುಂದೆ ನಿನಗೆ ಮುಕ್ತಿ ಬೇಗದೊಳಹುದು ಕೇ । ಳಿಂದೈದುಸಂಪತ್ತು ನಿನಗೆ ॥
ಸಂದಿಸುವುವು ತಡವಿಲ್ಲವು ಸದರಕೆ । ಬಂದಿದ್ದುವೆಂದನಾ ಸ್ವಾಮಿ ॥ ೩೫ ॥

ಈಗ ನಾನವರ ನಾಮವ ಪೇಳಲೇಕಾತ್ಮ । ಯೋಗವ ಮಾಡೆಲೆ ಭವ್ಯಾ ॥
ಬೇಗ ತೋರ್ಪವು ನಿನಗಾ ಪಂಚಸಂಪತ್ತು । ತೂಗಿ ನೀನೆ ಕಾಣ್ಬೆಯೆಂದಾ ॥ ೩೬ ॥

ಯೋಚಿಸಿ ಕುಳ್ಳಿರು ಕಣ್ಮುಚ್ಚಿ ನೋಡೆಂದು । ಸೂಚಿಸಿ ನಿಂದನಾ ಸ್ವಾಮಿ ॥
ಆ ಚಕ್ರಧರನದಕಿಚ್ಛಾಮಿಯೆಂದು ಧ್ಯಾ । ನಾಚಾರವಿಡಿದನೇನೆಂಬೆ ॥ ೩೭ ॥

ಎದೆಮುಟ್ಟೆ ಪೆಗಲಿಗೇರಿದ ದುಗುಲವ ತೆಗೆ । ದವ ನಡುವಿಗೆ ಬೀಸಿಬಿಟ್ಟು ॥
ವಿದಿತಸಿದ್ಧಾಸನದಲ್ಲಿ ಕುಳಿತನು ಚಿ । ನ್ನದ ಬೊಂಬೆ ಕುಳಿತುದೆಂಬಂತೆ ॥ ೩೮ ॥

ಗಾಳಿಯ ಬ್ರಹ್ಮರಂಧ್ರಕೆ ನಡೆಸಿದನು ಕೂ । ಡಾಲಿಯ ಮುಚ್ಚಿ ಚಿತ್ತವನು ॥
ಏಳಲೀಸದೆ ಹಂಸನೊಳು ಕೂಡಿ ನೋಡಿದ । ಥಾಳಿಸಿತೊಳಗೆ ಪ್ರಕಾಶಾ ॥ ೩೯ ॥

ಅಂಶುಕ ಭೂಷಣ ಮೈಯ ಮೇಲಿದ್ದುವು । ಹಂಸ ಬತ್ತಲೆಯಿದ್ದನೊಳಗೆ ॥
ಹಂಸ ನೀರುಳಿದು ಪಾಲ್ವಿಡಿವಂತೆ ಮೈವಿಟ್ಟು । ಹಂಸನ ಪಿಡಿದನಾ ಕುಶಲಾ ॥ ೪೦ ॥

ಹಲಧರಿಯದ ನೆಲಮಾಳಿಗೆಯೊಳಗೊಬ್ಬ । ಬೆಳಗಿದ ದೀವಿಗೆಯಂತೆ ॥
ಕಲಿಲಾರಿ ಬಲ್ಲ ತಾ ಬಲ್ಲನನ್ಯರು ಕಾಣ । ರೊಳಗಿದ್ದುದಾತ್ಮಪ್ರಕಾಶಾ ॥ ೪೧ ॥

ಉಟ್ಟುಕೊಂಡಂತೆ ಬೆಳ್ದಿಂಗಳ ವೈತುಂಬ । ಲಿಟ್ಟುಕೊಂಡಂತೆಳೆಮಿಂಚಾ ॥
ಕಟ್ಟಾಣಿಮುಕ್ತಿಕಾಂತೆಯನಾಗ ತೋಳ್ತುಂಬ । ತೊಟ್ಟುಕೊಂಡಂತಿರ್ದದವಗೆ ॥ ೪೨ ॥
ಆಕಾಶದೊಳು ಹರಿದಾಡುವಂತಾ ಸಿದ್ಧ । ಲೋಕದೊಳೆಡೆಯಾಡುವಂತೆ ॥
ಬೇಕಾದ ಸಿದ್ಧರೊಳೇಕಾಂತಮಾಳ್ಪಂತೆ । ಭೂಕಾಂತನಿರ್ದನಾತ್ಮನೊಳು ॥ ೪೩ ॥
ಮಾತಿಲ್ಲ ಮನವಿಲ್ಲ ತನುವಿಲ್ಲವಿಂದ್ರಿಯ । ವ್ರಾತವಿಲ್ಲಿನಿಸಿಲ್ಲ ಕರ್ಮ ॥
ಜ್ಯೋತಿಯೆ ರೂಪು ಜ್ಞಾನವೆ ರೂಪು ತಾನಾಗಿ । ಖ್ಯಾತಾತ್ಮ ತೋರಿದನೊಳಗೆ ॥ ೪೪ ॥
ಅಚ್ಚ ಬೆಳಗಿನಲ್ಲಿ ತೋರ್ಪನೊಡನೆ ಕರ್ಮ । ಮುಚ್ಚಿ ಮಾಸುವ ಕೂಡೆ ಹೊಳೆವಾ ॥
ನೊಚ್ಚತಾಗಿರೆ ತೋರ್ಪ ಹೆಚ್ಚಿ ತೋರ್ಪನು ಹುಲ್ಲ । ಕಿಚ್ಚಿನಂತಾಗ ಧ್ಯಾನದೊಳು ॥ ೪೫ ॥
ಕಡುಬೆಳಗಾದಂದಿಗದು ಶುಕ್ಲ ಧ್ಯಾನವು । ಕೆಡದೆ ನಡೆವುದದು ಸಹಜಾ ॥
ಬಡಬೆಳಗಿದು ಧರ್ಮಸಂಧ್ಯಾನವದರಿಂದ । ಕೆಡುತ ಛಾಳಿಸುತಿರ್ದದವಗೆ ॥ ೪೬ ॥
ಹೊಳೆವಾಗ ಸಂತಸವಹುದು ಕರ್ಮದ ಪಿಂಡ । ಬಳಬಳನೊಳಸೋರುತಿಹುದು ॥
ಕೆಲದವರರಿಯರು ಜಿನ ಬಲ್ಲ ತಾ ಬಲ್ಲ । ದಳವೇರುತಿಹುದು ಸುಜ್ಞಾನಾ ॥ ೪೭ ॥
ತನಿಗಿಚ್ಚು ಮಧ್ಯದೊಳೊಟ್ಟಿದರರಗಿನ । ಮನೆ ಕೂಡೆ ಕರಗಿ ಸೋರ್ವಂತೆ ॥
ವಿನುತಾತ್ಮಶಿಖಿಯಿಂದ ತೈಜಸಕಾರ್ಮಣ । ತನು ಸೋರುತಿರ್ದವಾ ನೃಪಗೆ ॥ ೪೮ ॥
ಸಮಯ ಸಮಯಕೆ ಚಿತ್ರಭೆ ಹೆಚ್ಚಿ ಧ್ಯಾನಾಗ್ನಿ । ಸುಮತಿಬೋಧಾವರಣವನು ॥
ನಿಮಿಷಕೆ ಸುಟ್ಟುದಾ ನೃಪಗಾಗ ಫಲಿಸಿತು । ಸುಮತಿವಿಜ್ಞಾನಸಂಪತ್ತು ॥ ೪೯ ॥
ಪರರುಪದೇಶವಿಲ್ಲದೆ ಶಾಸ್ತ್ರವಿಲ್ಲದೆ । ಸ್ಫುರಿಸುವುದೊಳಗೆ ಸುಜ್ಞಾನಾ ॥
ವರಮತಿಬೋಧನೆಂದೆಂಬರಾ ಸುಜ್ಞಾನ । ದೊರೆಕೊಂಡುದಾ ಚಕ್ರಧರಗೆ ॥ ೫೦ ॥
ಅದು ಸಾರಲೊಡನೆ ಮತ್ತಾ ಧ್ಯಾನವಹ್ನಿ ಹ । ತ್ತಿದುದು ಶ್ರುತಾವರಣವನು ॥
ಸದರದೊಳದು ಬೆಂದು ಹೋಯ್ತು ಶ್ರುತಜ್ಞಾನ । ಹೃದಯದೊಳೆಸೆದುದಾ ನೃಪಗೆ ॥ ೫೧ ॥
ಮತಿಪೂರ್ವವಾಗಿ ಶಾಸ್ತ್ರವನೋದಿ ತಿಳಿವುದು । ಶ್ರುತಬೋಧನೆನಿಪುದಾ ಜ್ಞಾನಾ ॥
ಚತುರ್ದಶಪೂರ್ವೆಯ ಗಣನೆಯಾಗಿಹುದದು । ಚತುರಗಾಯ್ತಾತ್ಮಯೋಗದೊಳು ॥ ೫೨ ॥
ಪ್ರವರಾತ್ಮಯೋಗಾಗ್ನಿ ಕೂಡೆ ಹತ್ತಿದುದು ಮುಂ । ದವಧಿದೃಗ್ಬೋಧರೋಧಗಳಾ ॥
ಎವೆಯಿಕ್ಕುವಷ್ಟರೊಳವು ಬೆಂದು ನೃಪಗಾದು । ವವಧಿವಿಜ್ಞಾನದೃಷ್ಟಿಗಳು ॥ ೫೩ ॥
ಅವಧಿಯೆಂದರೆ ಹವಣಿಗೆ ಪೆಸರದರಿಂದ । ಭುವನವೆಲ್ಲವ ಕಾಣ್ಬವಲ್ಲ ॥
ಹವಣಿಸಿ ಕಾಣ್ಬರಿವವಧಿಬೋಧಾಕ್ಷಿಗ । ಳವಗಾಗ ದೊರೆಕೊಂಡುವೆರಡು ॥ ೫೪ ॥
ಹಿಂದಣ ಭವಗಳ ಮುಂದಣ ಭವಗಳ । ಕುಂದದರಿವ ಕಾಣ್ಬ ಪೆಂಪು ॥
ನಿಂದುದಾ ನೃಪನೆದೆಯೊಳಗೆಂದರಾ ಧ್ಯಾನ । ದಿಂದ ಹೆಚ್ಚಿನ ತಪಸುಂಟೆ ॥ ೫೫ ॥

ಮೇಲೆ ಚೇತೋಜ್ಞಾನವುಂಟದು ಗೃಹಿಗಾಗ । ದಾಲಿಸೆ ಮತಿವೊದಲಾದ ॥
ಲಾಲಿತಬೋಧ ನಾಲ್ಕಿವು ಕ್ಷಾಯಿಕಗಳಲ್ಲ । ಪೇಳೆ ಕ್ಷಯೋಪಶಮುಗಳು ॥ ೫೬ ॥
ಬಟ್ಟೆಯು ಹಳೆಹುಲ್ಲ ಸುಟ್ಟಂತೆ ಹೋಗುತ । ಹುಟ್ಟುತಿಪ್ಪವು ನಾಲ್ಕುಬೋಧಾ ॥
ಕಟ್ಟಕಡೆಯು ಬೋಧವಾದಂದಿಗದು ಕಡೆ । ಕಟ್ಟಿಲ್ಲದೊಳಗೈಕ್ಯವಹುದು ॥ ೫೭ ॥
ಆವರಣದ ಕ್ಷಯದಿಂದಾಗೆ ಕ್ಷಾಯಿಕ । ತಾವಿವು ಕ್ಷಾಯಿಕವಲ್ಲ ॥
ಕೈವಲ್ಯಬೋಧಾಕ್ಷಿ ಕ್ಷಾಯಿಕವವರೈಕ್ಯ । ಭಾವಗಳಿವು ಭಿನ್ನವಲ್ಲ ॥ ೫೮ ॥
ಇವರ ವರ್ಣನೆ ಸಾಕು ವಿಶ್ವಾಸ ಮೋಹ ಕ । ರ್ಮವ ಹತ್ತಿತಾತ್ಮಯೋಗಾಗ್ನಿ ॥
ಧ್ರುವಗೆಡಿಸಿದುದೇಳುಪ್ರಕೃತಿಯ ಸುಟ್ಟಿತು । ತವೆ ಮತ್ತೆ ತಲೆದೋರದಂತೆ ॥ ೫೯ ॥
ಪಥ್ಯವಲ್ಲೆನಿಸುವನಂತಾನುಬಂಧಿಯ । ಮಿಥ್ಯಾಂಗ ನಾಲ್ಕು ಕಷಾಯಾ ।
ಮಿಥ್ಯೆ ಸಮ್ಯಜ್ಮಿಥ್ಯೆ ಸಮ್ಯಕ್ತ್ವಪ್ರಕೃತಿಯು । ತಥ್ಯಾಗ್ನಿ ಸುಟ್ಟುದಿಂತೇಳಾ ॥ ೬೦ ॥
ಸಿದ್ಧರ ಸಮ್ಯಕ್ತ್ವಕರುಹನ ಸಮ್ಯಕ್ತ್ವ । ಕುದ್ದವಲ್ಲಿಳಿತವಲ್ಲವರ ॥
ವೃದ್ಧಿಗೆ ಸರಿಯಾದ ಕ್ಷಾಯಿಕಸಮ್ಯಕ್ತ್ವ । ಸಿದ್ಧಿಯ ಪಡೆದನಾ ಚದುರಾ ॥ ೬೧ ॥
ಆತ್ಮನಿಂದಧಿಕವಸ್ತುಗಳಿಲ್ಲ ತನಗೆ ತ । ನ್ನಾತ್ಮನಿಂದಲೆ ಮುಕ್ತಿಯೆಂದು ॥
ಆತ್ಮಾರ್ಥಿ ನೆಲೆಗೊಂಡನದು ದಿವ್ಯಸಮ್ಯಕ್ತ್ವ । ವಾತ್ಮಸಿದ್ಧಿಯದಿನ್ನು ಸದರಾ ॥ ೬೨ ॥
ಮತಿ ಮೊದಲಾದ ಸುಜ್ಞಾನ ಮೂರವಧಿಶೋ । ಭಿತದೃಷ್ಟಿ ದಿವ್ಯಸಮ್ಯಕ್ತ್ವ ॥
ಕ್ಷಿತಿಪಗಿಂತೈದುಸಂಪದವಾದುವಾ ಜಗ । ತ್ಪತಿಯ ನಿರೂಪ ತಪ್ಪುವುದೆ ॥ ೬೩ ॥
ಹನ್ನೊಂದುಕರ್ಮ ಕೆಟ್ಟೈದುಸಂಪದವಾದು । ವಿನ್ನಿದ್ದ ಕರ್ಮವ ಮುಂದೆ ॥
ನನ್ನಿಂದ ನಾನಿಷ್ಟು ದಿನಕೆ ಖಂಡಿಪೆನೆಂದು । ತನ್ನೊಳೆ ತಿಳಿದನಾ ಚಕ್ರಿ ॥ ೬೪ ॥
ಇಂದಿಗಿಷ್ಟೆ ಲಾಭವೆಂದು ನಿಶ್ಚೈಸಿ ಹೃ । ನ್ಮಂದಿರದಮಲಚಿನ್ಮಯಗೆ ॥
ವಂದಿಸಿ ಕಣ್ದೆರೆದನು ಹರುಷದೊಳಿದ್ದು । ನಿಂದನಾ ನಿಶ್ಯಂಕವೀರಾ ॥ ೬೫ ॥
ಜಯ ಜಯ ತ್ರಿಭುವನದೊಡೆಯ ನನ್ನೊಡೆಯ ನಿ । ನ್ನಯ ಕೃಪೆಯಿಂದ ಕರ್ಮಗಳಾ ॥
ಜಯಿಸಿದೆನೈದುಸಂಪದವಾಂತೆನೆಂದು ಸ್ವಾ । ಮಿಯ ಪಜ್ಜೆಗಿಟ್ಟನು ನೊಸಲಾ ॥ ೬೬ ॥
ವೊಳಗಿದುವಾಗಳೆ ಸುರವಾದ್ಯಕೋಟಿ ಪೂ । ಮಳೆಗರೆದರು ಸುರರುಬ್ಬಿ ॥
ಗೆಲವೆದ್ದು ಸಭೆಯೆಲ್ಲ ಜಯ ಜಯ ಮಾಮಾಯೆಂ । ದುಲಿದುದು ಸಂಭ್ರಮಗೊಂಡು ॥ ೬೭ ॥
ಒಳಗಾತ್ಮಕಳೆ ಹೆಚ್ಚಿದಷ್ಟಕೆ ಮೈಯೊಳು । ಜ್ವಳಿಸಿತು ಹೊಸಕಾಂತಿ ನೃಪಗೆ ॥
ಕುಲಪುತ್ರರದ ಕಂಡು ಕುಣಿದಾದಿಜಿನಪಾದ । ನಳಿನಕೆ ನಮಿಸಿದರೊಸೆದು ॥ ೬೮ ॥
ಭರತರಾಜೇಂದ್ರ ಭವ್ಯಾಂಬುಜಭಾಸ್ಕರ । ಪರಮೇಶನಗ್ರಕುಮಾರಾ ॥
ಪರಮಾತ್ಮರಸಿಕ ಕರ್ಮಾರಿ ಹೋಯೆಂದರು । ಸುರವೇತ್ರಧರರು ಕೈಯೆತ್ತಿ ॥ ೬೯ ॥

ಅರುಹನ ಬೀಳ್ಕೊಂಡು ಮುನಿಗಳಿಗೆರಗಿ ಸ । ರ್ವರಿಗಿಂಪ ನುಡಿದು ಚಕ್ರೇಶಾ ॥
ಪುರಿ ಗೆದ್ದೆ ಹೋಗೆಂಬ ನುಡಿಗೇಳುತಲೂರ್ಗೆ ಪು । ತ್ರರುಗೂಡಿ ಮುಗುಳ್ದನುಬ್ಬಿನೊಳು ॥ ೭೦ ॥
ಮೆಯ್ಯ ದಂಡಿಸದೆ ಚಿತ್ತವನೆ ದಂಡಿಸಿ ತನ್ನೊ । ಳೊಯ್ಯನೆ ನಿಂದು ಕರ್ಮಗಳಾ ॥
ಉಯ್ಯನುಗ್ಗೊತ್ತುವಂತೊತ್ತಿಬಿಟ್ಟಾ ಬಲು । ಗೆಯ್ಯನೆದ್ದನು ತನ್ನ ಪುರಕೆ ॥ ೭೧ ॥
ಬಡಬಡಗುಟ್ಟಿ ಬಾಯಾರಿ ಬಹಳಕಾಲ । ಗೊಡೆಗುಟ್ಟೆ ಶಾಸ್ತ್ರಗಳಹರಾ ॥
ನಡೆಯ ನಗುತ ಕ್ಷಣದೊಳು ಶಾಸ್ತ್ರವಾರ್ಧಿಯ । ಕಡೆಗಂಡ ಕುಶಲನೆಯ್ದಿದನು ॥ ೭೨ ॥
ಅವಗಡವೆನಿಸುವ ತಪಸುಮಾಡದೆ ಬಹು । ದಿವಸ ಚಿತ್ತಾತಂಕಗೊಳದೆ ॥
ಅವಧಿಬೋಧವ ಕ್ಷಣದೊಳು ಪಡೆದಾತ್ಮಾನು । ಭವಿಯೆದ್ದನೊಡನೆ ತನ್ನೂರ್ಗೆ ॥ ೭೩ ॥
ಮಾಯೆಯನೊತ್ತಿ ಮೈಯೊಳಗಿರ್ದ ಷಂಸಾಭಿ । ಪ್ರಾಯದೊಳವಗತನಾಗಿ ॥
ಕ್ಷಾಯಿಕೋದಾತ್ತಸಮ್ಯಕ್ತ್ವವ ಪಡೆದ ವಿ । ಡಾಯನೆದ್ದನು ತನ್ನ ಪುರಕೆ ॥ ೭೪ ॥
ಮಂಡೆ ಮೈಯೊಳು ವಸ್ತ್ರ ಭೂಷಣವಿದ್ದು ಚಿ । ತ್ಪಿಂಡವ ಬತ್ತಲೆಮಾಡಿ ॥
ಕಂಡೈದುಸಿರಿಯ ಪಡೆದ ಕಾಲಕರ್ಮದ । ಮಿಂಡನೆದ್ದನು ತನ್ನ ಪುರಕೆ ॥ ೭೫ ॥
ದೀಕ್ಷೆವಡೆದ ತನೂಜರ ನೋಳ್ಪೆನೆಂದೆಯ್ದಿ । ಸಾಕ್ಷಾದಾತ್ಮನ ನೋಡಿ ॥
ಆ ಕ್ಷಣದೊಳೆ ಪಂಚಸಂಪದವಡೆದತಿ । ದಕ್ಷನೆದ್ದನು ತನ್ನ ಪುರಕೆ ॥ ೭೬ ॥
ಧ್ಯಾನವೆ ಬಲು ತಪಸದು ಯೋಗಿಗುಂಟು ನ । ವೀನಗೃಹಸ್ಥಗುಂಟದಕೆ ॥
ನಾನೇ ದೃಷ್ಟಾಂತವೆಂದಿಳೆಗೆ ಡಂಗುರಿಸುವಂ । ತಾ ನರನಾಥನೆಯ್ದಿದನು ॥ ೭೭ ॥
ತನ್ನ ತಾನರಿದವನೆಲ್ಲ ತಾನರಿವನು । ತನ್ನನರಿವನೆ ತಾಪಸನು ॥
ತನ್ನ ಕಂಡೆಲ್ಲರು ನಂಬುವುದೆಂದದ । ಕನ್ನಡಿಪಂತೆ ಸಾಗಿದನು ॥ ೭೮ ॥
ಹಲವು ವಿಮಾನವನೇರಿ ಪುತ್ರರು ತನ್ನ । ಬಳಸಿನೊಳೆಯ್ತರಲವರ ॥
ಬಳಸಿನೊಳ್ಗಣಬದ್ಧರೆಯ್ತರಲಂಬರ । ತಳದೊಳೆಯ್ತಂದನಾ ಸೊಬಗಾ ॥ ೭೯ ॥
ಮೆಲ್ಲಮೆಲ್ಲನೆ ರಾಯ ಬರುತಿರೆ ಯುವರಾಜ । ನುಲ್ಲಾಸವೆತ್ತೊಂದ ನೆನೆದು ॥
ಸೊಲ್ಲಿಸದಯ್ಯಗೆ ಕೆಲರೊಡಗೂಡಿ ತ । ಳ್ವಿಲ್ಲದೆ ಹರಿದನು ಪುರಕೆ ॥ ೮೦ ॥
ಮಿಂಚಿನಂತೂರ್ಗೆಯ್ದಿ ಮಂತ್ರಿಮಿತ್ರರಿಗಯ್ಯ । ಪಂಚಸಂಪದವೆತ್ತ ತೆರನಾ ॥
ಉಂಚದಿ ಪೇಳೆ ಸರ್ವರು ಕೇಳ್ದು ರೋಮಾಂಚ । ಕಂಚುಕರಾದರಾ ಕ್ಷಣವೆ ॥ ೮೧ ॥
ಎತ್ತಿತು ಕೇತು ಪತಾಕೆ ಭೇರಿಗಳು ದಿ । ಗ್ಭಿತ್ತಿ ಬಿಮ್ಮನೆ ಮೊಳಗಿದುವು ॥
ಮತ್ತೇಭ ಹಯ ರಥ ನೃಪರು ಮುಂತಾದ ಸಂ । ಪತ್ತಿನೊಳಿದಿರಾಗಿ ಬಂದಾ ॥ ೮೨ ॥
ಇದಿರುಗೊಂಡಯ್ಯನಿಗಿತ್ತು ನಿವಾಳಿಯ । ಪದಕೆರಗಿದನರ್ಕಕೀರ್ತಿ ॥
ಅದ ಕಂಡು ತಮ್ಮಂದಿರೆಲ್ಲ ನಿವಾಳಿಯ । ಪದುಳಿಸಿ ಮಣಿದರಯ್ಯನಿಗೆ ॥ ೮೩ ॥

ಅರಸುಮಕ್ಕಳು ಮಂತ್ರಿ ಸಖರು ನಿವಾಳಿಯಿ । ಟ್ಟರಸಗೆರಗಿದರರ್ತಿಯೊಳು ॥
ಪುರಜನ ಪರಿಜನ ಕೈಯೆತ್ತಿ ಮುಗಿಯೆ ಭೂ । ವರ ನೋಡುತಹೊರೊಳಹೊಕ್ಕಾ ॥ ೮೪ ॥

ಪೊಗಳ್ವ ಭಟ್ಟರ ಕೃತಿವೇಳ್ವ ಕಬ್ಬಿಗರ ಸೇ । ಸೆಗಳ ಸೂಸುವ ವಿಪ್ರಜನರಾ ॥
ನಗುತ ನೋಡುತ ಬರುತಿರ್ದನಾ ಭರತೇಶ । ನಗರಿಯ ರಾಜಬೀದಿಯೊಳು ॥ ೮೫ ॥

ಉಲಿವ ಪಾಠಕರ ಸಾಧನೆಗೈವ ಮಲ್ಲರ । ಕೆಲಸಾರ್ದು ನಡೆವ ಸೂಳೆಯರಾ ॥
ಸಲೆ ಪರಾಕವಧಾನ ಜತನವೆಂದೆಂಬ ಹೊಂ । ಜೆಳೆಗರ ನೋಡುತೆಯ್ದಿದನು ॥ ೮೬ ॥

ಮಾಡ ಮದಿಲನೇರಿ ಪುರಸತಿಯರು ತನ್ನ । ನೋಡಿದರ್ತಾನತ್ತ ನೋಡಾ ॥
ಆಡುವ ಪಾತ್ರವನಿಷ್ಟು ಪರಾಕಿಂದ । ನೋಡುತೆಯ್ತಂದನಾ ಗರುವಾ ॥ ೮೭ ॥

ಕಡೆಯ ಹಜಾರದೊಳ್ನಿಂದು ನಂದನರ ಬೀ । ಳ್ಕೊಡುತ ಸರ್ವರಿಗೆ ಕೈವೀಸಿ ॥
ಬಿಡುಗೆಗೊಟ್ಟರಮನೆಯೊಳಗೆ ತಾ ಹೊಕ್ಕನಾ । ಕಡುಗಾಡಿಕಾರನುಬ್ಬಿನೊಳು ॥ ೮೮ ॥

ಹೊಸಕಾಂತಿ ಹೊರಸೂಸುತಿರೆ ಕಂಡು ರಾಣಿಯು । ಬಿಸವಂದಬಡುತೊತ್ತಿ ಬಂದು ॥
ಒಸಗೆಗೊಂಡಾರತಿಯೆತ್ತಿ ನಿವಾಳಿಯಿ । ಟ್ಟೊಸೆದೆರಗಿದರು ವಲ್ಲಭಗೆ ॥ ೮೯ ॥

ಹಾರವ ತೆಗೆದು ನಿವಾಳಿಯಿಟ್ಟಳು ರತ್ನ । ದಾರತಿಯೆತ್ತಿ ವಲ್ಲಭಗೆ ॥
ಸಾರಿ ಪಜ್ಜೆಗೆ ಪಣೆಯಿಟ್ಟಳಾ ಪಟ್ಟದ । ವಾರಿಜಾನನೆ ಭಕ್ತಿಯಿಂದ ॥ ೯೦ ॥

ಮಿಂಚುಗಣ್ಣಬಲೆಯರಿಗೆ ತನಗಂದಾದ । ಪಂಚಸಂಪತ್ತ ತಾನುಸುರಿ ॥
ಚಂಚುರಾನಂದದೊಳಿರ್ದನಾ ನೃಪನಿದು । **ಪಂಚೈಶ್ವರ್ಯದ ಸಂಧಿ** ॥ ೯೧ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೨ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೩ ॥

ಸಿರಿಗೇನು ಕಡಮೆ ಸಿಂಗರಕೇನು ಕಡಮೆ ಸೌಂ । ದರಕೇನು ಕಡಮೆ ನೀನಿರಲು ॥
ಎರವಿಲ್ಲದೆನ್ನಂತರಂಗದೊಳಿರು ಪ್ರಭುಂ । ಧುರನೆ ಚಿದಂಬರಪುರುಷಾ ॥ ೯೪ ॥

ಪಂಚೈಶ್ವರ್ಯದ ಸಂಧಿ ಸಂಪೂರ್ಣಂ

# ತೀರ್ಥೇಶಪೂಜಾಸಂಧಿ

ವಿಶ್ವವಿದ್ಯಾಧರ ವಿಶ್ವತೋಲೋಚನ । ವಿಶ್ವತೋಮುಖ ವಿಶ್ವತೋಂಶು ॥
ವಿಶ್ವೇಶ ಮತಿದೋರು ದುಷ್ಕರ್ಮ ತೃಣಲೋಹಿ । ತಾಶ್ವ ನಿರಂಜನಸಿದ್ಧಾ ॥ ೧ ॥

ಭರತೇಶ ಪಂಚಸಂಪದವ ಪಡೆದ ಮೇಲೆ । ಕರೆಸಿ ಮೇಘೇಶನ ಮಗನಾ ॥
ವರಮಂತ್ರಿಸಖನೃಪರೆಲ್ಲರಾನಂದಿಸೆ । ಕರುಣಿಸಿ ನುಡಿದನೇನೆಂಬೆ ॥ ೨ ॥

ಜಯನೆಂದಯೋಧ್ಯನೆಂದಿವನ ತಂದೆಗೆ ಮುನ್ನ । ದ್ವಯನಾಮವುಂಟದ ಬಿಡಿಸಿ ॥
ಪ್ರಿಯದಿ ಮೇಘೇಶ್ವರನೆಂದಾನು ಕರೆದಿತ್ತೆ । ನಿಯುತವೀರಾಗ್ರಣಿಬಿರುದಾ ॥ ೩ ॥

ಆತನೆಯ್ದಿದ ಮೇಲೆ ನಮಗೀತನಾತನ್ನೈ । ಈತನ ಪಿತಗೆ ಮತ್ತಾದ ॥
ನೂತನ ಬೇಡ ಪುರಾತನವಿರಲೀತ । ಮಾತೇನಯೋಧ್ಯಾಂಕನೆಂದಾ ॥ ೪ ॥

ಸೇವೆಯ ಕಂಡು ನಿನ್ನಯ್ಯನಿಂದಧಿಕದ । ಠೀವಿಯ ಮಾಳ್ಪೆನೈ ನಾನು ॥
ಈ ವೇಳೆಗಿರು ನಿನ್ನ ಪಿತನ ಭಾಗ್ಯದೊಳೆಂದು । ಠಾವುಗೈಸಿದನದು ಕಿರಿದೆ ॥ ೫ ॥

ಇವ ನೆರೆವಂದುಮುಟ್ಟೆವನಯ್ಯನಿಟ್ಟ ಮಾ । ನವನೆ ನೋಡಲಿ ನನ್ನ ಪಡೆಯಾ ॥
ಇವನೆ ಸೇನಾಪತಿಯೆಂದು ಪಟ್ಟವ ಕಟ್ಟಿ । ಭುವನಾಗ್ರಗಣ್ಯ ಮನ್ನಿಸಿದಾ ॥ ೬ ॥

ಹೋದುದು ಮುನ್ನಿನನಂತವೀರ್ಯಾಂಕಿತ । ವಾದುದಯೋಧ್ಯಾಭಿಧಾನಾ ॥
ಆ ದಿನ ತೊಡಗಿ ಸಂತಸದಿ ಬೆಳೆದು ಯೌವ । ನೋದಯವಡೆದನಾ ಕುವರಾ ॥ ೭ ॥

ಅರಸು ಪಿಡಿಯೆ ತೃಣ ಪರ್ವತವಹುದೆಂಬ । ಧರಣಿಯ ಮಾತು ತಪ್ಪುವುದೆ ॥
ತರಳನಾ ಸೇನೆಗಗ್ರಣಿಯಾದ ಪುಣ್ಯವಂ । ತರು ಮುಟ್ಟೆ ಮಣ್ಣು ಹೊನ್ನಹುದು ॥ ೮ ॥

ಹರುಷದೊಳಿಂತು ಕೆಲವು ಕಾಲ ಪೋಗಲೊಂ । ದಿರುಳಿನ ಕಡೆಯ ಜಾವದೊಳು ॥
ಉರುಮಂದರಾದ್ರಿ ಲೋಕಾಗ್ರಕೆ ನೆಗೆವುದ । ಭರತೇಶ ಕಂಡ ಸ್ವಪ್ನದೊಳು ॥ ೯ ॥

ಶ್ರೀಹಂಸನಾಥಯೆಂದೊಡನೆದ್ದು ಕುಳಿತನಾ । ಬಾಹುದೆಕ್ಕೆಯ ಪಟ್ಟದರಸಿ ॥
ಆ ಹೊತ್ತಿನೊಳೆ ರಾಯನಳುವ ಕನಸ ಕಂಡು । ದೇಹ ಕಂಪಿಸುತಿರ್ದಳೊಡನೆ ॥ ೧೦ ॥

ಸ್ವಾಮಿ ಕಷ್ಟನ ಕಂಡೆನೆಂದಪ್ಪಿ ಭಯವಡು । ತಾ ಮನೋಹರಿ ಪೇಳ್ದಳದಕೆ ॥
ಕೋಮಲೆ ಬೆದರದಿರೆಂದಪ್ಪಿ ಪೇಳ್ದನು । ತಾ ಮುನ್ನ ಕಂಡ ಸ್ವಪ್ನವನು ॥ ೧೧ ॥

ಅವಧಿವಿಜ್ಞಾನದಿಂದಾರೈದೆನಬಲೆ ಕೇ । ಳಿವು ವೃಷಭೇಶ್ವರನಿನ್ನು ॥
ಶಿವಲೋಕಕೆಯ್ದುವ ಸೂಚನೆಯೆನಲಿನ್ನು । ನವಗಾರು ಶರಣೆಂದಳಾಕೆ ॥ ೧೨ ॥

ನವಗಿನ್ನು ಹಂಸನಾಥನೆ ಶರಣವನಂತೆ । ಶಿವಲೋಕಕೆಯ್ದುವ ನಾವು ॥
ಭವದಲ್ಲಿ ಬಾಳ್ವುದೆಲ್ಲವು ಸ್ವಪ್ನವೀ ಸ್ವಪ್ನ । ದವಗಡಕೆಣಿಸಬೇಡೆಂದಾ ॥ ೧೩ ॥

ತರುಣಿಯು ಸಂತೈಸುತಲ್ಲಿದ್ದರ್ು ಕೈಲಾಸ । ಗಿರಿಗಿಟ್ಟನವಧಿದೃಷ್ಟಿಯನು ॥
ಪುರುನಾಥನಿರವ ಪತ್ಯಕ್ಷದಿ ಕಂಡನಾ । ನರನಾಥವೇಷದ ಶಿವನು ॥ ೧೪ ॥

ಸಮವಸರಣವ ಬಿಟ್ಟದ್ರಿಯೊಳ್ಬೇರೊಂದು । ವಿಮಲಶಿಲೆಯೊಳಾದಿನಾಥಾ ॥
ಅಮರೇಂದ್ರದಿಙ್ಮುಖನಾಗಿ ಸಿದ್ಧಾಸನ । ಕ್ರಮವಿಡಿದಿರೆ ಕಂಡನಾಗ ॥ ೧೫ ॥

ಹದಿನಾಲ್ಕುದಿನಕಿನ್ನು ಮುಕ್ತಿಗೆಯ್ದುವನೆಂದು । ಹೃದಯದೊಳರಿದನಪ್ಪರೊಳು ॥
ಉದಯವಾದುದು ಸಭೆಗೆಯ್ದಿ ಸರ್ವರಿಗೆ ಮ । ತ್ತದರ ವೃತ್ತಾಂತವ ಪೇಳ್ದಾ ॥ ೧೬ ॥

ಸಿರಿಯ ಮಗನು ಮಂತ್ರಿ ದಳಪತಿ ಗೃಹಪತಿ । ಇರುಳು ತಾವೊಂದೊಂದು ಕನಸಾ ॥
ಪರಿಗಣಿಸಿದ್ದುಸುರಿದರವು ಪುರುನಾಥ । ತೆರಳುವ ಸೂಚನೆಯೆಂದಾ ॥ ೧೭ ॥

ಭೂನಾಥ ನುಡಿವನಿತರೊಳೊಬ್ಬ ಖಚರ ವಿ । ಮಾನವನೊತ್ತಿ ಬಂದದನೆ ॥
ಆನಂದನೆಂಬವ ಪೇಳಲು ನೃಪನ ವಿ । ಜ್ಞಾನಕೆ ಮೆಚ್ಚಿತಾ ಸಭೆಯು ॥ ೧೮ ॥

ರಾಯ ಪೂಜಿಪೆನೆಂದು ನೆನೆದು ಸುವಸ್ತು ನಿ । ಕಾಯಸಹಿತ ಬಹುದೆಂದು ॥
ರಾಯಸಗಳ ದಿಕ್ಕುದಿಕ್ಕಿಗೆ ಬರೆಸಿ ನಿ । ರಾಯಸವೆನೆ ಕಳುಹಿದನು ॥ ೧೯ ॥

ತಂಗಿಯರೂರೊಳಿರಲಿ ಸಿಂಧುದೇವನು । ಗಂಗಾದೇವನು ಬರಲಿ ॥
ಹಿಂಗದೆ ನಮಿರಾಜ ಭಾನುರಾಜಾದಿಯಾ । ದಿಂಗಿತರ್ಬರಲೆಂದು ಪೇಳ್ದಾ ॥ ೨೦ ॥

ಅಳಿಯಂದಿರದ್ರಿಗೆ ಬರಲಿ ಪುತ್ರಿಯರೆಮ್ಮ । ನಿಳಯಕೆ ಬಂದಿರಲೆಂದು ॥
ಕಳುಹಿ ಲೇಖನಗಳ ಕೂಡೆ ತನ್ನರಮನೆ । ಯೊಳವೊಕ್ಕನಾ ಸಾರ್ವಭೌಮಾ ॥ ೨೧ ॥

ನಾನಲ್ಲಿ ಪೂಜಿಪೆ ನೀವಿಲ್ಲಿ ರಚಿಸಿ ನ । ವೀನದಾರತಿಗಳ ಕಳುಹಿ ॥
ಪೀನಪುಣ್ಯವ ಮಾಡಿಕೊಂಬುದೆಂದೊಳಗಣ । ಮಾನಿನಿಯರಿಗೆ ನೇಮಿಸಿದಾ ॥ ೨೨ ॥

ಭೇರಿಯ ಪೊಯ್ಸಿ ಕೈಲಾಸಪರ್ವತಕಲ್ಪ । ದೂರದಿ ಕಟಕವನಿರಿಸಿ ॥
ಧಾರಿಣಿಸುರರಾಪ್ತರಾತ್ಮಜರೊಡಗೂಡಿ । ಭೂರಿವಿಮಾನದೊಳೆದ್ದಾ ॥ ೨೩ ॥

ಮಳೆಯ ಧಾಳಿಯವೊಲು ಬಿರ್ರನೆ ಬಂದು ತ । ಪ್ಪಲೊಳಿಷ್ಟು ನಿಂದು ಚಕ್ರೇಶಾ ॥
ಚಲುವಿಕೆಯಾಗಿ ಪೂಜೆಯ ಮಾಳ್ಪೆನೆಂದು ತ । ನ್ನೊಳಗಿಂತು ನೆನೆದನೇನೆಂಬೆ ॥ ೨೪ ॥

ಹಗಲಲ್ಲಿ ಪೂಜೆ ರಾತ್ರಿಯೊಳು ರಥೋತ್ಸವ ; ಸೊಗಸಾಗಿ ನಡೆಯಬೇಕದಕೆ ॥
ಬಗೆವೆತ್ತು ತೇರ್ಗಳ ರಚಿಸೆಂದು ವಿಶ್ವಕ । ರ್ಮಗೆ ನೇಮವಿತ್ತನಾ ಕ್ಷಣವೆ ॥ ೨೫ ॥

ಉಲುಪೆಯ ತರಿಪುದು ತೇರ ಸಿಂಗರಿಪುದು । ಬಳಿಯಟ್ಟುವುದು ನೃಪರ್ಗೆಂದು ॥
ಹಲವು ವಿಮಾನವ ಖಚರರಿಗಟ್ಟಿಸೆ । ದಳಪತಿಗೊಡನೆ ನೇಮಿಸಿದಾ ॥ ೨೬ ॥

ಗಂಗೆಯ ತಡಿಯಲ್ಲಿ ತನಗೇಕಭುಕ್ತಿಗ । ನ್ನಂ ಗೈಯೆ ಸೂವಾರಗೊರೆದು ॥
ಜಂಗುಳಿಪರಿಸೆಯ ತೃಪ್ತಿಗುಜ್ಜುಗಿಸೆಂದು । ಹಿಂಗಿಸಿದನು ಗೃಹಪತಿಯಾ ॥ ೨೭ ॥

ಮುನಿಭುಕ್ತಿಯಾರೈಕೆ ನಿನ್ನದು ನೃಪರ ಸ । ದ್ವಿನಯೋಪಚಾರವು ನಿನಗೆ ॥
ನನಗೆ ಪೂಜೆಯು ಧ್ಯಾನವಣ್ಣಯೆಚ್ಚರಿಕೆಯೆಂ । ದನು ಯುವರಾಜಗಾ ಕುಶಲಾ ॥ ೨೮ ॥
ತೇಜಿಷ್ಠರಳಿಯಂದಿರರಸುಮಕ್ಕಳ ಪಂಙ್ತಿ । ಭೋಜನ ಬೀಡಾರದಿಂದ ॥
ಪೂಜಿತ ಮಾಡಪ್ಪಯೆಂದು ಮಹಾಬಲ । ರಾಜಗೆ ನೇಮವನಿತ್ತಾ ॥ ೨೯ ॥
ಬಾ ಬುದ್ಧಿಸಾಗರ ಬ್ರಾಹ್ಮಣಭೋಜನ । ಶ್ರೀಬಲಿಗಳ ಚಿಂತೆ ನಿನಗೆ ॥
ಈ ಬಂದ ಪರಿಸೆಯಾರೈಕೆ ಮಾಕಾಳಗೆಂ । ದಾ ಬಸ್ಮಿಕಾರ ನೇಮಿಸಿದಾ ॥ ೩೦ ॥
ಊರಿಗೆ ನಿಚ್ಚ ವಿಮಾನದೊಳೆಯ್ದಿ ತಂ । ದಾರತಿಗಳನೀವುದೆಂದು ॥
ಶೂರವೀರಾಂಕದ ನಂಬುಗೆವಂತರಿ । ಗಾ ರಾಯ ನೇಮವನಿತ್ತಾ ॥ ೩೧ ॥
ಪೂಜಿಪೆ ನಾನು ನೀವೆನಗೆ ವ್ಯಂತರಖಗ । ರಾಜರೊಡನೆ ವಸ್ತುಗಳನು ॥
ಯೋಜಿಸಿ ನೀಡಿಕೊಡುವುದೆಂದು ಕರೆದು ಮ । ಹಾಜನಗಳಿಗೆ ನೇಮಿಸಿದಾ ॥ ೩೨ ॥
ಚಿಂತಿಸಿದುದನಿದು ಕೊಡುವುದು ನಿನ್ನ ಹ । ಸ್ತಾಂತರಾಳದೊಳಿರಲೆಂದು ॥
ಸಂತಸದಿಂದಾದಿರಾಜನ ಕರೆದಿತ್ತ । ಚಿಂತಾಮಣಿಯನಾ ಚಕ್ರಿ ॥ ೩೩ ॥
ವಿವಿಧವಸ್ತುವನಿವು ಕೊಡುವುವು ನಿಮ್ಮಬ್ಬ । ರವಲಂಬವಾಗಿರಲೆಂದು ॥
ಅವನೀಶ ವೃಷಭರಾಜಗೆ ಹಂಸರಾಜಗೆ । ನವನಿಧಿಗಳ ತೋರ್ಕೈದಾ ॥ ೩೪ ॥
ಉಳಿದ ಮಕ್ಕಳಿಗಳಿಯಂದಿರ್ಗೆ ಚಾಮರಂ । ಗಳ ಸೇವೆಯೆಂದು ನೇಮಿಸಿದಾ ॥
ಕೆಳೆಯರಿಗಿಡುವ ನಿವಾಳಿಯ ನೇಮಿಸಿ । ತಳರ್ದನಾ ಚದುರ ಮೇಲ್ಗಡೆಗೆ ॥ ೩೫ ॥

ಗಗನದೊಳಿರ್ದುದು ಸಮವಸರಣ ದೇವ । ನಗಲಿದ ದೇಗುಲದಂತೆ ॥
ಜಗದೀಶನದ್ರಿಯೊಳಿರ್ದನು ಮನೆಯ ದಂ । ದುಗಬಿಟ್ಟ ನಿಸ್ಪೃಹನಂತೆ ॥ ೩೬ ॥
ಪೆರತೆಗೆದಖಿಳಜಿನರ ಗಂಧಕುಟಿಗಳು । ತುರುಗಿರ್ದುವಾಕಾಶದಲ್ಲಿ ॥
ಬೆರಗಾಗಿ ದ್ವಾದಶಗಣವಿದ್ದುದಾ ದೇವ । ರೆರೆಯನ ನೋಡುತದ್ರಿಯೊಳು ॥ ೩೭ ॥
ಸಿದ್ಧಶಿಲೆಯವೊಲು ಶಿಲೆಯಿದ್ದುದದರಲ್ಲಿ । ಬದ್ಧಪಲ್ಯಂಕಯೋಗದೊಳು ॥
ಸಿದ್ಧನಂತಿರ್ದ ದೇವನ ಕಂಡು ನೃಪ ಜಿನ । ಸಿದ್ಧಯೆಂದೊಲೆದನು ಶಿರವಾ ॥ ೩೮ ॥
ಮುಕುಕ ಪುಟ್ಟದು ಜಿನನಿದಿರಿನೊಳದರಿಂದ । ಮುರುಗಿತಿಲ್ಲಾ ಚಕ್ರವರ್ತಿ ॥
ಎರಗಿ ಮಹಾಪೂಜೆಗೆಸಗಿದನದನು ಬಾ । ಯ್ದೆರೆದು ಬಣ್ಣಿಪ ದಕ್ಷನಾರು ॥ ೩೯ ॥
ಒಂದೆರಳ್ದಿನ ಪೂಜೆ ನಡೆವನಿತರೊಳೊತ್ತಿ । ಬಂದರು ಖಗರು ವ್ಯಂತರರು ॥
ವೃಂದಾರಕರಿದ್ದರದ್ರಿಯೊತ್ತಿನ ರಾಜ್ಯ । ದಿಂದ ಕೂಡಿತು ಬಲುಪರಿಸೆ ॥ ೪೦ ॥
ಕಡಲ ಮಾಗಧ ಮೊದಲೆನೆ ಹಿಮವಂತಾಂಕ । ಕಡೆಯೆನೆ ವ್ಯಂತರಾಧಿಪರು ॥
ಕಡುಪಿನ ಖಗರು ಪೂಜಾವಸ್ತುಗಳ ತಂದು । ಹಿಡಿಯುಲಾ ನೃಪನಲ್ಲಿವಟ್ಟಾ ॥ ೪೧ ॥

ನಮಿರಾಜ ವಿನಮಿ ಗಂಗಾಸಿಂಧುದೇವನಾ । ವಿಮಲರಾಜನು ಭಾನುರಾಜಾ ॥
ನಮಿಸಿ ತನ್ನೊಡನೆ ಪೂಜೆಯು ಮಾಡಲೆಳಸೆ ಭೂ । ರಮ ಕೂಡಿಕೊಂಡು ಪೂಜಿಸಿದಾ ॥ ೪೨ ॥

ಶುಚಿವೆತ್ತು ಕೂಡೆ ಕೋಟಾಕೋಟಿರೂಪ ತಾ । ಳ್ದಚಲ ತುಂಬಿರೆ ಚಕ್ರಿ ನಿಂದು ॥
ಖಚರವ್ಯಂತರವಿಸ್ತರಖಿಳವಸ್ತುವ ನೀಡೆ । ರಚಿಸಿದನೇನ ಬಣ್ಣಿಪೆನು ॥ ೪೩ ॥
ಲೆಕ್ಕವಿಲ್ಲದ ಹೊನ್ನ ಗಿಂಡಿಯನೆತ್ತಿ ಸ । ವ್ಯಕ್ಕಲಕಲಮಂತ್ರವೆಸೆಯೆ ॥
ಸೊಕ್ಕಾನೆ ನೀರ ಸೂಸುವವೊಲು ಜಿನನಂಘ್ರಿ । ಗಿಕ್ಕಿದನಂಬುಧಾರೆಗಳಾ ॥ ೪೪ ॥
ಧರೆ ಗಿರಿ ನಭತುಂಬಿ ಪ್ರಜೆ ಜಯಯೆನೆ ಮೂರು । ವರೆಕೋಟಿ ತನ್ನ ವಾದ್ಯಗಳು ॥
ಅರುಹನ ದ್ವಾದಶವರೆಕೋಟಿವಾದ್ಯ ಘೋ । ರ್ಗರೆದುವೇನೆಂಬೆ ಸಂಭ್ರಮವಾ ॥ ೪೫ ॥
ಅಂಬರೇಚರಿಯರು ಗಂಧರ್ವನಾಗನಿ । ತಂಬಿನಿಯರು ನೃತ್ಯವಾಡೆ ॥
ಜಂಬೂದ್ವೀಪಕಚ್ಚರಿಯಾದವರ ಪೂಜಾ । ಡಂಬರ ತೊಡಗಿತೇನೆಂಬೆ ॥ ೪೬ ॥
ಜಲಧಾರೆಮಾದಮೇಲಮಲಗಂಧವ ಹಸ್ತ । ತಳ ತುಂಬಿ ತೆಗೆದು ಸೂಸಿದನು ॥
ಮುಳುಗಿತಾ ಬೆಟ್ಟವಿಂತಿದು ರೂಪ್ಯಗಿರಿಯಲ್ಲ । ಮಲಯಜಗಿರಿಯೆನಲಾಯ್ತು ॥ ೪೭ ॥
ಅಗಣಿತರೂಪಾಂತ ಬಡಕೈಗಳಲ್ಲ ಹ । ಸ್ತಗಳೆರಳ್ತುಂಬಿ ಗಂಧವನು ॥
ಮೊಗೆಮೊಗೆದರ್ಚಿಸೆ ನೆಲಕಿಳಿದುರ್ವಿ ಕ । ವ್ಮಗೆ ತೋರಿತೆತ್ತ ನೋಡಿದರು ॥ ೪೮ ॥
ನೆಲಸಿ ನಿಂದಂತಿರ್ದ ಪ್ರಜೆ ಜಯ ಜಯಯೆನೆ । ಹಲವು ಹಸ್ತಗಳಿಂದ ತೆಗೆದು ॥
ಕಳವಾಕ್ಷತೆಗಳನರ್ಚಿಸಲಾಗ ಮುಳುಗಿ ತಂ । ಡುಲಗಿರಿಯಾದುದಾ ಶಿಖರಿ ॥ ೪೯ ॥
ಸುರಸಿದ್ಧಯಕ್ಷರು ಜಯಜಯಯೆನೆ ಪರಿ । ಪರಿಯ ಪುಷ್ಪವ ತೆಗೆತೆಗೆದು ॥
ಭರತೇಶನರ್ಚನೆಗೈವಾಗ ಪೊಸಪುಷ್ಪ । ಗಿರಿಯಾದುದಾ ರಜತಾದ್ರಿ ॥ ೫೦ ॥
ಕಡುಗಂಪು ಪೆಂಪಿಂಪುಗೂಡಿದ ಕಜ್ಜಾಯ । ಗಡಣವ ರಾಯನರ್ಚಿಸಲು ॥
ಒಡನೆ ಪರ್ವತ ತೋರವಾದುದು ಕೈತಪ್ಪಿ । ಕಡಲೆ ನೀರೊಳಗೆ ಬಿದ್ದಂತೆ ॥ ೫೧ ॥
ಪಂಚಕಜ್ಜಾಯವ ಪರಿಪರಿವಣ್ಣ ಪ । ಳಂಚಲರ್ಚನೆ ಮಾಡಿದಾಗ ॥
ಪಂಚವರ್ಣದ ಮುಗಿಲದ್ರಿಗೆ ಕವಿದಂತ । ದೇಂ ಚೊಕ್ಕನಾದುದೊ ಪೂಜೆ ॥ ೫೨ ॥
ರಾಣಿಯರೆಲ್ಲರು ರಚಿಸಿ ಕಳುಹಿದ ಬಿ । ನ್ನಾಣದಾರತಿಗಳ ನೃಪತಿ ॥
ಕಾಣಪಟ್ಟರುಹಗೆತ್ತಿದನುಬ್ಬಿ ನರಸುರ । ಶ್ರೇಣಿಗಳ್ಜಯ ಜಯಯೆನಲು ॥ ೫೩ ॥
ಸೊಸೆಯರು ರಚಿಸಿದಾರತಿಯಿವು ಪುತ್ರಿಯ । ರೆಸಗಿದಾರತಿಗಳಿವೆಂದು ॥
ರಸಿಕ ತನ್ನವಧಿಯಿಂದರಿದಿಷ್ಟು ನಗುತ ಸಂ । ತಸದಿ ಜಿನೇಂದ್ರಗೆತ್ತಿದನು ॥ ೫೪ ॥
ಎಸೆವ ಪುತ್ರಿಯರು ಮೂವತ್ತೆರಳ್ಸಾಸಿರ । ನಸುಕುಂದೆ ಲಕ್ಷರಾಣಿಯರು ॥
ಸೊಸೆಯರು ಪಲಂಟ್ಟದಾರತಿಗಳ ನಿವಾ । ಳಿಸಿದನೊಂದೆ ಬಾರಿ ನೃಪತಿ ॥ ೫೫ ॥

ಧೂಪವನಿಕ್ಕಿದರಾ ಧೂಮ ಜಿನಕಾಂತಿ । ವ್ಯಾಪಿಸೆ ಕೆಂಪಾಗಿ ನೆಗೆದು ॥
ಪೋಪಾಗ ಮೆರೆದುದು ಸ್ವರ್ಗಕಿಕ್ಕಿದ ಪೊನ್ನ । ಸೋಪಾನವೆಂಬ ರೀತಿಯೊಳು ॥ ೫೬ ॥

ಕ್ಷಿತಿಪನ ಕರತಳದೊಳು ಪುಟ್ಟಿದಪರಂಜಿ । ಲತೆ ಹಬ್ಬುವಂತಿಂದ್ರಪುರಕೆ ॥
ನುತಮುನದನುರಾಗ ನೆಗೆದಂತೆ ಧೂಪದು । ಧ್ಗತಶೋಣಧೂಮ ರಂಜಿಸಿತು ॥ ೫೭ ॥

ಫಲಗಳನರ್ಚನೆಗೈದರಾ ಬೆಟ್ಟವ । ಬಳಸಿ ಬೆಟ್ಟಗಳಾದುವಾಗ ॥
ಉಲಿದುದು ಜಯಯೆಂದು ಪರಿಸೆ ಮೇಲಣಲೋಕ । ತಳಲೋಕಮಾರ್ದನಿಗೊಡಲು ॥ ೫೮ ॥

ತೊಂಗಲು ತೊಂಗಲಾಗಿರೆ ಕೊನೆಕೊನೆಯಾಗಿ । ತುಂಗಫಲಂಗಳ ನೃಪತಿ ॥
ಅಂಗಜವಿಜಯಗರ್ಚಿಸಿದನು ಧರೆಗಗ । ನಾಂಗಣ ತೆರಪೆಯ್ದದೆನಿಸಿ ॥ ೫೯ ॥

ಬೆಟ್ಟ ಹೊಳೆತು ಪರಿಸೆಗೆ ನಿಲ್ಲಲೆಡೆಯಿಲ್ಲ । ದೊಟ್ಟಿತು ಫಲ ರಾಯನಾಗ ॥
ಸಿಟ್ಟಿಸೆ ಗಂಗೆಯು ಮಧ್ಯಕೆ ತೆಗೆತೆಗೆ । ದಿಟ್ಟರಾ ಕ್ಷಣವೆ ವ್ಯಂತರರು ॥ ೬೦ ॥

ಕೂಡೆ ಫಲಾರ್ಚನೆಗೈದನು ಮುನ್ನಿನ । ಗಾಡಿಯಿಂ ವೆಗ್ಗಳವಾಯ್ತು ॥
ನೋಡಿದನೊಡನೆ ವ್ಯಂತರಿಗರಾ ಕ್ಷಣದಲ್ಲಿ । ಝಾಡಿಸಿದರು ಮುನ್ನಿನಂತೆ ॥ ೬೧ ॥

ನೀಡುತಿರ್ದರು ಕೂಡೆ ಫಲಗಳ ಪೂಜೆಯ । ಮಾಡುತಿರ್ದನು ಚಕ್ರಧರನು ॥
ನೋಡುತ ಜಯಜಯಯೆನುತ ಪರಿಸೆ ಕುಣಿ । ದಾಡಿತೇನೆಂಬೆನುತ್ಸವವಾ ॥ ೬೨ ॥

ಅರುವತ್ತುನಾಲ್ಕುಸಾವಿರಕುವರರೊಳಲ್ಲಿ । ಕಿರಿಯರು ದೀಕ್ಷೆಗೊಂಡವರು ॥
ಹೊರತಾಗಿ ಮಿಕ್ಕಿನ ಮಕ್ಕಳು ಭಯಭಕ್ತಿ । ಮೆರೆಯೆ ಚಾಮರವನಿಕ್ಕಿದರು ॥ ೬೩ ॥

ಕುವರರ ಕೂಡೆ ಬತ್ತೀಸಸಾವಿರ ಮಂದಿ । ಹವಣೆನಿಪಳಿಯಂದಿರಾಗ ॥
ಧವಳಚಾಮರಗಳ ಢಾಳಿಸುತಿರ್ದರು । ದಿವಿಜಗಂಗೆಯ ತೆರೆಯಂತೆ ॥ ೬೪ ॥

ಅರುವತ್ತುನಾಲ್ಕುಚಾಮರವ ಬಿಟ್ಟರುಹ ಪಾ । ಸರೆಯೊಳೇಕಾಕಿಯಾಗಿರಲು ॥
ಕಿರಿದು ಕಡಮೆ ಲಕ್ಷಚಾಮರಗಳ ಶೈಲ । ತುರುಗಲಿಕ್ಕಿಸಿದನಾ ಚಕ್ರಿ ॥ ೬೫ ॥

ಶ್ರೀಜಿನಗೊಪ್ಪುವ ಪೂಜೆಯ ರಾಯನ । ಪೂಜಾನಂದವ ನೋಡಿ ॥
ಸೋಜಿಗಬಡುತ ನಿವಾಳಿಯನಲ್ಲಲ್ಲಿ । ಯೋಜಿಸುತಿರ್ದರಾ ಸಖರು ॥ ೬೬ ॥

ಫಲಪೂಜೆಗಳ ಮಾಡಿ ರನ್ನಚಿನ್ನದೊಳಾದ । ಫಲಗಳ ಮಂದರದಂತೆ ॥
ನೆಲೆಗೊಳಿಸಿದನರ್ಘ್ಯಕೋಟಿಯುನೆತ್ತಿದ । ನೊಲಿದೆಲ್ಲ ಜಯಜಯಯೆನಲು ॥ ೬೭ ॥

ಪರಮಗರ್ಘ್ಯವನೆತ್ತಿಯಿರಿಸಲವರು ತುದಿ । ಗಿರಿಸಿದ ಮೂಡೆಗರ್ಪುರವು ॥
ಉರಿವುತಿರ್ದುವು ಮಝು ಕಪ್ಪುರಗಳ ಸಾಲು । ಗಿರಿಯು ಕಾಳ್ಕಿಚ್ಚುಗೊಂಡಂತೆ ॥ ೬೮ ॥

ರತ್ನದ ನಿಡುಗಿಂಡಿಗಳನೆತ್ತಿ ಭವದುಃಖ । ಯತ್ನಾಗ್ನಿ ಕೆಡಲೆಂದು ಜಗಕೆ ॥
ನೂತ್ನಮಂತ್ರವನೋದಿ ಶಾಂತಿಧಾರೆಯ ರಾಜ । ರತ್ನ ಮಾಡಿವನಾದಿಜಿನಗೆ ॥ ೬೯ ॥

ಮಿಸುನಿಯ ಪೊಮ್ಮಡಿಬೆಳ್ಳಿಯ ಪೂವಿಂದ । ಕುಸುಮವೃಷ್ಟಿಯು ರಾಯನೆಸಗೆ ॥
ಒಸೆದಮರರು ಜಯಜಯಯೆಂದು ಕರೆದರಾ । ಗಸದಲ್ಲಿ ಕೂಡೆ ಪೂಮಳೆಯಾ ॥ ೭೦ ॥

ಬೇಗಡೆಗಳೆಯುದ ರತ್ನವೃಷ್ಟಿಯು ರತ್ನ । ರಾಗಗಾ ನೃಪನೆಸಗಿದನು ॥
ಸಾಗರ ತಳ್ಪುಂಕಗುಟ್ಟುವಂತೊಡನನು । ರಾಗಿಸಿ ಪರಿಸೆ ಘೂರ್ಣಿಸಿತು ॥ ೭೧ ॥

ಪ್ವಾದಶಗಣಗೂಡಿ ತನ್ನವರೊಡಗೂಡಿ । ಯೋದುತ ಸ್ತೋತ್ರಮಂತ್ರಗಳಾ ॥
ಆದಿನಾಥನ ಬಲಗೊಂಡನಾ ನೃಪತಿ ಪ್ರ । ಮೋದಕೆ ಸುರರರ್ತಿವಡಲು ॥ ೭೨ ॥

ಜಿನನ ಬೀಳ್ಕೊಂಡು ಯೋಗಿಗಳ ವಿಪ್ರರ ಸರ್ವ । ಜನಪತಿಗಳ ಸರ್ವಪ್ರಜೆಯ ॥
ಅನುರಾಗ ಮಿಗೆ ನೋಡಿ ತಣಿಸಿದನಹುದು ಭೋ । ಜನದಲ್ಲಿ ತಣಿಸಿದನೊಡನೆ ॥ ೭೩ ॥

ನವಗೆ ಪೂಜೆಯು ಚಿಂತೆ ನಿವಗೆ ನಿಮ್ಮಳಿಯನೆ । ಲ್ಲವ ಮಾಳ್ಪನದ ಬಲ್ಲೆನೆಂದು ॥
ಸವಿನುಡಿಯೊಳು ನಮಿರಾಜ ಮುಂತಾದ ಬಾಂ । ಧವರ ಮನ್ನಿಸಿದನಾ ಸುರಸಾ ॥ ೭೪ ॥

ಯುವರಾಜ ಸ್ಮರಪುತ್ರ ಗೃಹಪತಿ ಮಂತ್ರಿಗ । ಳವರವರಿಚ್ಛೆಯನರಿದು ॥
ಎನೆಯಿಕ್ಕುವಪ್ಪರೊಳೆಲ್ಲರ ತಣಿಸಿದ । ರವನ ಭಾಗ್ಯದೊಳುಂಟೆ ಜಾಡ್ಯಾ ॥ ೭೫ ॥

ಮಾನವ ಸುರರು ವ್ಯಂತರರು ದಿವಿಜರ ವಿ । ತಾನಕೆ ವಿನಯವ ನುಡಿದು ॥
ತಾನೇಕಭುಕ್ತವ ಗಂಗೆಯ ತಡಿಯಲ್ಲಿ । ಸೂನುಗಳ್ವೆರಸಿ ಮಾಡಿದನು ॥ ೭೬ ॥

ಹಗಲಿಂತು ಹೋದುದು ಜಿನನಂಗಪ್ರಭೆಯಿಂದ । ಹಗಲಿನಂತಿರ್ದುದು ರಾತ್ರಿ ॥
ನೆಗಳಿದ ಘಳಿಗೆಯ ಸನ್ನೆಯಿಂದಿರುಳೆಂದು । ಬಗೆದುದು ಕೂಡಿದ ಪರಿಸೆ ॥ ೭೭ ॥

ಅವಧಿಬೋಧಾಢ್ಯರೆಲ್ಲರು ಬಲ್ಲರುಳಿದ ಮಾ । ನವರಂದರು ಸನ್ನೆಯಿಂದ ॥
ಶಿವಶೈಲದೊಳು ರಾಯ ನಿಂದನು ತೇರ ಗೌ । ರವನೆದ್ದುದೇನ ಬಣ್ಣಿಪೆನು ॥ ೭೮ ॥

ಕರುಮಾಡದಾಯತದೊಳು ನೆಲೆ ನೆಲೆಯಾಗಿ । ಪಿರಿದುದ್ದ ಕಡುತೋರವಾಗಿ ॥
ಗಿರಿಯೊತ್ತ ಬಳಸಿ ಭೂಮಿಯೊಳೆಂಟುತೇರೆಂಟು । ಗಿರಿಯಂತೆ ನಿಂದಿದ್ದುವಾಗ ॥ ೭೯ ॥

ತೊಳಗುವ ಪಂಚರತ್ನದ ಕಲಶಗಳು ಪ । ಜ್ಜಳಿಸುವ ನವರತ್ನಮಾಲೆ ॥
ಆಳವಟ್ಟ ಹೇಮ ರೂಪ್ಯದ ತೇರ್ಗಳಿದ್ದುವು । ಬೆಳಗಿನ ರಾಶಿಗಳಂತೆ ॥ ೮೦ ॥

ಝಲ್ಲಿ ಪತಾಕೆ ಪಟ್ಟಾವಳಿ ಕನ್ನಡಿ । ಪಲ್ಲವ ಸತ್ತಿಗೆ ಘಂಟೆ ॥
ಬೆಳ್ಳಿ ಚಿನ್ನದ ಪುಷ್ಪಮಾಲೆಯಿಂದೆಸೆದುವು । ಸೊಲ್ಲಿಸೆ ಸುರಭೂಜದಂತೆ ॥ ೮೧ ॥

ತುಂಗಪ್ರತಿಮೆಯಿಂದ ಸುರಗಿರಿಯಂತೆ ರ । ತ್ನಂಗಳಿಂ ರೋಹಣಾದ್ರಿಯೊಲು ॥
ದಾಂಗುಡಿವೆಳಗಿಂದ ತೇರೆಸೆದುವು ಜ್ಯೋತಿ । ರಂಗದ ಪಕ್ಷಿಗಳಂತೆ ॥ ೮೨ ॥

ಮೇರುವಿಗೆಂಟದ್ರಿ ಕೆಲದಲ್ಲಿ ಗೋಡೆಯಾ । ಕಾರದೊಳಿರಲವ ಜರೆದು ॥
ತಾರಾದ್ರಿಗೆಂಟದ್ರಿ ನೇರದೊಳಿದ್ದಂತೆ । ತೇರಿದ್ದುವೆಂಟುದಿಕ್ಕಿನೊಳು ॥ ೮೩ ॥

ಅಗಣಿತವಾದ್ಯ ಘೂರ್ಣಿಸೆ ಜಯಜಯಯೆಂದು । ಜಗದಗಲದ ಪ್ರಜೆಯುಲಿಯೆ ॥
ಗಗನವ ತುಡುಕುತ ಗಲಗಲನೆಂದು ದಿ । ಕ್ಕಿಗೆ ಹರಿದುವು ತೇರ್ಗಳೆಂಟು ॥ ೮೪ ॥

ಇಂದ್ರಾಗ್ನಿ ಕಾಲ ನೈರುತ್ಯ ವರುಣವಾಯು । ಚಂದ್ರಶೇಖರಸಖೇಶಾನ ॥
ರುಂದ್ರದಿಕ್ಕಿಗೆ ತೇರು ಹರಿದುವು ಭರತರಾ । ಜೇಂದ್ರನ ಬೆರಳ ಸನ್ನೆಯೊಳು ॥ ೮೫ ॥

ಎಂಟುಕರ್ಮವ ತುಳಿದೆಂಟುಗುಣವನಯ್ಯ । ನಾಂಟಿ ಕೈವಿಡಿವ ಬಲ್ಮೆಯನು ॥
ಎಂಟುದಿಕ್ಕಿಗೆ ಪೇಳಲಟ್ಟುವಂತಾ ರಾಯ । ನೆಂಟುತೇರ್ಗಳ ತೆರಳಿಸಿದಾ ॥ ೮೬ ॥

ಸುರಿವ ಪೂಮಳೆ ಸೂಸಲುರಿಬಾಣ ಗಗನದೊ । ಳುರವಣಿಸುವ ಪಾತ್ರದಿಂದ ॥
ಗರಿಗರಿ ಗೀಕು ಗಿರ್ರೆಂಬ ಗಾಲಿಗಳಿಂದ । ಸರದೋರಿ ಹರಿದುವಾ ತೇರು ॥ ೮೭ ॥

ವ್ಯಂತರಖಗರು ತೇರ್ಗಳ ರಚಿಸಿದ್ದು ಮೇ । ಘಾಂತದಿ ತೆರಳಿಸುವುದಕೆ ॥
ಚಿಂತಿಸುತಿರೆ ರಾಯ ನಲಿದವರೆದೆಗೆ ನಿ । ಶ್ಚಿಂತದೋರಿದನೇನನೆಂಬೆ ॥ ೮೮ ॥

ನನ್ನ ತೇರಿಳಿಯಲ್ಲಿ ಹರಿದು ನಿಮ್ಮಾ ತೇರ್ಗ । ಳಿನ್ನು ದ್ವದೊಳು ತೆರಳಿದರೆ ॥
ಬನ್ನವೆ ಜಿನಪೂಜೆ ಹೆಚ್ಚಿದಪ್ಪುತ್ತವು । ನನ್ನಾಣೆ ನಡೆಸಿರೈಯೆಂದಾ ॥ ೮೯ ॥

ಆರು ನೀವೆನ್ನವರಲ್ಲವೆ ಷಟ್ಖಂಡ । ಧಾರಿಣಿಯಿಂದಾಚೆಯವರೆ ॥
ನೇರದಿ ನಡೆಸಿರೈ ನನ್ನೇಳ್ಗೆ ನಿಮ್ಮದೆಂ । ದಾ ರಾಯ ನುಡಿಯಲುಬ್ಬಿದರು ॥ ೯೦ ॥

ದೇವದುಂದುಭಿ ದೇವನೃತ್ಯ ರಂಜಿಸೆ ಸಿಂಧು । ದೇವನ ರಥ ಹೋಯ್ತು ಮುಂದೆ ॥
ಆ ವಿಭವದಿ ಹಿಂದೆ ಹೋದುದು ಗಂಗಾ । ದೇವನ ತೇರು ಬಾನದೊಳು ॥ ೯೧ ॥

ರಾಜಿತಖೇಚರೀನೃತ್ಯವಾದ್ಯದಿ ನಮಿ । ರಾಜನ ರಥ ಮುಂದೆ ಹೋಯ್ತು ॥
ಆ ಜೋಕೆಯೊಳೆ ಹಿಂದೆ ವಿನಮಿರಾಜನ ತೇರು । ಭೂಜನ ಪೊಗಳೆ ಸಾಗಿದುದು ॥ ೯೨ ॥

ಗಣಬದ್ಧವೃಂದದ ಮಣಿರಥ ಗಗನಾಂ । ಗಣದಲ್ಲಿ ಹರಿದುದು ಮತ್ತೆ ॥
ಕುಣಿವ ಪಾತ್ರದಿ ಹೊಯ್ವ ವಾದ್ಯದಿ ವ್ಯಂತರಾ । ಗ್ರಣಿಯ ಮಹಾರಥ ಹೋಯ್ತು ॥ ೯೩ ॥

ವರತನುವಿನ ರಥ ಹೋಯ್ತು ಪ್ರಭಾಸೇಂದ್ರ । ತೆರಳಿಸಿದನು ತನ್ನ ತೇರಾ ॥
ಉರುವಿಜಯಾರ್ಧದೇವನ ತೇರು ವಿಜಯಾರ್ಧ । ಗಿರಿಯಂತೆ ಹರಿದುದುಬ್ಬಿನೊಳು ॥ ೯೪ ॥

ಹಿಮವಂತದೇವನ ರಥ ನೋಡೆ ಪ್ರತ್ಯಕ್ಷ । ಹಿಮಶೈಲದಂತೆ ಸಾಗಿದುದು ॥
ಗಮಕದಿ ಕೃತಮಾಲನಾಟ್ಯಮಾಲರ ತೇರು । ಗಮಿಸಿದುವಿಳೆ ಪುರೆಯಿಡಲು ॥ ೯೫ ॥

ಈರಾರುರಥ ಹರಿಯಲು ರಾಯನಾ ಕರ್ತ । ರೀರಾರುಮುಂದಿಯ ಕರೆದು ॥
ತೋರದೊಳ್ಗಳೊಳಪ್ಪಿ ಮನ್ನಣೆಯಿತ್ತು ಮ । ಹಾರಮ್ಯವಾದುದೈಯೆಂದಾ ॥ ೯೬ ॥

ಒಡೆಯನುತ್ತಮನಾದರೋಲೈಪರೆಲ್ಲರು । ಪಡೆವರೈಯುತ್ತಮಸುಖವಾ ॥
ಕಡುಸುಖವೆತ್ತೆವೆಂದಾ ಮಾಗಧಾದಿಗ । ಳಡಿಗೆರಗಿದರೊಲ್ದು ನೃಪನ ॥ ೯೭ ॥

ಬಲುಗಜ ಮುಂದೆಯ್ದಲದರ ಬೆಂಬಳಿವಿಡಿ । ದುಳಿದಾನೆ ಪೋಪಂತೆ ನಾವು ॥
ಗಳಿಸುತಿಪ್ಪೆವು ದೇವರೊಡನಾತ್ಮಸುಖವನೆಂ । ದೆಳಸಿ ನುಡಿದರು ಮೈದುನರು ॥ ೯೮ ॥

ಹೊಸಹೊಸ ಪರಿಯ ತೇರೊಂದೊಂದು ದಿನಕೆ ಮ । ತ್ತಸಮನೂತನಪೂಜೆನೃತ್ಯಾ ॥
ರಸರಸಾಯನದೂಟ ಪರಿಸೆಗೆ ಸಂದು ರಾ । ಜಿಸಿತಿಂತು ಪದಿನಾಲ್ಕುದಿವಸಾ ॥ ೯೯ ॥

ಕಡೆಯ ದಿನದೊಳು ಮೂರನೆಯ ಜಾವದೊಳೆಲ್ಲ । ಕಡೆಯಿಂದ ಕೂಡಿದ ಪ್ರಜೆಗೆ ॥
ನಡೆಗಂಡು ಸಂಘಪೂಜೆಯ ಮಾಡಲಾ ಚಕ್ರಿ । ತೊಡಗಿದನೇನ ಬಣ್ಣಿಪೆನು ॥ ೧೦೦ ॥

ಗಣಧರರೆಂಭತ್ತುನಾಲ್ವರ್ಗೆ ಭಕ್ತಿಯೊ । ಳ್ಮಣಿದು ಮತ್ತವರನುಮತದಿ ॥
ಗಣನೆಯಿಲ್ಲದ ಭವ್ಯಗಣಕೆ ಚಕ್ರೇಶ ಮ । ನ್ನಣೆಗೈದನುಚಿತವೃತ್ತಿಯೊಳು ॥ ೧೦೧ ॥

ಜಪಸರ ಪುಸ್ತಕ ಠವಣೆಕೋಲಾದಿಯಾ । ದುಪಕರಣದೊಳು ವಸ್ತ್ರದೊಳು ॥
ತಪಸಿಗಳಜ್ಜಿಗಳತಿವ್ರತಿಕರುಗಳಿ । ಗುಪಚರಿಸಿದನೋಜೆಯಿಂದ ॥ ೧೦೨ ॥

ಹೇಮವ ರತ್ನವ ದಿವ್ಯವಸ್ತ್ರವ ವಿಪ್ರ । ಸ್ತೋಮಕೆ ತಣಿವಂತೆ ಕೊಟ್ಟು ॥
ಕ್ಷೌಮವಸ್ತ್ರಾಭರಣದಿ ಕೋಟಿವಿಪ್ರಮ । ಹಾಮಿಥುನಗಳ ಮನ್ನಿಸಿದಾ ॥ ೧೦೩ ॥

ದೊಡ್ಡದಾನಂಬೆತ್ತ ವಿಪ್ರರು ನೃಪ ಪ್ರಾಯ । ದೊಡ್ಡು ಜಾರದೆ ಬಾಳಲೆಂದು ॥
ಗಡ್ಡ ಕುಣಿಯೆ ಹಿಗ್ಗಿ ನಗುತ ಕೈಯೆತ್ತಿ ತಾ । ವೆಡ್ಡೆಡ್ಡನುರೆ ಹರಸಿದರು ॥ ೧೦೪ ॥

ಪರದಾರಸೋದರನೆಮ್ಮವನೀಶ ಪು । ತ್ರರು ಮಿತ್ರರರಸಿಯರ್ವೆರಸಿ ॥
ಸ್ಥಿರ ಬಾಳಲೆಂದು ಮುತ್ತೈದೆ ಬ್ರಾಹ್ಮಣಿತಿಯ । ರ್ಪರಸಿದರಾನಂದಬಟ್ಟು ॥ ೧೦೫ ॥

ತೇರ್ವೈಸಿ ಮಾಗಧಹಿಮವಂತರೊಳಗಾದ । ಭೂರಿವ್ಯಂತರರಿಗೆ ಕೂಡೆ ॥
ಚಾರುರತ್ನಾಂಬರಗಳನಿತ್ತನೊಲ್ದು ಚಿಂ । ತಾರತ್ನವುಳ್ಳವಗರಿದೆ ॥ ೧೦೬ ॥

ಮೈದುನರರುವರುಳಿಯೆ ಖಗಪತಿಗಳ್ಗೆ । ಮೇದಿನೀಪತಿಗಳ್ಗೆ ಮತ್ತೆ ॥
ಆದರದಿಂದ ವಸ್ತ್ರಾಭರಣವನಿತ್ತ । ನಾದೀಶನಂತ್ಯಪೂಜೆಯೊಳು ॥ ೧೦೭ ॥

ಅರಸುಮಕ್ಕಳು ಪುತ್ರರಳಿಯಂದಿರುಳಿಯಲು । ಪರಿವಾರಕುಚಿತವನಿತ್ತು ॥
ಪರಿಸೆಯ ತಿದ್ದಿರೈಯೆಂದು ಕುಮಾರರ್ಗೆ । ಭರತೇಶ ನೇಮವನಿತ್ತಾ ॥ ೧೦೮ ॥

ದಾನ ಪೂಜೆಯ ತನ್ನ ಕೈಮುಟ್ಟಿ ಮಾಡದೆ । ಮಾನಿಸರ್ಗೊಪ್ಪಿಸೆ ಸಲ್ಲ ॥
ನಾನಾಗಿ ನೀವಲ್ತೆ ತಿದ್ದಿರೈಯೆನೆ ಪುತ್ರ । ರಾ ನಿಯೋಗಕೆ ತೊಡಗಿದರು ॥ ೧೦೯ ॥

ಸೂನುಗಳೆಲ್ಲರು ಗಗನದೊಳಲ್ಪವಿ । ಮಾನವಡೆದು ಸುತ್ತ ಪರಿದು ॥
ಆ ನೆಲದಗಲದ ಪರಿಸೆಯ ತಿದ್ದಿದ । ರೇನೆಂಬೆನೊಂದು ಸಂಭ್ರಮವಾ ॥ ೧೧೦ ॥

ಕೊಡುವ ಕೈಮೇಲು ಕೊಂಬುವನ ಕೈಕೆಳಗೆಂಬ । ನುಡಿಯು ರೂಪಿಂದ ತೋರ್ಪಂತೆ ॥
ಪೊಡವಿಯೊಳ್ನಿಂದು ಕೈಯಾಂತರ್ಗೆ ಗಗನದೊ । ಳೆಡೆಯಾಡಿ ಕೊಡುತಿರ್ದರವರು॥ ೧೧೧ ॥

ಕಡಲಲ್ಲಿ ಹಡಗುಗಳ್ಪರಿವಂತೆ ಜಿನಕಾಂತಿ । ಮಡುಗಟ್ಟಿದಾಕಾಶದಲ್ಲಿ ॥
ಒಡಹಾಯ್ದು ಹಲವು ವಿಮಾನಗಳೆಡೆಯಾಡೆ । ಕೊಡುತಿರ್ದರುಚಿತವಸ್ತುಗಳಾ ॥ ೧೧೨ ॥
ಪಳಿ ಪಟ್ಟೆ ಪುಲ್ಲಿಚೀನಾಂಬರ ದಸರಿ ಗ । ಬ್ಬುಳಗಂದಿ ಮೇಘವಣ್ಣಿಗೆಯಾ ॥
ತಲೆಯ ಮೇಲೆಲ್ಲರ್ಗೆ ಕರೆದರು ವಸ್ತ್ರದ । ಮಳೆ ತಾನೆ ಕರೆದುದೆಂಬಂತೆ ॥ ೧೧೩ ॥
ಓವದಶ್ವಾವಳಿವಸ್ತ್ರವ ಕೂಡೆ ಗ । ಜಾವಳಿಗಳ ನಾರಾವಳಿಯಾ ॥
ಮೂವರು ರಾಯರ ಸಿರಿಯ ವೆಚ್ಚವ ಮಾಳ್ಪ । ಠೀವಿಯೊಳವರು ಚೆಲ್ಲಿದರು ॥ ೧೧೪ ॥
ಠೀವಿ ಹಂಸಾವಳಿಗಳು ಲತಾವಳಿ ಮಕ । ರಾವಳಿ ಶುಕಪಿಕಾವಳಿಯಾ ॥
ಕಾವನ ಸಿರಿಯ ಜಿನೇಂದ್ರ ಸೂರೆಯ ಬಿಟ್ಟ । ಭಾವದೊಳೊಡನೆ ಸೂಸಿದರು ॥ ೧೧೫ ॥
ಕಡುಕ ನೇವಳ ಲುಳಿ ಬಳಿ ಮೊದಲಾದಚ್ಚ । ದೊಡಿಗೆಯನಾ ಪ್ರಜೆ ತಣಿಯೆ ॥
ನಡೆದಾಡಿ ಕಲ್ಪವೃಕ್ಷಗಳೆ ಮೇಲಿಂದಿಳಿ । ವಿಡಿವಂತೆ ಸುರಿದರಾ ನೃಪರು ॥ ೧೧೬ ॥
ಆದಿರಾಜನ ಕೈಯ ವರಚಿಂತಾರತ್ನ ಬೇ । ಕಾದ ವಸ್ತುವ ಕೊಡುತಿಹುದು ॥
ಆ ದೀರ್ಘಸಂಘವ ತಿದ್ದಿದರವರು ವಿ । ನೋದವನಾಡಿದಂದದೊಳು ॥ ೧೧೭ ॥
ಅವನೀಶ ಮಕ್ಕಳಿಬ್ಬರ ವಶಮಾಡಿರ್ದ । ನವನಿಧಿಗಳು ಬೇಡಿದುದನು ॥
ತವಕದೊಳೀಯಲಾ ಪರಿಸೆಯ ತಿದ್ದಿದ । ರವರೊಂದು ನಿಮಿಷಮಾತ್ರದೊಳು ॥ ೧೧೮ ॥
ವಿವಿಧಭೂಷಣವ ಪಿಂಗಲನಿಧಿ ಕೊಡುವುದು । ಜವಳಿಕೊಡುವುದು ಪದ್ಮನಿಧಿ ॥
ಕುವರರು ತಿದ್ದಿದರೊಬ್ಬ ಗೃಹಸ್ಥ ಬಾಂ । ಧವಗೊಬ್ಬಗುಚಿತವೀವಂತೆ ॥ ೧೧೯ ॥
ಹೊನ್ನ ರಾಶಿಯ ಶಂಖನಿಧಿ ಕೊಡುವುದು ಹೊಸ । ರನ್ನಕೊಡುವುದು ರತ್ನನಿಧಿ ॥
ಭಿನ್ನರಸಗಳ ಧಾನ್ಯಗಳ ಪಾಂಡುಕನಿಧಿ । ಬಿನ್ನಣಿಸುವುದವಗರಿನೆ ॥ ೧೨೦ ॥
ನೀವಾವು ಪೂಜಕರದರಿಂದ ಮೊದಲೆ ಸಂ । ಭಾವನೆಯಾಯ್ತಿಲ್ಲ ನಿಮಗೆ ॥
ಪೀವರಸಂಘ ತಿದ್ದಿದುದರ್ತಿಮಾಳ್ಪೆವೆಂ । ದಾ ವಿಭು ಮೈದುನಗೊರೆದಾ ॥ ೧೨೧ ॥
ಪಿಡಿ ಸಿಂಧುದೇವ ಗಂಗಾದೇವಯೆಂದು ಪೆಂ । ಪಿಡಿದ ವಸ್ತುಗಳ ನೀಡಿದನು ॥
ಪಿಡಿಯರವರು ನೀವು ಕೊಡಿ ನಾನು ಕೊಂಬೆನೆಂ । ದೊಡನಿತ್ತು ತಕ್ಕೈಸಿಕೊಂಡಾ ॥ ೧೨೨ ॥
ಕೊಟ್ಟರವರು ಕೂಡೆ ವಸ್ತುವ ತಾನೊಡಂ । ಬಟ್ಟು ಕೈಕೊಂಡನಾ ಚಕ್ರಿ ॥
ನಿಟ್ಟಿಸಿ ನಮಿರಾಜ ಪಿಡಿಯೆಂದರವ ವಸ್ತು । ಘಟ್ಟಿಯ ಮುಂಚೆ ನೀಡಿದನು ॥ ೧೨೩ ॥
ಪಿಡಿ ಮೊದಲ್ನೀನೆಂಬ ನಿಮಗೆ ಮುಂಚಿರಲೆಂಬ । ಹಿಡಿಯುದಿಬ್ಬರು ನಸು ಹೋರಿ ॥
ಒಡನೊಬ್ಬರೊಬ್ಬರ್ಗೆ ಕೊಟ್ಟು ಕೊಂಡಪ್ಪಿದ । ರ್ನಡೆ ನೋಡಿ ಸರ್ವರರ್ತಿಸಲು ॥ ೧೨೪ ॥
ವಿನಮಿರಾಜನ ಭಾನುರಾಜನ ವಿಮಲರಾ । ಜನನಪ್ಪಿಕೊಂಡು ಕೊಟ್ಟವರ್ಗೆ ॥
ಬಿನದವ ಮಾಡಿ ಮನ್ನಿಸಿದನಾ ಸುರಸ ದೇ । ವನ ಮಹಾಸಭೆ ನೋಡಿ ನಲಿಯೆ ॥ ೧೨೫ ॥

ಭಾಗಿನೇಯರುರು ಸುತರರಸುಮಕ್ಕಳು ಬುಧ್ಧಿ । ಸಾಗರ ಮಿತ್ರರ ತಣಿಪಿ ॥
ಆ ಗೃಹಪತಿ ಮಯ ದಳದ ಮಾಕಾಳ ಮುಂ । ತಾಗಿ ಮನ್ನಿಸಿದನೆಲ್ಲರನು ॥ ೧೨೬ ॥
ದಾರಿದ್ರ್ಯ ಜಗದೊಳಿಲ್ಲೆಂಬಂತೆ ಹೋಯ್ತು ಮ । ತ್ತಾ ರಾತ್ರಿ ಹರಿದುವು ತೇರು ॥
ಭೂರಾಮನೀ ಜನ್ಮಕಿನ್ನು ಪೂಜಿಸ ವ್ಯವ । ಹಾರಕುದ್ಯಾಪನೆಯಾಯ್ತು ॥ ೧೨೭ ॥
ಹದಿನಾಲ್ಕುದಿನ ಹಗಲಿರುಳು ನಾನಾವಾದ್ಯ । ಸದೆದುರ್ವಿ ಸಲೆ ಬೆಡಗಾಯ್ತು ॥
ಉದಧಿಯಂದದಿ ಗಂಗೆ ಸ್ಥಳದೊಳುಕ್ಕಂದವಾ । ದುದು ಮೂಡಣಬ್ಧಿ ಮುಟ್ಟಿದುದು ॥ ೧೨೮ ॥
ಒಂದೆರಳ್ದಿನವಲ್ಲ ಪದಿನಾಲ್ಕುದಿನ ಪೂಜೆ । ಸಂದ ವಸ್ತುವ ವಿಾನು ಮೊಸಳೆ ॥
ತಿಂದು ತೀರದೆ ಕಡಲೊಳು ತೇಲುತಿದ್ದುವಿ । ನ್ನೆಂದಿಗೆ ತೀರ್ವುದೆಂಬಂತೆ ॥ ೧೨೯ ॥
ಗಂಧಪನ್ನೀರುಪುಷ್ಪಗಳಿಂದ ಭೂಮಿ ಸು । ಗಂಧವಾಯ್ತದ್ರಿ ಕಂಪಾಯ್ತು ॥
ಗಂಧವಾಹಕನೆಂದು ಗಾಳಿಗೆ ಪೆಸರಂದು । ಬಂಧುರವಾಯ್ತಲ್ಲಿ ಸುಳಿದು ॥ ೧೩೦ ॥

ಸ್ವರ್ಗಪಥವ ಬಹುಪ್ರಜೆಗಳಿಸಿತು ಕೂಡೆ । ತಾರ್ಗೊಂಡು ನೃಪನ ಕೀರ್ತಿಸಿತು ॥
ತೇರ್ಗಳು ಹರಿದ ಮೇಲಾ ರಾತ್ರಿ ದೇವೇಂದ್ರ । ಸ್ವರ್ಗದಿಂದಿಳಿದನೇನೆಂಬೆ ॥ ೧೩೧ ॥
ಸಾರಿ ನಿರ್ಜರರ ಪುಷ್ಪಕ ಬರೆ ಸುರವಾದ್ಯ । ಭೋರಿಡೆ ನಲ್ಲಳುವೆರಸಿ ॥
ತಾರಾದ್ರಿಯಂದದ ಪೇರಾನೆಯೇರಿ ವೃ । ತ್ರಾರಿ ಬಂದನು ರೂಪ್ಯಗಿರಿಗೆ ॥ ೧೩೨ ॥
ಶುಂಭಿತಾನರ್ಘಭೂಷಣ ರತ್ನಮುಕುಟಾಂಶು । ಜೃಂಭಿಸಿ ದಶದಿಕ್ಕು ತುಂಬೆ ॥
ರಂಭೆಮೇನಕೆಯರ ಪಾತ್ರವ ನೋಡುತ । ಜಂಭಾರಿ ಬಂದನುಬ್ಬಿನೊಳು ॥ ೧೩೩ ॥
ಬಣ್ಣಹಾರದ ಪ್ರಾಯಜಾರದ ವೈ ಬಿಡು । ಗಣ್ಣಗಳಿಸೆಯೆ ನೋಟಕರ ॥
ಕಣ್ಣ ಕೈಸೆರೆವಿಡಿವುತ ಬಂದರಾ ಸಗ್ಗ । ವೆಣ್ಣುಗಳವನನೋಲೈಸಿ ॥ ೧೩೪ ॥
ಪಾಡುತಾಡುತ ಸರ್ವರೆಯ್ತರೆ ಚಕ್ರೇಶ । ಮಾಡಿದರ್ಚನೆಯ ಚಿಹ್ನಗಳಾ ॥
ನೋಡುತ ವಿಸ್ಮಯಬಡುತ ಮಸ್ತಕವನ । ಲ್ಲಾಡುತ ಬಂದನಾ ಶಕ್ರಾ ॥ ೧೩೫ ॥
ಮೂಡಣಂಬುಧಿ ತುಂಬಿದಖಿಳವಸುವ ಗಿರಿ । ಮೂಡಿದಂತಿರ್ದ ತೇರುಗಳಾ ॥
ಕೂಡಿರ್ದ ಧರೆಯಗಲದ ಪರಿಸೆಯ ನೋಡಿ । ನೋಡಿ ಹಿಗ್ಗುತ ಬಂದನಿಂದ್ರಾ ॥ ೧೩೬ ॥
ನೆಲ ಗಿರಿಯೆಲ್ಲವು ಕಂಪಾಗೆ ಗಗನಕು । ಚ್ಚಳಿಪ ಸುಗಂಧಕರ್ತಿಸುತ ॥
ನಳನಳನಿಳಿತಂದು ಗಿರಿಯ ಸಾರ್ದಾನೆಯಿಂ । ದಿಳಿದನಂಗನೆಗೂಡಿ ವಜ್ರಿ ॥ ೧೩೭ ॥
ದೇವಗೆ ಮುನಿಗಳ್ಗೆ ಸತಿಗೂಡಿ ಪೊಡಮಟ್ಟು । ಭಾವೆಯು ದೊರಕೆ ಸಾರ್ಚೆ ॥
ದೇವೇಂದ್ರ ಬಂದು ಪೂಜಾವಿಭವಕೆ ಮೆಚ್ಚಿ । ದೇವನಾತ್ಮಜನನಪ್ಪಿದನು ॥ ೧೩೮ ॥
ಪಡೆದನೊ ದೇವರದೇವ ರೋಹಣಶೈಲ । ಪಡೆದಂತನರ್ಘರತ್ನವನು ॥
ಪೊಡವಿ ಮೂರನು ಪುರೆಯಿಡಿಸಿದ ಮಗನನೆಂ । ದೊಡನೆ ಬೋಳೈಸಿದನುಬ್ಬಿ ॥ ೧೩೯ ॥

ಶ್ರೀಶಿಲೆಯೊಳು ದೇವನಾತ್ಮಯೋಗದೊಳಿರ್ದ । ನಾ ಶ್ರೈಲಗಗನೋರ್ವಿತುಂಬಿ ॥
ಕೌಶಲ ಮಿಗೆ ಸರ್ವರಿರ್ದರೆಂಬೆಡೆಗೆ ತೀ । ರ್ಥೇಶಪೂಜಾಸಂಧಿ ಸೊಗಸು ॥ ೧೮೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜತೇಶ್ವರನ ಕಾಣುವರು ॥ ೧೮೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯು ಕಾಣ್ಬರರ್ತಿಯೊಳು ॥ ೧೮೨ ॥

ವ್ಯವಹಾರಧರ್ಮಕುದ್ಯಾಪನೆಗೈದೊತ್ತಿ । ಸುವಿಶುದ್ಧನಿಶ್ಚಯವಡೆದು ॥
ಅವಿಚಳನಾಗಿ ನನ್ನೆದೆಯೊಳಿರವ್ಮೃತವಮಾ । ಧವನೆ ಚಿದಂಬರಪುರುಷಾ ॥ ೧೮೩ ॥

ತೀರ್ಥೇಶಪೂಜಾಸಂಧಿ ಸಂಪೂರ್ಣಂ

## ಜಿನಮುಕ್ತಿಗಮನಸಂಧಿ

---

ಅಷ್ಟಕರ್ಮಾರಣ್ಯದಾವಾಗ್ನಿ ವಿಮಲಗು । ಣಾಷ್ಟಕರೂಪಾದ ಸೊಬಗಾ ॥
ಶಿಷ್ಟರಾರಾಧ್ಯ ಸನ್ಮತಿದೋರು ನಿತ್ಯಸಂ । ತುಷ್ಟ ನಿರಂಜನಸಿದ್ಧಾ ॥ ೧ ॥

ಪರಮಪೂಜೋತ್ಸವದೊಳು ರಾತ್ರಿ ಹೋಯ್ತು ಮ । ತ್ತಿರದರುಣೋದಯವಾಯ್ತು ॥
ಪುರುಪರಮೇಶ್ವರ ಜಯಜಯಯೆಂದೆಲ್ಲ । ಪರಿಸೆ ವಂದನೆಗೆಯ್ದುದೊಸೆದು ॥ ೨ ॥
ಸೂರ್ಯ ಮೂಡಿದನು ಮೂಡಿದರೇನು ಕೋಟೀಂದು । ಸೂರ್ಯಪ್ರಕಾಶನ ಮುಂದೆ ॥
ಸೂರ್ಯನಿದಿರ ಸೊಡರಂತಿರ್ದ ಕನಕಸೌಂ । ದರ್ಯದ ಹರಿವಾಣದಂತೆ ॥ ೩ ॥

ಘಾತಿಚತುಷ್ಟಯ ಕೆಟ್ಟು ಮುನ್ನವೆ ಪರಂ । ಜ್ಯೋತಿಯಾಗಿರ್ದಾದಿಜಿನನು ॥
ಘಾತಿನಿರ್ಘಾತಿಚತುಷ್ಟಯಗಳನಾಗ । ಘಾತಿಸಲಭಿಮುಖನಾದಾ ॥ ೪ ॥
ಅರುವತ್ತುಮೂರುಕರ್ಮಗಳಂದು ಘಾತಿಯೊ । ಳ್ಬರಿದಾಗಿ ಪೋದುವಿನ್ನಿಂದು ॥
ತುರುಗಿದೆಂಭತ್ತೈದ ನಿರ್ಘಾತಿನಾಲ್ಕರೊ । ಳರೆಯಟ್ಟಲೆಂದನುವಾದಾ ॥ ೫ ॥
ಒಡ್ಡಿದೆಂಭತ್ತೈದುಪ್ರಕೃತಿಗಳಿನ್ನೆರ । ಡೊಡ್ಡಾಗಿ ನಿಲ್ವವಂತವನು ॥
ಸಡ್ಡುಗಂಡುದುರಿಸಿ ಬಿಡುವನಿನ್ನವರೆರ । ಡೊಡ್ಡಿನ ಲೆಕ್ಕವೆಂತೆನಲು ॥ ೬ ॥
ರಸ ವರ್ಣ ಬಂಧನ ದೇಹ ಸಂಘಾತವೆಂ । ದಸಮವಾದೈದಕ್ಕೈದೈದು ॥
ಪಸರಿಪ ಪ್ರಕೃತಿಯುಂಟವನೊಟ್ಟುಗೂಡಿ ಲೆ । ಕ್ಕಿಸಿದರಿಪ್ಪತ್ತೈದುಪ್ರಕೃತಿ ॥ ೭ ॥
ಆಕಾರಕಾರು ಸಂಹನನಕಾರಾಯ ಪ್ರ । ತ್ಯೇಕನಿರ್ಮಾಣನಿಸ್ವಾಸ ॥
ಆಕಾಶ ಗತಿ ಗಂಧ ಸ್ವರ ಸ್ಥಿರ ಶುಭವೈದ । ರೇಕೈಕಕೆರಡಾಗೆ ಪತ್ತು ॥ ೮ ॥
ಸುರಗತಿ ತತ್ಪೂರ್ವಿ ತ್ರಿವಿಧದಂಗೋಪಾಂಗ । ಸ್ಪರುಶನವೆಂಟನಾ ದೇಹ ॥
ಪರಘಾತ ದುಷ್ಕುಲ ಶ್ವಾಸೋಪಘಾತ ನಿ । ರ್ಗುರುಲಘು ದುರ್ಭಗಪೂರ್ಣ ॥ ೯ ॥
ಮುಸಗಿದೆಪ್ಪತ್ತೆರಡೊಂದು ಪೌಜಾದಿಯ । ತ್ರಸಪೂರ್ಣ ಬಾದರ ಸುಬಗಾ ॥
ಜಸ ಮನುಜಾಯುಷ್ಯ ನರಗತಿ ತತ್ಪೂರ್ವಿ । ಮಿಸುಪ ಪಂಚೇಂದ್ರಿಯಜಾತಿ ॥ ೧೦ ॥
ಭುವನೇಜ ಕುಲ ಜಾತಿ ತೀರ್ಥೇಶನಾಮವೆಂ । ಬವು ಪದಿಮೂರೊಂದು ಪೌಜು ॥
ದ್ವಿವಿಧಕರ್ಮದ ಪೌಜ ಸವರುವೆನೆಂದಾದಿ । ಶಿವನನುವಾದನೇನೆಂಬೆ ॥ ೧೧ ॥
ಕೊಂಕದೆ ಮಿಸುಕದೆ ನೇರ ನಿಶ್ಚಲದಿ ಪ । ಲ್ಯಂಕಮುದ್ರೆಯೊಳಿರ್ದದಂಗಾ ॥
ತೇಂಕದುಸುರು ಮುಚ್ಚಿದಧರ ಮುಚ್ಚಿದ ಕಂಗ । ಳಂಕಿತವಾಯ್ತು ಯೋಗಾಂಗಾ ॥ ೧೨ ॥
ಸಾರಾತ್ಮವಸ್ತುವೆಂದೆನ್ನದೀ ದಿವ್ಯಶ । ರೀರ ಮುಂತಾಗಿನ್ನು ತೋರ್ಪ ॥
ಭೂರಿವಸ್ತುಗಳನ್ಯವೆಂಬುದು ಮೊದಲೆ ಕ । ರ್ಮಾರಾತಿಗುಂಟು ಭಾವದೊಳು ॥ ೧೩ ॥

ಜಗದಗ್ರವೇರಿರ್ದ ಸಿದ್ಧರು ಪರರಿನ್ನು । ಜಗದ ಜಂಜಡದ ಮಾತೇನು ॥
ಜಗುಳಿಸಿ ಮೂರುಶರೀರವ ಮುಕ್ತಿಗೆ । ನೆಗೆವೆನೆಂದುದ್ಯುಕ್ತನಾದಾ ॥ ೧೪ ॥
ಪಳುಕಿನ ಕೊಡದಲ್ಲಿ ತುಂಬಿದ ಪಾಲ ನಿ । ರ್ಮಲತೆಯ ನಗುತ ದೇಹದೊಳು ॥
ಜಳಜಳಿಸುವ ವಿಮಲಾತ್ಮನೊಳಗೆ ಮೂಡಿ । ಮುಳುಗಾಡುತಿರ್ದನಾ ಸ್ವಾಮಿ ॥ ೧೫ ॥
ಕಡುತೆರಪಿನ ಕ್ಷೀರವಾರ್ಧಿಯು ತಂದೊಂದು । ಕೊಡದಲ್ಲಿ ತುಂಬಿದಂದದೊಳು ॥
ಅಡಕದ ದೇಹದೊಳತಿವಿಶಾಲಾತ್ಮ ತಾ । ನಡಗಿರಲಾರೈವುತಿರ್ದಾ ॥ ೧೬ ॥
ಆಕಾಶವನ್ನೊಂದು ಮಾರಿಕ್ಕುವಂತೆ ಮೂ । ಲೋಕವ ಚೋಟಿಕ್ಕುವಂತೆ ॥
ದಾಕೊಂದರೊಳು ಕೋಟಿವಾರ್ಧಿಯು ಪಾಯ್ವ ಸಿ । ರಾಕುಲೋನ್ನತಿಯಿರ್ದುದೊಳಗೆ॥ ೧೭ ॥
ಒಡಲೆಂಬ ಕುಂಭದೊಳಿರ್ದಾತ್ಮನೆಂಬ ಪಾ । ಲ್ಗಡಲಿಗೆ ಸವ್ಯಕ್ತ್ವಗಿರಿಯ ॥
ಕಡೆಗೋಲನಿಟ್ಟು ಚಿದ್ಭಾವದ ನೇಣಿಂದ । ಕಡೆವವೊಲಿರ್ದುದಾ ಧ್ಯಾನಾ ॥ ೧೮ ॥
ಕೊಡ ಬೇರೆ ಪಾಲು ಬೇರಾ ಮಂತು ನೇಣ್ಬೇರೆ । ಕಡೆವರು ಬೇರಲ್ಲಿಗಿಲ್ಲ ॥
ಕೊಡನೊಂದೆ ಜೇರೆ ಮಿಕ್ಕಿನವೆಲ್ಲ ತಾನಾಗಿ । ಕಡೆವುತಿರ್ದನು ಮಹಾಮಹಿಮಾ ॥ ೧೯ ॥

ಗುಣವೆಂಟರೊಳು ಮುನ್ನ ನಾಲ್ಕಾದುವಿನ್ನು ಸ । ದ್ಗುಣ ನಾಲ್ಕ ಪಡೆಯಬೇಕೆಂದು ॥
ಗುಣಗುಣಿಭೇದವಳಿದು ತನ್ನ ನೋಡಿ ದು । ರ್ಗುಣದ ಕರ್ಮವನೊತ್ತುತಿರ್ದಾ ॥ ೨೦ ॥
ಕರ್ಮವೆ ರೂಪಾಗಿ ಕವಿದಿರ್ದ ತೈಜಸ । ಕಾರ್ಮಣತನುಗಳು ಮುನ್ನ ॥
ಪೆರ್ಮೊರು ದಟ್ಟ ಜಗುಳಿ ತೆಳುಪಾಗಿರ್ದು । ವೊರ್ಮೊದಲೊಳೆ ಸಾರುತಿಹುವು ॥ ೨೧ ॥
ಬೆಳಗನೆ ವಿಗಾವಂತೆ ಬೆಳಗನೆ ಪಾಯ್ವಂತೆ । ಬೆಳಗಿನೋಕುಳಿಯಾಡುವಂತೆ ॥
ಬೆಳಗಿನೊಳೋಲಾಡಿ ತೇಂಕಾಡುವಂತೆ ತ । ನ್ನೊಳಗೆ ತಾನಿರ್ದನಾ ಪರಮಾ ॥ ೨೨ ॥
ಕಿರಣ ತೋರಿತು ಮಾಸಿತೊಡನೆ ಥಳಿಸಿತೆಂಬ । ಪರಿಯ ಧರ್ಮಧ್ಯಾನವಲ್ಲ ॥
ಪರಮಶುಕ್ಲಧ್ಯಾನವದು ನಿರ್ಮಲಾತ್ಮನೆ । ಸ್ಫುರಿಸುತಿರ್ದನು ದೇಹತುಂಬಿ ॥ ೨೩ ॥
ತನುವೆಂಬ ಕುಂಭವೊಡೆವುದಾತ್ಮನೆಂಬ ಪಾ । ಲ್ವೊನಲಿಳೆ ತುಂಬುವುದೆಂಬ ॥
ತನಿವೆಳಗೊಳಗೆ ಝಿಲ್ಲಿಸುತಿರ್ದುದಾ ಧ್ಯಾನ । ಘನವನಾ ಪರಮನೆ ಬಲ್ಲಾ ॥ ೨೪ ॥

ಆಯುಷ್ಯಕರ್ಮ ಮುಪ್ಪಾಗಿರ್ದುದಾ ವೇದ । ನೀಯವಾ ನಾಮಗೋತ್ರಗಳು ॥
ಪ್ರಾಯವಾಗಿರ್ದವಂತವ ಮುಪ್ಪುಮಾಡುವು । ಪಾಯಕುಜ್ಜುಗಿಸಿದನೊಡನೆ ॥ ೨೫ ॥
ಅರಿಗಳುಮೂವರ ದಂಡವ ಕೊಂಡೊಬ್ಬ । ಸಿರಿಗೆಟ್ಟ ಪಗೆಗೆಡೆಮಾಡಿ ॥
ಧರೆಯಿಂದ ನಾಲ್ವರನೊಂದೇ ಬಾರಟ್ಟುವ । ಉರುತರ ತಂತ್ರಕೆತ್ತಿದನು ॥ ೨೬ ॥
ದಂಡದಾಕಾರಕೆಂದಾತ್ಮನ ಬಗೆಯ ಕೈ । ಕೊಂಡಾಗ ಕುಳಿತಿರ್ದುದಲ್ಲಿ ॥
ಚಂಡಾಂಗವೆರಡರೊಳ್ವೊರವೊಣ್ಮೆ ಶುದ್ಧಾತ್ಮ । ದಂಡದಾಕಾರವಾಗಿರ್ದಾ ॥ ೨೭ ॥

ತಳಲೋಕವುಟ್ಟ ಸಿದ್ಧಕ್ಷೇತ್ರಮುಟ್ಟ ತಂ । ಬೆಳಗೆ ಬಿಂಬಿಸುತ ದಿವ್ಯಾತ್ಮಾ ॥
ಬಲವೆತ್ತು ಪದಿನಾಲ್ಕರಜ್ಜು ವಿನುದ್ದದಿ । ಗಳೆಯಂತೆ ನಿಂದಿರ್ದನಾಗ ॥ ೨೮ ॥
ಧರಿಸಿದ ದೇಹಕೆ ಮುಮ್ಮಡಿದಟ್ಟನಾ । ಕರಚರಣಾದಿರೂಪಿಲ್ಲ ॥
ಪರಮಾತ್ಮನಿರ್ದನು ತ್ರಿಜಗಕೆ ಬೆಳಗಿನ । ಕರುಕಂಭವೊಂದ ನೆಟ್ಟಂತೆ ॥ ೨೯ ॥
ಬಗೆದನು ಕೂಡೆ ಕವಾಟದಾಯತಕೆಂದು । ಪ್ರಗುಣಾತ್ಮನಾ ಕ್ಷಣದಲ್ಲಿ ॥
ದಗದಗಿಸುತ ತೆಂಕ ಬಡಗ ನೀಳ್ದಿರ್ದನು । ಜಗಕೊಂದು ಕದವಿಕ್ಕಿದಂತೆ ॥ ೩೦ ॥
ಏಳುರಜ್ಜುವಿನಗಲದೊಳು ಮತ್ತೀಳಿಯೊಳೀ । ರೇಳುರಜ್ಜುವಿನುದ್ದವಾಗಿ ॥
ತಾಳಿದ ಮೈಗೆ ಮುಮ್ಮಡಿದಟ್ಟತಾಗಿ ನಿ । ರಾಲಾತ್ಮನಿರ್ದನೇನೆಂಬೆ ॥ ೩೧ ॥
ಪ್ರತರೆಗೆಂದಾತ್ಮನ ನೆನೆದನಾ ಗುರು ಲೋಕ । ತ್ರಿತಯದೊಳಗೆ ಲೋಕವೆಂಬ ॥
ಅತಿದೀರ್ಘಕುಂಭದೊಳಾತ್ಮನೆಂಬಮೃತ ತುಂ । ಬಿತು ಮಝು ತೆಕ್ಕನಾ ಕ್ಷಣವೆ ॥ ೩೨ ॥
ಮಂಜು ಲೋಕವ ತುಂಬುವಂತೆ ಮೂಲೋಕವ । ಸಂಜೀವನಾತ್ಮ ತುಂಬಿದನು ॥
ಮಾಂಜಿ ಮತ್ತಾಗಳೆ ಲೋಕಪೂರಣೆಗೆ ಪ । ರಂಜ್ಯೋತಿ ನೆನೆದನಾತ್ಮನನು ॥ ೩೩ ॥
ಮೊದಲು ಗಾಳಿಗಳಷ್ಟ ಬಿಟ್ಟೊಳಗಿರ್ದು ಬೇ । ಗದಿ ಗಾಳಿಗಳನೊಳಕೊಂಡು ॥
ತುದಿಮೊದಲಿಗೆ ತುಂಬಿ ತ್ರಿಜಗಕೆ ಮುಸುಕನಿ । ಕ್ಕಿದವೊಲಿರ್ದನು ಪರಮಾತ್ಮಾ ॥ ೩೪ ॥
ಶಿಲೆಯೊಳೌದಾರಿಕವಿರ್ದುದು ತ್ರಿಜಗವ । ಬಳಸಿ ತೈಜಸಕಾರ್ಮಣಗಳು ॥
ನೆಲಸಿರ್ದವವರ ಮುಸುಕಿನಲ್ಲಿ ಪರಮಾತ್ಮ । ಕಲೆಯಿರ್ದುದತಿವಿಶಾಲದೊಳು ॥ ೩೫ ॥
ಪಾಟಿಸಿ ಪೂರ್ಣದಾ ಪ್ರತರೆಗೆ ಬಂದು ಕ । ವಾಟ ದಂಡಾಕಾರವಾಗಿ ॥
ಆಟವೆಲ್ಲವ ತೊರೆದೆಂದಿನಂದದಿ ದೇಹ । ಕೂಟದೊಳ್ನೆಲೆಗೊಂಡನಾತ್ಮಾ ॥ ೩೬ ॥
ನನೆದೊಂದುವಸ್ತ್ರವ ನೀಟಕೆ ಹರಹೆ ಜು । ವ್ವನೆ ದ್ರವವಾರುವಂದದೊಳು ॥
ಜಿನನಾತ್ಮ ವಸ್ತುವ ಪಸರಿಸೆ ಕರ್ಮಾಂಬು । ಹನಿತೆರಳಣುಗಳಾರಿದುವು ॥ ೩೭ ॥
ಮೂರುಕರ್ಮಗಳು ಮತ್ತಾಯುಷ್ಯಕರ್ಮವ । ವಿಾರದೊಂದೆ ಪಾಟಿಯಾಗೆ ॥
ಮೂರುದೇಹವನುಳಿದಭವ ಸಿದ್ಧಾವನಿ । ಗೇರುವರಾಸನ್ನವಾಯ್ತು ॥ ೩೮ ॥
ನಿಯತತ್ರಯೋದಶಸ್ಥಾನಿ ಚತುರ್ದಶೋ । ಕ್ತಿಯ ಸ್ಥಾನಕಡರಿದನೊಡನೆ ॥
ಆಯಿವುರುಲೆಂಬವೈದಕ್ಷರೋಚ್ಚರಣೆಗಾ । ಶ್ರಯುವಲ್ಲಿ ವರ್ತಿಪ ಕಾಲ ॥ ೩೯ ॥
ಒಮ್ಮೆಯೆಪ್ಪತ್ತೆರಳ್ಕರ್ಮಜಾರಿದುವು ಕೂ । ಡೊಮ್ಮೆ ಬಿದ್ದುವು ಪದಿಮೂರು ॥
ಜುಮ್ಮನೆ ಮೂರಂಗ ಬಯಲಾದುವಾ ಪರ । ಬೊಮ್ಮ ಲೋಕಾಗ್ರಕೆ ನೆಗೆದಾ ॥ ೪೦ ॥
ಒಂದ ಮೂರನೆಯ ಶುಕ್ಲಧ್ಯಾನವೆಂಬದಾ । ವೊಂದ ನಾಲ್ಕನೆಯದೆಂದುಸುರಿ ॥
ಅಂದವಿಡುವರದು ನುಡಿಜಾಣ್ಮೆ ತನ್ನ ತ । ನ್ನಿಂದ ನೋಡಿದನೆಂಬುದರ್ಥಾ ॥ ೪೧ ॥

ತ್ರೈಕಾಯ ಮಿಂಚಿನಂದದಿ ಬಯಲಾಗೆ ಮೂ । ಲೋಕದ ತುದಿಗಾದಿಜಿನನು ॥
ಏಕಸಮಯದಲ್ಲಿ ಲಂಘಿಸಿದನು ಮಝು । ತಾಕಿಲ್ಲದೇಳುರಜ್ಜುವನು ॥ ೪೨ ॥
ಗಿರಿಯಲ್ಲಿ ಪಲ್ಯಂಕಯೋಗದೊಳ್ತನುಬಿಟ್ಟ । ಪರಿಯೊಳಲ್ಲಿಹುದು ಪಲ್ಯಂಕಾ ॥
ಪುರುಷಾಕಾರದೊಳಿಂಬುಗೊಂಡನು ಮುಕ್ತಿ । ಗರಸಾಗಿ ಸಿದ್ಧಗೋಷ್ಠಿಯೊಳು ॥ ೪೩ ॥
ತನುವಾತನೆಂಬಂತ್ಯವಾಯುವಲಯದೊಳಿ । ರ್ದನುಪಮಸಿದ್ಧರಾಶಿಯೊಳು ॥
ಜಿನನೆಂಬುದಳಿದು ಸಿದ್ಧತ್ವವ ಪಡೆದು ಪೆಂ । ಪಿನೊಳಿರ್ದನಾ ಪರಂಜ್ಯೋತಿ ॥ ೪೪ ॥
ಎಂಟುಕರ್ಮಗಳಳಿದುವು ಕೂಡೆ ಗುಣವೆಂಟು । ನಾಂಟಿದುವೈಕ್ಯಭಾವದೊಳು ॥
ಎಂಟನೆಯುರ್ವಿಯೊಳಿರ್ದನಾ ಸಿದ್ಧನು । ದಾಂಟಿ ಸಂಸಾರವಾರ್ಧಿಯನು ॥ ೪೫ ॥
ಸಮ್ಯಕ್ತ್ವ ಬೋಧ ಸದ್ದರ್ಶನ ವೀರ್ಯ ಸು । ಗಮ್ಯದ ಸೂಕ್ಷ್ಮಾವಗಾಹಾ ॥
ನಮ್ಯ ನಿರ್ಗುರುಲಘು ನಿರ್ಬಾಧವೆಂಬಾತ್ಮ । ಸಾಮ್ಯಗುಣಾಷ್ಟಕವಾಯ್ತು ॥ ೪೬ ॥
ತಿರುಗದ ಪದವದು ತೀರದ ಘನಸುಖ । ನರಸುರೋರಗರಿಗಶಕ್ಯಾ ॥
ವಿರಚಿಸಲರಿದಾದ ಮುಕ್ತಿಸಾಮ್ರಾಜ್ಯದೊ । ಳಿರುತಿರ್ದನಾ ಸಿದ್ಧನತ್ತ ॥ ೪೭ ॥
ಇತ್ತಲಾತನ ದೇಹ ಪರಿವುದು ಮೇಲಿರ್ದ । ವೃತ್ತಸಮವಸರಣೋರ್ವಿ ॥
ಎತ್ತಪೋದುದೊ ಮಝು ಬಯಲಾಯ್ತು ಮುಗಿಲೊಡ್ಡು । ಮುತ್ತಿರ್ದ ಮಾಯವಾದಂತೆ ॥
ಸಮವಸರಣ ಬಯಲಪ್ಪುದು ಜಿನರ ಸಂ । ಭ್ರಮಗಂಧಕುಟಿಗಳಾ ಕ್ಷಣವೆ ॥
ಗಮಿಸಿದುವಿಚ್ಛೆ ಬಂದತ್ತಲಾದೀಶನಿ । ಲ್ಲಮೆಯೊಳಿನ್ನಾರಿಹರಲ್ಲಿ ॥ ೪೯ ॥
ಅಯ್ಯನ ಯೋಗವ ನಿಟ್ಟಿಸುತಿರ್ದಿರ್ದ । ಮೆಯ್ಯೊಳಿದರ್ಹ ಲಂಘಿಸಲು ॥
ರಯ್ಯವಳಿದು ಮೋರೆ ಕಂದಿತು ಚಕ್ರಿಗೆ । ಚುಯ್ಯನೇರಿತು ಶೋಕವೊಳಗೆ ॥ ೫೦ ॥
ಏರಿತು ಮೂರ್ಛೆ ಸರ್ವರ ಮುಂದೆ ಗಂಭೀರ । ಜಾರದಂದದೊಳೊತ್ತಿ ತಡೆದಾ ॥
ಮಿಾರಿತು ಪಿತಮೋಹ ತಡೆದು ತಡೆದು ತಾಳ । ಲಾರದೆ ಮೂರ್ಛೆಗೆ ಸಂದಾ ॥ ೫೧ ॥
ನಿಂದಿರ್ದ ಮೂರ್ಛೆ ತಟ್ಟುವುದನರಿದು ಮ್ಹಾನ । ದಿಂದಲ್ಲಿ ಕುಳ್ಳಿರುತೊಡನೆ ॥
ಕುಂದಣಬೊಂಬೆಯೊಲ್ಕೆಡೆದನು ಸದರವೆ । ತಂದೆಯನಗಲಿದ ಶೋಕಾ ॥ ೫೨ ॥
ಕೆಳೆಯರು ಶೈತ್ಯೋಪಚಾರದಿಂದೆಬ್ಬಿಸೆ । ಕುಳಿತು ಕಂಬನಿ ಕಣ್ಣೊಳೊಗುತ ॥
ತಿಳಿವುಗೆಟ್ಟಾ ಚಕ್ರಿ ತನ್ನಯ್ಯ ಮೊದಲಿರ್ದ । ಶಿಲೆಯತ್ತ ನೋಡಿ ಶೋಕಿಸಿದಾ ॥ ೫೩ ॥
ಹಾ ಹಾ ಸ್ವಾಮಿ ನನ್ನೊಡೆಯ ನನ್ನಪ್ಪಾಜಿ । ಮೋಹಾಸುರದರ್ಪಮಥನಾ ॥
ಬಾಹಿರದೊಳಗೆನ್ನನೀಡಾಡಿ ಮುಕ್ತಿಗೆ । ಹೋಹರೆ ಪುರುಪರಮೇಶಾ ॥ ೫೪ ॥
ಪಟ್ಟವೆಂದೊಂದು ಪಾಶವ ಕಟ್ಟಿ ರಾಜ್ಯವ । ಕೊಟ್ಟೊಂದು ಹೊರೆಗೊಡುವಂತೆ ॥
ಕಟ್ಟಕಡೆಯೊಳೆನ್ನ ಮುಕ್ತಿಗೆಯ್ದಿಸದಿಂತು । ಬಿಟ್ಟುಹೋಹರೆ ಮಹಾದೇವಾ ॥ ೫೫ ॥

ಬೇಡಿದರ್ಥವನಿತ್ತು ಬಹುಕಾಲ ರಕ್ಷಣೆ । ಮಾಡಿ ಮತ್ತೆನ್ನ ನೀನಿಲ್ಲಿ ॥
ಈಡಾಡಿ ಹೋಹಾಗ ನಾನೇನು ಕಷ್ಟವ । ಮಾಡಿದೆನೆಲೆ ಪರಂಜ್ಯೋತಿ ॥ ೫೬ ॥
ಎಲ್ಲಿ ಹೋದುದು ನಿನ್ನ ಸಭೆ ನಿನ್ನ ದಿವ್ಯಾಂಗ । ಚೆಲ್ಲಿರ್ದ ಗಂಧಕುಟಿಗಳು ॥
ಬೆಳ್ಳಿಯ ಬೆಟ್ಟವೈಸಿರಿ ಮಾಯವಾದುದಿ । ನ್ನೆಲ್ಲಿಯದುಳಿದರ ಬದುಕು ॥ ೫೭ ॥
ತೊರೆಯಬೇಡವೆ ನಿನ್ನ ಕಂಡು ನಾನಿಂದು ಪೊ । ಚ್ಚರಿಸಿ ದೀಕ್ಷೆಯ ತಾಳಬೇಡಾ ॥
ಹೆರಹಿಂಗಲೀಯದೀ ಪುಣ್ಯ ಕರ್ಮವೆ ನನ್ನ । ತುರುಬಿಕೊಂಡಿರ್ದುದಾದೀಶಾ ॥ ೫೮ ॥
ಆಗಲಿನ್ನಳಲಿದರೇನಾಯ್ತು ನೀನಿತ್ತ । ಯೋಗಮಾರ್ಗದೊಳಾನು ಬಹೆನು ॥
ಶ್ರೀಗುರುಹಂಸನಾಥಾಯ ನಮೋಸ್ತೆಂದು । ಬೇಗೆಯ ಕೂಡೆ ನಂದಿಸಿದಾ ॥ ೫೯ ॥

ವೃಷಭೇಶನೆಯ್ದಿದರೇನು ಚರ್ಮಾಕ್ಷಿಗೆ । ವಿಷಯವಲ್ಲಾತ್ಮಲೋಚನಕೆ ॥
ಸುಷಮಾರ್ಥ ಮಿಗೆ ತೋರ್ಪನಲ್ತೆ ನೋಯದಿರೆಂದು । ವೃಷಭಸೇನಾಚಾರ್ಯನೊರೆದಾ ॥ ೬೦ ॥
ನನ್ನಷ್ಟು ಪ್ರಾಯಾಸವಿಲ್ಲದೆ ಮುಕ್ತಿಗೆ । ಬಿನ್ನಾಣದೊಳು ಬಪ್ಪೆಯೆಂದು ॥
ನಿನ್ನಯ್ಯ ನಿನಗರುಹಿದನಲ್ತೆ ತಾಳು ನೀ । ನಿನ್ನು ಕಾಣ್ಬೈ ನಿನ್ನ ಪಿತನಾ ॥ ೬೧ ॥
ಸಿದ್ಧಲೋಕದೊಳಯ್ಯ ನೆಲಸಿರಲಾನಂದ । ವೃದ್ಧಿಯನೆಯ್ದದೆ ನೀನು ॥
ಬದ್ಧರಂದದೊಳಿಂತು ನೋವರೆಯೆಂದು ವಿ । ಶುದ್ಧಿದೋರಿದನು ಯೋಗೀಂದ್ರಾ ॥ ೬೨ ॥
ಮಾಹಾತ್ಮ್ಯವಹುದಾದರೇನ ಮಾಡಲಿ ನನ್ನ । ಮೋಹ ಕಾಡುವುದಯ್ಯನೆಂಬ ॥
ಸ್ನೇಹ ಬಿಡದು ನಸುಮರುಕವಾಯ್ತೆಂದಾರ್ಯ । ಗಾ ಹೇಮವರ್ಣನಾಡಿದನು ॥ ೬೩ ॥
ಜನನಿ ದೀಕ್ಷೆಯನಾಂತರನುಜ ಮುಕ್ತಿಯನೆಯ್ದೆ । ಜಿನಸಭೆ ತಡೆದುದಾ ನೋವಾ ॥
ಜಿನನಿಲ್ಲದಾಗಳಾಗದೆ ತಲೆದೋರಿತೊ । ಯ್ಯನೆ ಜಾರಿತೆಂದನಾ ನಿಪುಣಾ ॥ ೬೪ ॥
ಅಂತಹ ತಂದೆಯುನಗಲಿದಾಗೀ ಪುತ್ರ । ನೆಂತು ತಾಳ್ವನು ನೋಯಬಹುದು ॥
ಅಂತರಂಗವ ಕೂಡೆ ಸಂತೈಸಿಕೊಂಡುದ । ತ್ಯಂತವಿಸ್ಮಯವೆಂದನಿಂದ್ರಾ ॥ ೬೫ ॥
ನುಡಿಯಬಹುದು ಬಹುರಚನೆಯ ನುಡಿದಂತೆ । ನಡೆಯಬಾರದು ಚಕ್ರಿ ನಿನ್ನ ॥
ನಡೆನುಡಿಗಳು ಸರಿಯಾಗಿರ್ದುವೆಂದೊಲ್ದು । ನುಡಿದನಾ ಸ್ವರ್ಗದ ರಾಯಾ ॥ ೬೬ ॥
ಸುಖದೊಳಿರ್ದಾಗೆಲ್ಲ ಸುಮುಖರಾಗಿರಬಹು । ದಖಿಲವ್ಯಾಕುಲ ತಟ್ಟಿದಾಗ ॥
ಮುಖಕೆ ಕವಿದ ನೋವನೊದರುವುದರಿದೆಂದು । ಮುಖರಿಸಿ ಪೊಗಳ್ದನಾ ಫಣಿಪಾ ॥ ೬೭ ॥
ಅಮೃತಲೋಕದೊಳಿರ್ದನಾದೀಶ ನಮಗಿಲ್ಲಿ । ಮಮತೆಯೇನಲ್ಲಿಗೆ ಪೋಪಾ ॥
ಕ್ಷಮಿಸಿದುದಚ್ಚರಿ ನೆಗೆದ ಶೋಕವನೆಂದು । ನಮಿರಾಜ *ನುಡಿದನಿಂಬರಿದು ॥ ೬೮ ॥

---

* ನಿಂಪನಾಡಿದನು

ಉಳಿದ ಮೈದುನರು ಭೂಭುಜರು ಸಹಾಯರು । ಕಳೆಯುರಿದೊಳ್ಪನಾಡಿದರು ॥
ಬಳಿಕ ಪನ್ನೀರಿಂದ ಮೊಗದೊಳೆದಾ ಚಕ್ರಿ । ಬಳಸಿದೆಲ್ಲರ್ಗಿಂತು ನುಡಿದಾ ॥ ೬೯ ॥

ಲೇಸುಮಾಡಿದಿರಿ ನೀವೆಲ್ಲರು ಬಂದು ಕೈ । ಲಾಸನಾಥನ ಮಹೋತ್ಸವವಾ ॥
ಭಾಸುರವೆನೆ ನಡೆಸಿದಿರದರಿಂದೆನ । ಗಾಸರಿಲ್ಲಾನಂದವೆಂದಾ ॥ ೭೦ ॥

ಅರುಹನ ಸಭೆ ಬಯಲಾಯ್ತೆಂದ ಮೇಲೆನ್ನ । ಸಿರಿಯು ಹೆಚ್ಚೇನದು ಸಾಕು ॥
ಪರಮಬಂಧುಗಳು ನೀವೆಲ್ಲರು ನನಗೆಂದು । ದೊರೆಗಳಿಗಿಂಪನಾಡಿದನು ॥ ೭೧ ॥

ನೀವು ನಾವೆಲ್ಲರು ಸ್ವಾಮಿಯನರ್ಚಿಸಿ । ಪಾವನರಾದೆವಂತಿರಲಿ ॥
ದೇವನ ನೆನೆವುತ ನೀವೆಲ್ಲರಿನ್ನು ನಿ । ಮ್ಮಾವಾಸಕೆಯ್ದುವುದೆಂದಾ ॥ ೭೨ ॥

ಮೈದುನರರುವರನಪ್ಪಿ ತನಗೆ ನತ । ರಾದಳಿಯಂದಿರ ನೋಡಿ ॥
ಮೇದಿನೀಪತಿಗಳ ನೋಡಿ ನುಡಿದು ಹರು । ಷೋದಯದೋರಿ ಬೀಳ್ಕೊಟ್ಟಾ ॥ ೭೩ ॥

ಗಡಣವಮಾತೇನು ಮಾಗಧನಾದಿ ಹಿಮವಂತ । ಕಡೆಯಾದ ವ್ಯಂತರಾವಳಿಗೆ ॥
ಬಿಡುಗೆಗೊಟ್ಟನು ಕೂಡೆ ಖಚರರ ಬೀಳ್ಕೊಟ್ಟ । ಸಿಡಿದರೆಲ್ಲರು ಕಂಡಕಡೆಗೆ ॥ ೭೪ ॥

ಸುರಪಗೆ ಫಣಿಪಗೆ ವಿನಯವ ನುಡಿದು ಬಂ । ಧುರಯೋಗಿಗಳಿಗೊಡನೆರಗಿ ॥
ಭರತೇಶ ತನ್ನೂರಿಗೆದ್ದನು ಕೂಡಿದ । ಪರಿಸೆ ಹೋದುದು ದೆಸೆದೆಸೆಗೆ ॥ ೭೫ ॥

ವರಪುತ್ರ ಮಿತ್ರ ಪ್ರಧಾನ ಮುಂತಾದಾಪ್ತ । ಪರಿವಿತಾನವ ಕೂಡಿಕೊಂಡು ॥
ಗುರುಹಂಸನಾಥನ ಭಾವಿಸುತಾ ಜಾಣ । ರರಸನೆದ್ದನು ತನ್ನ ಪುರಕೆ ॥ ೭೬ ॥

ಉದ್ಯಾಪನೆಮಾಡಿ ವ್ಯವಹಾರಧರ್ಮಕೆ । ಹೃದ್ಯನಿಶ್ಚಯಧರ್ಮವಿಡಿದು ॥
ಸದ್ಯೋಜಾತಚಿತ್ಕಲೆಯ ಭಾವಿಸುತನ । ವದ್ಯನೆದ್ದನು ತನ್ನ ಪುರಕೆ ॥ ೭೭ ॥

ಸುಖದುಃಖಕೆದೆಸೂರೆಹೋಗದೆ ಪರಮಾತ್ಮ । ಸುಖವೊಂದೆ ಬಗೆಬೆಚ್ಚು ನಡೆದು ॥
ಸುಖದಲ್ಲಿ ನಾಳೆ ಮುಕ್ತಿಯ ಕೊಂಬ ಸುಖಿ ಕೂಡೆ । ಮುಖವಾದ ತನ್ನ ಪಟ್ಟಣಕೆ ॥ ೭೮ ॥

ಕನ್ನಡಿಯೊಳಗೆ ನಾನಾವಿಕೃತಿಗಳಾಗಿ । ಕನ್ನಡಿ ನಿಜದೊಳಿಪ್ಪಂತೆ ॥
ತನ್ನ ಕರ್ಮವ ತನ್ನ ತಟ್ಟೆತಟ್ಟದ ಸುಪ್ರ । ಸನ್ನನೆದ್ದನು ತನ್ನ ಪುರಕೆ ॥ ೭೯ ॥

ಜಗದ ಕಣ್ಣಿಗೆ ನಾಡನಾಳುವಂತಿರ್ದುದಾ । ಹಗರಣವೆಂದು ನಿಟ್ಟಿಸುತ ॥
ಬಗೆವೆಚ್ಚಿ ಸುಜ್ಞಾನರಾಜ್ಯವನಾಳ್ವತಿ । ವಿಗಡನೆದ್ದನು ತನ್ನಪುರಕೆ ॥ ೮೦ ॥

ಜಂಭಾರಿಯಿನ್ನು ನರ್ತಿಸುವನೆಂದವನಂಗ । ಜೃಂಭಣೆಗಳ ನೋಡಲೆಳಸೆ ॥
ಕುಂಭಿನೀಜನವ ಬೀಳ್ಕೊಡುತ ಬೇಗೊಲೆದನಾ । ಗಂಭೀರಪುರುಷ ತನ್ನೂರ್ಗೆ ॥ ೮೧ ॥

ಆಕಾಶವೀಥಿಯೊಳೆಯ್ತಂದು ಚಕ್ರೇಶ । ಸಾಕೇತಪುರದೊಳಪೊಕ್ಕು ॥
ತೂಕದೊಳೆಲ್ಲರ ಕಳುಹುತ ಹೊಕ್ಕನು । ಜೋಕೆಯೊಳ್ತನ್ನರಮನೆಯಾ ॥ ೮೨ ॥

ವ್ಯಾಕುಲಬಡುತ ಬಂದೆರಗಿದ ಪೆಂಡಿರ । ಶೋಕವಾರಿಸಿ ತಂಪುಮಾಡಿ ॥
ಆಕಲಾವಿದನತ್ತಲಿರಲಿತ್ತ ಗಿರಿಯೊಳು । ದ್ರೇಕಿಸಿತಿಂದ್ರಗೆ ಲೀಲೆ ॥ ೮೩ ॥

ಸ್ವಾಮಿ ಕರ್ಮವ ಸುಟ್ಟ ತೆರನ ರೂಪಕವಿಟ್ಟು । ಭೂಮಿಗೆ ತೋರುವೆನೆಂದು ॥
ಹೋಮಕುಂಡತ್ರಯ ಗೈಸಿ ಶ್ರೀಗಂಧಾಭಿ । ರಾಮಕಾಷ್ಠಗಳ ತುಂಬಿಸಿದಾ ॥ ೮೪ ॥

ಅನಲ ಕುಮಾರನ ಮುಡಿ ಸೋಂಕಲುರೆ ಭುಗಿ । ಲೆನುತೆದ್ದುದೊಡನೆ ದೇವೇಂದ್ರಾ ॥
ಅನಿಮಿಷಲೋಕದ ಪರಿಮಳವಸ್ತುಶಂ । ಜನಿತತರ್ಪಣದಿ ಹೋಮಿಸಿದಾ ॥ ೮೫ ॥

ಮೂರುಕುಂಡವೆ ಮೂರುದೇಹಸೂಚನೆ ಕಾಷ್ಠ । ನೂರುನಾಲ್ವತ್ತೆಂಟುಪ್ರಕೃತಿ ॥
ಏರಿದಗ್ನಿಯೆ ಧ್ಯಾನಸೂಚನೆ ಇದಿರಿಟ್ಟು । ತೋರಿದನಾ ವಿನೋದಾರ್ಥಿ ॥ ೮೬ ॥

ಅರುಹ ಕರ್ಮವ ಸುಟ್ಟು ಮುಕ್ತಿಗೆಯ್ದಿದ ಭಾಗ್ಯ । ದೊರೆಕೊಳ್ಳಲೆಮಗೆಂದು ಸುರರು ॥
ಕೊರಳೆದೆ ತೋಳ್ನೊಸಲೊಳು ಹೋಮಭಸ್ಮವ । ಧರಿಸಿದರಾನಂದದಿಂದ ॥ ೮೭ ॥

ಕಡೆಯ ಕಲ್ಯಾಣವಿಂತಿದುಗೂಡಿ ದೇವಗೆ । ನಡೆಸಿದೆವೈದು ಮಂಗಲವಾ ॥
ಪಡೆದೆವಿನ್ನೇನು ಮುಕ್ತಿಯನೆಂದು ಹರ್ಷದ । ಕಡಲೊಳಾಳಿದರು ನಿರ್ಜರರು ॥ ೮೮ ॥

ಮೇನಕೆ ಬಾ ರಂಭೆ ಬಾ ತಿಲೋತ್ತಮೆ ಬಾ ಸು । ಮ್ಮಾನವಾಯ್ತೆನಗೆಂದು ಕರೆದು ॥
ಆ ನೀರೆಯರುಗೂಡಿ ಕುಣಿದನಿಂದ್ರನು ಸುರ । ಗಾನ ಮದ್ದಳೆ ತಾಳವೆಸೆಯೆ ॥ ೮೯ ॥

ಪೆಂಗಳುವೆರಸಿ ನರ್ತಿಪನೊಮ್ಮೆ ಪೆಂಗಳ । ಪಿಂಗಿಸಿ ತಾನೆ ನರ್ತಿಸುವ ॥
ಚಾಂಗೆಂದು ಬಹುರೂಪ ತೋರುವನೊಮ್ಮೆಯೇ । ಕಾಂಗಿಯಾಗಿಯೆ ನಟಿಸುವನು ॥ ೯೦ ॥

ಗಿರಿಯೊಳಾಡುವನೊಮ್ಮೆ ಮುಗಿಲೊಳಾಡುವನೊಮ್ಮೆ । ಸರಿತದೋರುವನು ಡೊಂಕಹನು ॥
ಉರುಪ ನೇರಗಳ ಚಕ್ಕಡಿ ಚಿಂತು ಮೊದಲಾದ । ಪರಿಪರಿನಾಟ್ಯದೋರಿದನು ॥ ೯೧ ॥

ತಲೆಕೆಳಗಾಗಿ ನರ್ತಿಪನೊಮ್ಮೆ ಮಿಾನಂತೆ । ಹೊಳೆದುರುಳುವನು ಬಾನದೊಳು ॥
ಎಲೆಲೆ ಮಾಮಾ ಪುರೆಪುರೆಯೆಂದು ತನ್ನವ । ರುಲಿಯೆ ತಾನದಕುಬ್ಬುತಿಹನು ॥ ೯೨ ॥

ಮುಕ್ತಿಗೆನ್ನೊಡೆಯನೆಯ್ದಿದನೆನಗಧಿಕಾನು । ರಕ್ತಿಯಾಯ್ತದರಿಂದ ನನ್ನ ॥
ಭಕ್ತಿಯಾಡಿಸಿದಂತೆ ನರ್ತಿಪೆನೆಂದತಿ । ವ್ಯಕ್ತಿಯಾಗಿರೆ ನಟಿಸಿದನು ॥ ೯೩ ॥

ಕಟ್ಟದ ಪೆಣ್ಗಾಸೆ ಮುಂದಲೆ ಚುಂಗಿಂದ । ನಟ್ಟುವನಾಡುತವಾಂತು ॥
ಬೆಟ್ಟದೊಳಮರೇಂದ್ರ ಕುಣಿದಾಡುತಿರೆ ಪುರೆ । ಯಿಟ್ಟು ನಿಲ್ಲಿಸಿದರಿರ್ದವರು ॥ ೯೪ ॥

ಗಣಧರರಿಗೆ ಕೂಡೆ ನಮಿಸಿ ಜ್ಯೋತಿಷ್ಕರ । ಫಣಿಪ ಮುಂತಾದರ ಕಳುಹಿ ॥
ಗಣಿಕೆಯರಮರರು ಶಚಿಗೂಡಿ ಸ್ವರ್ಗಕಾ । ಕ್ಷಣದೊಳೆಯ್ದಿದನಮರೇಂದ್ರಾ ॥ ೯೫ ॥

ಮಿಗೆ ಮಾಘಬಹುಳಚತುರ್ದಶಿಯಂದು ಮು । ಕ್ತಿಗೆ ಸಂದನಾದಿತೀರ್ಥೇಶಾ ॥
ಹಗಲಿರುಳೆನ್ನದಾ ದಿನ ಸರ್ವಜನಕರ್ತಿ । ಸೊಗಸಿತು ಮೂಲೋಕದಲ್ಲಿ ॥ ೯೬ ॥

ಜಿನನೆಂದು ಶಿವನೆಂದು ಪೆಸರೀಶಗುಂಟದು । ಜಿನರಾತ್ರಿ ಶಿವರಾತ್ರಿಯೆಂದು ॥
ಮನುಜರು ಮನ್ನಿಸುತಿರ್ದರೆಂಬಲ್ಲಿಗೆ । **ಜಿನಮುಕ್ತಿಗಮನದ ಸಂಧಿ** ॥ ೯೭ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೮ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವ್ವೆದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೯ ॥
ಪರಿವಿಡಿಯಿಂದೆಯ್ದಿ ಭರತಚಕ್ರೇಶ್ವರ । ನುರದಲ್ಲಿ ನೆಲಸಿದಂದದೊಳು ॥
ಸ್ಥಿರವಾಗಿ ನನ್ನಂತರಂಗದೊಳಿರು ಗುಣಾ । ಕರನೆ ಚಿದಂಬರಪುರುಷಾ ॥ ೧೦೦ ॥

ಜಿನಮುಕ್ತಿಗಮನಸಂಧಿ ಸಂಪೂರ್ಣಂ

## ರಾಜ್ಯಪಾಲನಸಂಧಿ

ಒಡವರಾಧಾರ ಬಲ್ಲಿದರ ಮನೋಹರ । ಕಡುಚದುರರ ಮೆಚ್ಚುಕಾರಾ ॥
ತಡವೇನು ಮತಿದೋರು ಪರುಷ ಮುಟ್ಟಿಯು ಪರ್ವ । ಗಡನೆ ನಿರಂಜನಸಿದ್ಧಾ ॥ ೧ ॥

ಜಿನ ಮುಕ್ತಿಗೆಯ್ದಿದ ಮೇಲೆ ಭೂವರನರ । ಮನೆಗಂದು ಬರಿಸಿದ ತನ್ನ ॥
ತನುಜೆಯರೆಲ್ಲರ ಮನ್ನಿಸಿ ಬೀಳ್ಕೊಟ್ಟ । ವಿನಯದಿಂದವರವರೂರ್ಗೆ ॥ ೨ ॥

ಸುಮುಖದಿ ಸುಖದಲ್ಲಿ ಮತ್ತೆ ಕೆಲವು ಕಾಲ । ಗವಿಸಲೊಂದಾನೊಂದು ಪಗಲು ॥
ನಮಿರಾಜವಿನಮಿರಾಜರು ದೀಕ್ಷೆವಡೆದ ಸಂ । ಯಮವಾರ್ತೆ ಬಂದಿತು ನೃಪಗೆ ॥ ೩ ॥

ಉಗುಳ್ದನಾ ಕ್ಷಣವೆ ತಂಬುಲವ ಕೊರಳ ಸೆರೆ । ಬಿಗಿದು ಕಣ್ಣೀರ್ಗಳುಮ್ಮಿದುವು ॥
ಒಗಲೀಯದೊತ್ತಿ ನಿಲ್ಲಿಸಿದನು ಮೈದುನ । ರಗಲೆ ನೋವಹುದು ಸೈರಿಸಿದಾ ॥ ೪ ॥

ಮತ್ತೆ ತನ್ನವಧಿಯಿಂದಾರೈದನಾಗ ತ । ನ್ನತ್ತೆಯರ್ತಂಗಿಯರ್ವೆರಸಿ ॥
ಉತ್ತಮದೀಕ್ಷೆಯ ಮೈದುನರಾಂತುದ । ಚಿತ್ತದಿ ಕಂಡು ಹಾಯೆಂದಾ ॥ ೫ ॥

ಕನಕರಾಜನ ಶಾಂತರಾಜನ ನಿಲಿಸಿ ಮೈ । ದುನರು ದೀಕ್ಷೆಯನಾಂತುದರಿದು ॥
ಬಿನದ ಜಾರಿದರಿಷ್ಟು ನೊಂದನು ತೊರೆದೊಂದು । ಘನತೆಗೆ ಕೂಡೆ ಮೆಚ್ಚಿದನು ॥ ೬ ॥

ನನ್ನ ಸೋದರರದ ಮಾವಂದಿರ ಸುತರಲ್ತೆ । ಭಿನ್ನಸುಖಾರ್ಥದೊಳಿಹರೆ ॥
ನನ್ನಿಂದ ಮುಂಚಿದರವರ್ಗೆ ನಮೋಸ್ತೆಂದು । ಮನ್ನಿಸಿ ನುಡಿದು ಕೈಮುಗಿದಾ ॥ ೭ ॥

ಶ್ರೀಕಚ್ಛಜಿನನಲ್ಲಿ ತಾವು ದೀಕ್ಷಿತರಾದ । ರಾ ಕಾಂತೆಯರಿಗೆ ತಾಯ್ಗಳಿಗೆ ॥
ಜೋಕೆಯೊಳ್ಭುಜಬಲೀಶ್ವರನ ಸಮ್ಮುಖದಿ ದೀ । ಕ್ಷಾಕಾರ್ಯವಾಯ್ತು ಲೇಸೆಂದಾ ॥ ೮ ॥

ಅರಮನೆಗೆದ್ದನಾಗಳೆ ಸುಭದ್ರಾದೇವಿ । ಪಿರಿದು ಶೋಕಿಸುತಿರಲವಳ ॥
ಸುರುಚಿರೋಕ್ತಿಯೊಳು ಸಂತೈಸಿದನಾ ಜಾಣ್ಮೆ । ಭರತೇಶಗೇನೆಂದು ಪೊಸತೆ ॥ ೯ ॥

ಅಳಿಯಂದಿರೆಡೆಗೆ ನಾನಿದ್ದೆನಂಜದಿರಿಯೆಂ । ದೊಳುನುಡಿದೋರಿ ರಾಯಸವಾ ॥
ಕಳುಹಿ ಸಂತೈಸಿ ಸಂತೋಷದಿ ಕಾಲವ । ಕಳೆಯುತಿರ್ದನು ಮಹೋದಾತ್ತಾ ॥ ೧೦ ॥

ಪರಹಿತ ಸ್ವಹಿತದೊಳಾಚರಿಸುತ ರೂಪ್ಯ । ಗಿರಿಯೊಳಂದರುಹವಾಸಗಳಾ ॥
ಪರುಠವಿಸಿದ್ದವಕಿನ್ನು ಮುಂದಪಘಾತ । ಬರಬಾರದಂತೊಂದ ನೆನೆದಾ ॥ ೧೧ ॥

ಮುಂದಿನ್ನು ದಿನದಿನಕಠಿಕಪ್ಪಕಾಲವಾ । ಕುಂದಣರನ್ನದೊಳೆಸೆವ ॥
ಸುಂದರಾಲಯಗಳ್ಗೆ ನರರೆಯ್ದಬಾರದೆಂ । ದೊಂದುತಂತ್ರವ ಕಂಡನೊಡನೆ ॥ ೧೨ ॥

ನಡುಬೆಟ್ಟದಿಂದಿತ್ತ ಕೆಳಗಿರ್ದ ಹಬ್ಬುಗೆ । ಕೆಡುವಂತೆ ಕೀಸಿ ದಂಡದೊಳು ॥
ಕುಡಿಯುರು ಬಿತ್ತುವ ಕೂರಿಗೆಗೊಳಗದಂ । ತೊಡರಿಸಬೇಕೆಂದು ಬಗೆದಾ ॥ ೧೩ ॥
ಕರೆಸಿದನಾಗಳೆ ಮಾಗಧೇಂದ್ರನ ಕೂಡೆ । ಬರಿಸಿಕೊಂಡನು ಭದ್ರಮುಖನಾ ॥
ಹಿರಿಯಪುತ್ರನ ಮುಂದುಮಾಡಿ ಸತ್ಕಾರ್ಯವ । ನೊರೆದು ಬೀಳ್ಕೊಡೆ ಪೋದರವರು ॥ ೧೪ ॥
ದಂಡರತ್ನದಿ ವಿಶ್ವಕರ್ಮನು ವ್ಯಂತರ । ರಂಡಲೆದೊತ್ತಿ ಪರ್ವತವಾ ॥
ಖಂಡಾಗಿ ಕೊರೆದರು ಡಕ್ಕೆಯಂತಾಯ್ತೆಂದು । ಗಿಂಡಿಯಂತಾಯ್ತು ನೋಳ್ಪರಿಗೆ ॥ ೧೫ ॥
ಅಷ್ಟರೊಳ್ಮತ್ತೊಂದು ಕುಶಲವ ಯುವರಾಜ । ಶಿಷ್ಟವಾಗಿಯೆ ಕಂಡು ಗಿರಿಯ ॥
ಅಷ್ಟದಿಕ್ಕಿನೊಳಷ್ಟಪಾದಗಳಂತೆ ನಿ । ವೇಶ್ಶಿಸೆಂದನು ಭದ್ರಮುಖಗೆ ॥ ೧೬ ॥
ಕಂಡಿಂದ ಕೆಳಗೆಂಟುಕಂಭವ ಕಾಲಂತೆ । ಕಂಡರಿಸಿದನೊಡನವನು ॥
ಕಂಡರೊಂದಾಯತವಾಗಿದ್ದುದದಕೊಲ್ದು । ಕೊಂಡಾಡಿದರು ನೃಪಸುತನಾ ॥ ೧೭ ॥
ಕಷ್ಟಕಾಲದ ನರರೆರಗದಂತಾಯ್ತೊಮ್ಮೆ । ದೃಷ್ಟಿಸೆ ರಜತಾದ್ರಿಯಾಗಿ ॥
ಅಷ್ಟಪಾದದ ಶೈಲವಾಯ್ತು ಹೋ ಯುವರಾಜ । ಸೃಷ್ಟಿ ಸೋಜಿಗವೆಂದರೆಲ್ಲ ॥ ೧೮ ॥
ಕೊರೆದಾಗ ಚೊಕ್ಕ ಬೆಳ್ಳಿಯೊಳೊಂದು ಕೋಟೆಯ । ಹೊರವಲಯದಿ ನಿರ್ಮಿಸೆಂದು ॥
ಅರಿದರ್ಕಕೀರ್ತಿರಾಜೇಂದ್ರ ಸೂಚಿಸೆ ಮಯ । ನೆರಕವ ಮಾಡಿದನೊಡನೆ ॥ ೧೯ ॥
ಕಾರ್ಯವ ಮುಗಿದು ಬಂದವನೀಶಗುಸುರಲಾ । ಶ್ಚರ್ಯವಾಯ್ತೆಂದಪ್ಪಿ ಮಗನಾ ॥
ಶೌರ್ಯಗೈದಿರಿಯೆಂಬ ಮಯಗೆ ಮಾಗಧಗೆ ತಾ । ತ್ಪರ್ಯದಿಂದಿತ್ತ ಮನ್ನಣೆಯಾ ॥ ೨೦ ॥
ನಮ್ಮ ಕಾಲದೊಳು ಪೂಜಕರು ವಿಮಾನದ । ಸೊಮ್ಮಿನೊಳೇರಿ ಪೂಜಿಸಲಿ ॥
ತಮ್ಮ ತಾವೆ ಮತ್ತೆ ಖಚರರರ್ಚಿಪರೆಮ । ಗುಮ್ಮಳವೇನಲ್ಲಿಗೆಂದಾ ॥ ೨೧ ॥
ಸಲೆ ಜಿನಾಲಯರಕ್ಷೆ ಯುವರಾಜನಿಂದಾಯ್ತು । ಕೆಳಗಣದ್ರಿಯ ಬೆಳ್ಳಿಗಿನ್ನು ॥
ಕಲಹವಮಾಡುವರೆಂದು ಸಗರಪುತ್ರರು ಮುಂದೆ । ಜಲಖಾತದೆಗೆವರೆಂದೊರೆದಾ ॥ ೨೨ ॥
ವ್ಯಂತರಾಗ್ರಣಿ ಕಳುಹಿಸಿಕೊಂಡು ಪೋದನಾ । ತ್ಯಾಂತರಾಗ್ರಣಿ ವಿನೀತೆಯೊಳು ॥
ಕುಂತುತಟ್ಟದೆ ರಾಜ್ಯವಾಳುತ ಸೌಖ್ಯದಿ । ಶ್ರಾಂತಿಯೊಳಿರ್ದನೇನೆಂಬೆ ॥ ೨೩ ॥

ಧರೆಯ ಚಿಂತೆಯ ಮಂತ್ರಿರತ್ನ ತಾಳ್ದಿಹನೆಲ್ಲ । ಪರಿವಾರಕಿಹನಯೋಧ್ಯಾಂಕಾ ॥
ಪುರದ ತಳಾರಿಕೆಗಿಹನು ಮಾಕಾಳನು । ದೊರೆಯಿರ್ದನಾತ್ಮಯೋಗದೊಳು ॥ ೨೪ ॥
ಅರಸುಮಕ್ಕಳ ನೃಪರಾರೈಕೆ ಯುವರಾಜ । ಗಿರುತಿಹುದಖಿಳವ್ಯಂತರರ ॥
ಪರಿಮಿತದಾರೈಕೆ ಮಾಗಧಗಿಹುದು ಭೂ । ವರನಿಹನಾತ್ಮಯೋಗದೊಳು ॥ ೨೫ ॥
ಆನೆ ಕುದುರೆಯ ಶಾಲೆಗೆ ಗೃಹಸೌಧಸಂ । ಧಾನಕಿಹನು ವಿಶ್ವಕರ್ಮ ॥
ಸ್ನಾನಭೋಜನಯತ್ನ ಗೃಹಪತಿಗಿಹುದಾತ । ತಾನಿರ್ದನಾತ್ಮಯೋಗದೊಳು ॥ ೨೬ ॥

ಭರತಪಾದುಕರು ಬಾಗಿಲ ಹೊರಗಿರಲೊಳ । ಗಿರೆ ಶೂರವೀರರಾ ನೃಪತಿ ॥
ತರುಣಿಯರೊಡನೆ ಲೀಲಾನುಯೋಗದೊಳು ಹೊ । ನ್ನರಮನೆಯೊಳಗೆ ತಾನಿಹನು ॥ ೨೭ ॥
ಅರಿಗಳಿಲ್ಲೆನಿಸಿ ಸೌನಂದಕಖಡ್ಗ ಸು । ದರುಶನಚಕ್ರವ್ಪೋಲ್ಯೆಸೆ ॥
ಗಿರಿಯ ಚೂರ್ಣಿಸುವ ದಂಡಾಯುಧವಿರೆ ನಿರಂ । ತರ ನಿರಾತಂಕದೊಳಿಹನು ॥ ೨೮ ॥
ದಂಡಿನೊಳ್ನೆಳಗೂ ಮೇಲೆಯ್ದಿದ ಬಾಧೆಯ । ಖಂಡಿಸಿ ಛತ್ರಚರ್ಮಗಳು ॥
ದಂಡನೆಲ್ಲವ ಕಾವುವೆನಲಾತ ಪುರದೊಳ । ಖಂಡಿತಲೀಲೆಯೊಳಿರನೆ ॥ ೨೯ ॥
ಸ್ಪೃಹೆಮಾಡಿದರ್ಥವ ಕೊಡುವ ಚಿಂತಾಮಣಿ । ಮಹಿತಾರ್ಥನವನಿಧಿಯುಂಟು ॥
ಗುಹೆಯಲ್ಲಿ ಪ್ರಭೆದೋರ್ಪ ಕಾಕಿಣಿಯುಂಟೆನ್ನ । ಗೃಹದೊಳಿರನೆ ಸ[illegible]ದಲ್ಲಿ ॥ ೩೦ ॥
ಈರಾರುಗಾವುದ ನೆಗೆವಶ್ವವುಂಟತಿ । ಗೌರವಗಜರತ್ನವುಂಟು ॥
ಪೂರಿತೇಂದ್ರಿಯಸುಖವೀವ ಸ್ತ್ರೀರತ್ನವುಂ । ಟಾ ರಾಯನಾನಂದಕೆಣೆಯೆ ॥ ೩೧ ॥
ಅಸಿ ದಂಡ ಚಕ್ರ ಕಾಕಿಣಿ ಛತ್ರ ಚರ್ಮ ರಾ । ಜಿಸುವ ಚಿಂತಾಮಣಿಯೆಂದು ॥
ಪೆಸರಾದ ನಿರ್ಜೀವರತ್ನಗಳೇಳು ಮಾ । ಮಸಕವೆತ್ತಿಹುವವಗಿದಿರೆ ॥ ೩೨ ॥
ಮಯ ಮಂತ್ರಿ ಬಲಪತಿ ಗೃಹಪತಿ ಸ್ತ್ರೀರತ್ನ । ಹಯಗಜರತ್ನವೆಂಜೇಳು ॥
ನಿಯಮಿತಜೀವರತ್ನಗಳುಂಟು ಚಕ್ರವ । ರ್ತಿಯ ಭಾಗ್ಯಕಾವುದು ಸಾಟಿ ॥ ೩೩ ॥
ಪದಿನಾಲ್ಕುರತ್ನವುಂಟೊಂಭತ್ತುನಿಧಿಯುಂಟು । ವಿದಿತಮಹಾಸೇನೆಯುಂಟು ॥
ಇದಿರಹರಾರವಗರಿದೇನು ಪಿರಿದೇನು । ಸದಮಲಾನಂದದೊಳಿರ್ದಾ ॥ ೩೪ ॥
ತ್ರಿಸಮುದ್ರ ಹಿಮಶೈಲದೊಳಗಾದ ಧಾರಿಣಿ । ಬೆಸಕೆಯ್ವುತಿಹುದಡಿಗಡಿಗೆ ॥
ಅಸಮವೀರದ ಗಣಬದ್ಧರೋಲೈಪರಾ । ಸುಸುಖಿಯಿದ್ದನು ವಿಲಾಸದೊಳು ॥ ೩೫ ॥
ಪರಬಾಧೆ ತನಗಿಲ್ಲ ತಾನಿನ್ನು ದಂಡೆಯ್ದಿ । ಪರರ ಸಾಧಿಪ ಚಿಂತೆಯಿಲ್ಲ ॥
ಪರವಿದು ತನ್ನದಿದೆಂದರಿದಾತ್ಮತ । ತ್ಪರನಾಗಿ ಭೋಗಿಸುತಿರ್ದಾ ॥ ೩೬ ॥

ಉಯ್ಯಲೋಕುಳಿ ನಿಚ್ಚ ಹಬ್ಬಮದುವೆ ಜಾತ್ರೆ । ಒಯ್ಯನೆ ಗಲಭೆ ರಂಜಿಪುದು ॥
ಅಯ್ಯೊ ಹಾವಳಿ ಕಿಚ್ಚು ಬರ ಸೂರೆ ಮೊರೆಯೆಂಬ । ಹುಯ್ಯಲಿಲ್ಲವನ ದೇಶದೊಳು ॥ ೩೭ ॥
ಮುಂದಲೆವಿಡಿವುದು ರತಿಯ ನಲ್ಲರೊಳುಂಟು । ಸಂದ ಸಜ್ಜನರೊಳಗಿಲ್ಲ ॥
ಕೊಂದಾಟವೆಂಬುದು ಪಗಡೆಯೊಳುಂಟಲ್ಲ । ದಂದಿಲ್ಲವವನ ರಾಜ್ಯದೊಳು ॥ ೩೮ ॥
ನುಡಿತಪ್ಪು ನಡೆತಪ್ಪು ವಿರಹಿಗಳೊಳು ದಂಡ । ವಿಡಿವುದು ವೃದ್ಧದೇಹದೊಳು ॥
ಜಡತೆಯೆಂಬುದು ಸುರತಾಂತ್ಯನಿದ್ರೆಯೊಳಲ್ಲ । ದೊಡರಿಸಲಿಲ್ಲ ಮಿಕ್ಕರೊಳು ॥ ೩೯ ॥
ಊರೂರು ಪುರಪುರ ತೆರಪೆಯ್ದುವೆನೆ ಪ್ರಜೆ । ವಾರಿಧಿಮುಟ್ಟ ತುಂಬಿಹುದು ॥
ಚಾರು ಶಾಸ್ತ್ರಾಭ್ಯಾಸ ಘೋರೆನೆ ದ್ವಿಜರಗ್ರ । ಹಾರವಿಹುವು ಸಿರಿತುಂಬಿ ॥ ೪೦ ॥

ಗಂಧಕುಟಿಗಳು ಚಾರಣರಡಿಗಡಿಗೆ ಸಂ। ಬಂಧಿಸುತಿಹರಲ್ಲಿಗಲ್ಲಿ ॥
ಗಂಧೇಭಜಾತ್ಯಶ್ವವಲ್ಲಲ್ಲಿ ಹುಟ್ಟುವ। ಸುಂಧರೆ ಸುಲಭವಾಗಿಹುದು ॥ ೪೧ ॥

ಅಲ್ಲಲ್ಲಿ ರತ್ನ ಹುಟ್ಟಿಹುವು ಹೂಳಿದ ನಿಧಿ। ಪಲ್ಲುಗಿರಿದು ತೋರುತಿಹುವು ॥
ಅಲ್ಲದೆ ಕೊನೆಯಂತೆ ಚಿನ್ನ ಹುಟ್ಟಿಹುದೇನ। ಸೊಲ್ಲಿಪೆನವನ ಕಾಲದೊಳು ॥ ೪೨ ॥

ಕಾಡೆಲ್ಲ ಶ್ರೀಗಂಧವೃಕ್ಷ ಕಪ್ಪುರವಾಳೆ। ಕೂಡೆ ಕತ್ತುರಿಮಿಗದೊಡ್ಡು ॥
ನಾಡೆಲ್ಲ ತ್ಯಾಗಿಭೋಗಿಗಳ ಸಂಪದದಲ್ಲಿ। ಕೋಡಿವರಿದುದೇನನೆಂಬೆ ॥ ೪೩ ॥

ಕೊಡವಾಲ ಕರೆವ ಧೇನುಗಳು ನೋಳ್ಪರ ಕಣ್ಣ। ಕೊಡದ ಚೆಲ್ವಿನ ಲತಾಂಗಿಯರು ॥
ಬಿಡುಗಣ್ಣುವೆಣ್ಣ ತಣ್ಣಗೆ ಮಾಳ್ಪ ಪುರುಷರಿಂ। ದಿಡಿಕಿರಿದಿಹುದು ನಾಡವನ ॥ ೪೪ ॥

ನೀಲಾಬ್ಜ ತಾವರೆ ನೆರೆದ ನೀರ್ಗೆರೆ ಗಂಧ। ಶಾಲಿ ಜೋಂತೊಲೆದ ಗದ್ದೆಗಳು ॥
ಗಾಳಿ ಘಮ್ಮೆಂಬ ನಾನಾವನಗಳು ರಸ। ದಾಳಿಯು ಮಲೆ ವಿರಾಜಿಪುದು ॥ ೪೫ ॥

ಊರೂರೊಳಮೃತಾನ್ನ ಛತ್ರ ದಾರಿಯೊಳೆಳೆ। ನೀರು ಸಕ್ಕರೆಯುರವಟಿಗೆ ॥
ನಾರ ತಿಥಿಗೆ ನೋಂಪು ಮುನಿಭುಕ್ತಿ ವಿಪ್ರಸ। ತ್ಕಾರ ಭೋರೆನಲೊಪ್ಪುತಿಹುವು ॥ ೪೬ ॥

ಸುರರು ವ್ಯಂತರರಿಂದು ಕಲಿಯುಗವಾಗಿ ಗೋ। ಚರಿಸರು ನರರ ಕಂಗಳಿಗೆ ॥
ಭರತೇಶನಾಳ್ವಂದು ಕೃತಯುಗ ಸುರರಲ್ಲಿ। ಬೆರಸಿಹರೇನೆಂಬೆ ಸಿರಿಯಾ ॥ ೪೭ ॥

ಜ್ಞಾನಕಲ್ಯಾಣಕೆ ನಿರ್ವಾಣಕಲ್ಯಾಣ। ಕೀ ನೆಲಕಮರರೆಯ್ತರಲು ॥
ಮಾನವರೀಕ್ಷಿಪರವರೊಡನರ್ಚಿಪ। ರೇನೆಂಬೆನಂದಿನುತ್ಸವವಾ ॥ ೪೮ ॥

ಧರೆಗೆ ಸ್ವರ್ಗಕೆ ಸುರಸೋಪತಿ ನಡೆವುದು। ಸಿರಿ ಸರ್ವದೇಶತುಂಬಿಹುದು ॥
ಧರೆಯನಾಳುವ ಚಿಂತೆ ತನಗಿಲ್ಲದಿಪ್ಪನಾ। ಭರತೇಶನೇನ ಬಣ್ಣಿಪೆನು ॥ ೪೯ ॥

ದೇಗುಲ ಭಾರವ ಗೋಡೆ ಕಂಭದ ಮಂಡೆ। ಗಾಗಿಸಿ ದೇವರಿಪ್ಪಂತೆ ॥
ಭಾಗಿಸಿ ಧರೆಯ ದಂದುಗವನಾಪ್ತರಿಗೆ ಸಂ। ಯೋಗಿಸಿ ಸುಖದಿ ತಾನಿಹನು ॥ ೫೦ ॥

ಹೊರಗೆ ಪಾಯ್ಪುಳವನಾಳ್ವನೊಂದಾಟದ। ಮೆರಹ ನೋಳ್ಪಂತೆ ಮತ್ತೊಳಗೆ ॥
ತರಿಮಿಂಡಿಯರೊಳರ್ತಿಮಾಳ್ಪನಿಷ್ಟರು ಕರೆ। ದಿರಿಸಿದೌತಣವನುಂಬಂತೆ ॥ ೫೧ ॥

ಜನವನಾಳ್ವನು ತಪಸಿ ತನ್ನಯ ತಪೋ। ವನವನಾಳ್ವ ಭಾವದೊಳು ॥
ತನುಜರನಾಳ್ವುತಿಹನು ಶಿಷ್ಯರ ನೋಳ್ಪ। ಮುನಿಯಂತೆ ವಿಜ್ಞಾನಿಯಾಗಿ ॥ ೫೨ ॥

ಭಂಡಾರಬೊಕ್ಕಸಮನೆಗಳ ನೋಳ್ಪನಾ। ಭಂಡಾರಿಗಳು ನೋಡುವಂತೆ ॥
ಕಂಡವರೆಲ್ಲರೀ ನೃಪನದೆಂಬರು ಬೇರು। ಗಂಡೆಣಿಸುವನು ತಾನೊಳಗೆ ॥ ೫೩ ॥

ಷಡುಖಂಡಪದವ ನಿಟ್ಟಿಸುವನು ಪುಣ್ಯ ಸಂ। ಗಡಿಸೆ ಜಾತ್ರೆಯ ನೋಡುವಂತೆ ॥
ಅಡುಗೂಲಿಮನೆಯಲ್ಲಿ ಮಿಂದುಂಬನಂತೆ ಬೇ। ರ್ಪಡಿ ನೋಡಿ ಭೋಗಿಸುತಿರ್ದಾ ॥ ೫೪ ॥

ಧರಿಸಿದ ದೇಹವ ಬೇರೆಂಬನವನಿನ್ನು । ಪರವಸ್ತುರತಿಗೆ ಸಿಕ್ಕುವನೆ ॥
ಪರಮಾತ್ಮರಸಿಕನ ಬಗೆಯನಾರ್ಬಲ್ಲರಂ । ತಿರುತಿರ್ದನಾ ಭಾವಿತಾತ್ಮಾ ॥ ೫೫ ॥

ಪುಣ್ಯಫಲವನುಂಡು ತೀರಿಸುತಾತ್ಮಲಾ । ವಣ್ಯವನೊಳಗೆ ನಿಟ್ಟಿಸುತ ॥
ಗಣ್ಯವೆ ಮುಕ್ತಿಯೆಂದೆಂಬಭಿಪ್ರಾಯವ । ರೇಣ್ಯದೊಳಿರ್ದನಾ ಧನ್ಯಾ ॥ ೫೬ ॥

ಹೊತ್ತನರಿದು ಹೊಲಬರಿದೆದೆಯರಿದು ತೊಂ । ಭತ್ತಾರುಸಾವಿರಪೆಣ್ಣಾ ॥
ಚಿತ್ತಜಕೇಳಿಯೊಳ್ತಣಿಪಿ ತಣಿಯುತ ಸು । ಚಿತ್ತದೊಳಿರ್ದನಾ ಕುಶಲಾ ॥ ೫೭ ॥

ಖಗಸತಿಯರು ಮ್ಲೇಚ್ಛಸತಿಯರಾರ್ಯೋರ್ವಿಯ । ಮುಗುದೆಯರೆಂಬ ಮೂದೆರದಿ ॥
ಬಗೆಗೆ ಮೂವತ್ತೆರಳ್ಸಾಸಿರವೆನೆ ಮೂರು । ಬಗೆಗೂಡಿಹುದು ರಾಣಿವಾಸಾ ॥ ೫೮ ॥

ಎಲ್ಲರಿಗೊಂದೊಂದು ಶಿಶುವುಂಟು ಪಟ್ಟದ । ವಲ್ಲಭೆಯೊಬ್ಬಳಿಗಿಲ್ಲ ॥
ದಳ್ಳಸವಾಗದು ತನುವದರಿಂದಾಕೆ । ಯಲ್ಲಿ ಮಹಾಸುಖ ತನಗೆ ॥ ೫೯ ॥

ಯೋನಿಗಳೆಲ್ಲರೊಳುದಯವುಂಟುರೆ ಶಂಖ । ಯೋನಿಯೊಳುತ್ಪತ್ತಿಯಿಲ್ಲ ॥
ಆ ನೀರೆ ಶಂಖಯೋನಿಕೆಯಲ್ತೆ ಹೆರುಗೆಯ । ಬೇನೆಬಿಟ್ಟಿಹಳದು ಲೇಸು ॥ ೬೦ ॥

ಅರಸಿಯರೆಲ್ಲರೊಳೊಂದಿ ಮತ್ತಾಕೆಯೊ । ಳ್ನೆರೆದಲ್ಲದವಗಿಲ್ಲ ತೃಪ್ತಿ ॥
ಧರೆಯ ಸಂಪತ್ತೊಂದು ತೂಕವಂತಾ ಮನೋ । ಹರಿಯೊಂದು ತೂಕವಾ ನೃಪಗೆ ॥ ೬೧ ॥

ನೆರೆದಾರುಖಂಡದ ಪುರುಷರಗ್ರಣಿಯಾತ । ತರುಣಿಯರಗ್ರಣಿಯಾಕೆ ॥
ಸುರಪಗೆ ಶಚಿ ಫಣಿಪತಿಗೆ ಪದ್ಮಾವತಿ । ದೊರಕಿದಂತಿರ್ದಳಾ ನೃಪಗೆ ॥ ೬೨ ॥

ಅವಳು ಮುಂತಾದ ರಾಜಾಂಗನೆಯರೊಳನು । ಭವಿಸುತಿಹನು ಬಹುಕಾಲಾ ॥
ಯುವತಿಯರ್ಗಿನಿಸು ಮೈಸಡಲುವುದವಗೆ ಪ್ರಾ । ಯವೆ ತೋರುತಿಹುದು ವಿಚಿತ್ರಾ ॥ ೬೩ ॥

ಪವನಾಭ್ಯಾಸ ಯೋಗಾಭ್ಯಾಸ ಧ್ಯಾನಮಾ । ರ್ಗವನರಿದಾಚರಿಪರಿಗೆ ॥
ಛವಿ ತಗ್ಗದಂಗ ಜಗ್ಗದು ರೋಗ ಹೊದ್ದದು । ನವಯೌವನವೆ ವಿರಾಜಿಪುದು ॥ ೬೪ ॥

ಪ್ರಾಣಾಪಾನವಾಯುವ ಹುದುಗುವನು ಕ । ಟ್ಟಾಣಿಯೊಲ್ಬಿಂದು ನಿಂದಿಹುದು ॥
ವೀಣಾನಾದವಿಹುದು ನಿಚ್ಚ ಹಂಸನ । ಕಾಣುವನವನಿಗದರಿದೆ ॥ ೬೫ ॥

ಒಪ್ಪುವ ಧ್ಯಾನಯೋಗಾನಿಲಬಲದಿಂದ । ಕಪ್ಪಿನ ಮುರಿಮೀಸೆ ಮೆರೆಯೆ ॥
ಇಪ್ಪತ್ತೇಳೆಂಟು ವರಿಸದ ಜವ್ವನ । ತಪ್ಪದಿರ್ದನು ಬಹುಕಾಲಾ ॥ ೬೬ ॥

ನಸುಮುಪ್ಪು ದೋರಿದಂಗನೆಯರ್ಗೆ ವ್ರತಗೈಸಿ । ಬಸದಿಯಜ್ಜಿಯರೊಳಿಂಬಿಡುತ ॥
ಹೊಸಹರೆಯದ ಸತಿಯರೊಳರ್ತಿಮಾಡುತ । ರಸಿಕರಾಜೇಂದ್ರ ರಾಜಿಪನು ॥ ೬೭ ॥

ಹಳೆಯ ಪಂಚಾರವ ತೆಗೆದಡಿಗಡಿಗೆ ಮ । ತ್ತೆಳೆಗುದುರೆಯ ಕಟ್ಟುವಂತೆ ॥
ಫಳಿತನಾರಿಯರ ಜಾರಿಸುತೆಳೆವೆಣ್ಣ ಮಂ । ಗಳವಾಗುತಿರ್ದನಾ ಸೊಬಗಾ ॥ ೬೮ ॥
ಪತಿಯ ಪ್ರಾಯವ ತಮ್ಮ ಮುಪ್ಪನೀಕ್ಷಿಸಿ ನಾಣ್ಚಿ । ಚತುರೆಯರ್ಬಸದಿಗೆಯ್ದುವರು ॥
ಕ್ಷಿತಿಪಗೆ ತಕ್ಕ ಜವ್ವನೆಯರ ತಂದು ಸಂ । ಗತಿಗೈವರೊಡನೆ ಭೂಭುಜರು ॥ ೬೯ ॥
ವ್ರತವನಾಂತಪೆವೆಂಬ ಪೆಂಡಿರ್ಗೆ ಲೇಸೆಂದು । ಸ್ಮಿತಮುಖನಾಗಿ ಬೀಳ್ಕೊಡುವಾ ॥
ರತಿಗೆ ತಕ್ಕೆಳೆವೆಣ್ಣ ತಂದೀವರದಕೂ ಭೂ । ಪತಿ ನಸುನಗುತ ಕೈವಿಡಿವಾ ॥ ೭೦ ॥
ಜರತಿಯರ್ತಾವುಸುರದೆ ಜಾರೆ ನವ್ಯಸೌಂ । ದರಿಯರೊಡನೆ ಸಾರೆ ಕಂಡು ॥
ಗುರುಹಂಸನಾಥನ ಮಹಿಮೆಯೆಯೆಂದೊಲ್ದು । ಸ್ಮರಿಸುತ ಕೈಕೊಳುತಿಹನು ॥ ೭೧ ॥
ಚೊಕ್ಕವೆಣ್ಣಲ್ಲಲ್ಲಿ ಪುಟ್ಟುವುವಾ ಪೆಣ್ಣ । ಪಕ್ಕದವರೆ ನೋಡಿ ನೃಪಗೆ ॥
ತಕ್ಕವೆಂದರ್ತಿಯೊಳ್ತಂದೀಯೆ ಹರೆಹಂದ । ಲಿಕ್ಕಿ ಮದುವೆಯಾಗುತಿಹನು ॥ ೭೨ ॥
ದೆಸೆದೆಸೆಯಿಂದ ಪೆಂಗಳು ಬರುತಿಹರೊಲ್ದು । ಹಸೆನಿಲುತಿಹನಡಿಗಡಿಗೆ ॥
ಹೊಸಮದವನಿಗನಾಗಿರ್ದನು ದಿನದಿನ । ಕುಸುಮರ್ದೇನವನ ವೈಭವವಾ ॥ ೭೩ ॥
ಜಾರುತಿಹುದು ಹಳೆವೆಣ್ಣಳೆವೆಣ್ಣೊಡ । ನೇರುತಿಹುದು ಮಂಚಕವನ ॥
ಕೀರಿ ಲೆಕ್ಕಿಸಲೆಡೆವಿಡದನುದಿನ ತೊಂಭ । ತ್ತಾರುಸಾವಿರ ತಪ್ಪದಿಹುದು ॥ ೭೪ ॥
ಪುರುಷರೊಡನೆ ದೀಕ್ಷೆಗೊಂಬ ಪುತ್ರಿಯರು ಪು । ತ್ರರು ದೀಕ್ಷೆಗೆಯ್ದುವರುಳಿದು ॥
ಧರೆಯ ಸಾಧಿಸಿದ ಮೇಲಿಹುದು ಸಂತಾನವೊಂ । ದರೆತೊಂಭತ್ತಾರುಸಹಸ್ರಾ ॥ ೭೫ ॥
ಪೊರೆಯ ಪೆಣ್ಣಂತಲ್ಲ ಪಟ್ಟದ ರಾಣಿ ಖೇ । ಚರಿ ಬಂಜೆ ಸ್ತ್ರೀರತ್ನವಲ್ತೆ ॥
ನರೆತೆರೆಬಡದೆ ಮಧ್ಯಮೆಯೆಂಬ ಭಾವ ಪೈ । ಸರಿಸದಿರ್ದಳು ಬಹುಕಾಲಾ ॥ ೭೬ ॥
ಸೊಕ್ಕುಜವ್ವನೆಯರ ಮೊತ್ತದೊಳಾತುರ । ಮಿಕ್ಕರ್ತಿ ಬಂದಂತೆ ನೃಪತಿ ॥
ಚೊಕ್ಕನಾನಂದಿಸುತಿರ್ದನು ಮದಗಜ । ಪೊಕ್ಕು ನೀರಾಟವಾಡುವೊಲು ॥ ೭೭ ॥
ಶೃಂಗಾರ ಸೊಬಗಿಂದ ಬಗೆಬಗೆಯಾದಚ್ಚ । ವೆಂಗಳೊಳಾ ರಾಜಮೋಹಿ ॥
ಸಂಗಸಂದಿರ್ದನು ಪೂದೋಟದೊಳು ಮತ್ತ । ಭೃಂಗವಾನಂದಿಸುವಂತೆ ॥ ೭೮ ॥
ಇಂಚರಕಿಂಚರವೊಳುನೋಟಕೊಳುನೋಟ । ಸಂಚಿಗೆ ಸಂಚಿದೆದಟ್ಟಿ ॥
ಮಿಂಚುವೆಂಗಳೊಳಿರ್ದನಂಚೆವೆಂಗಳೊಳರ । ಸಂಚೆ ಲೀಲೆಯ ಮಾಡುವಂತೆ ॥ ೭೯ ॥
ಸೋಂಕಲೊಡನೆ ಸುದತಿಯರೆದೆಗುಟ್ಟ ಕ । ಲಂಕಿ ಸೋಲದಿ ಜಿನುಗಿಸುವಾ ॥
ಭೋಂಕನೆ ಮೂರ್ಛೆದಟ್ಟಿಸುವನಾನಂದ ತು । ಳುಂಕಲೆಚ್ಚರಿಸುವನೊಡನೆ ॥ ೮೦ ॥
ಬಗೆಬಗೆಯಾದ ಪೆಂಗಳನರಿದೆಲ್ಲರಿ । ಚ್ಛೆಗೆ ಸಂದು ರಮಿಸಿ ಮತ್ತವರ ॥
ತೆಗೆದು ತನ್ನಿಚ್ಛೆಗೆ ತಂದು ಮೋಹಿಸುವನೇಂ । ಸುಗುಣನೊ ಭರತರಾಜೇಂದ್ರಾ ॥ ೮೧ ॥

ಸಾಲುವೆಂಗಳನೊನ್ನೆ ಹಲವು ರೂಪಾಂತನು । ಕೂಲಸಂಭೋಗಲೀಲೆಯೊಳು ॥
ಓಲಾಡಿಪಾಗ ಪೆಂಗಳಿಗೆ ಮೋಹನದಿಂದ್ರ । ಜಾಲವಾಗಿರ್ದನಾ ಮೋಹಿ ॥ ೮೨ ॥

ನೇರಾಣಿಬೊಂಬೆಯಂತೆಸೆವ ನೀರೆಯರ ಶ । ರೀರಸಂಪರ್ಕಸೌಖ್ಯದೊಳು ॥
ಧಾರಿಣಿಗಗ್ಗದ ಪುಣ್ಯಫಲವನುಂಡು । ತೀರಿಸುತಿರ್ದನಾ ಭೋಗಿ ॥ ೮೩ ॥

ಭೂರಿದೇಶದ ಪರಿಸೆಯು ಪೂಜೆಗೊಂಬ ದೇ । ಹಾರದಂತಖಿಳನಾರಿಯರು ॥
ಸಾರಿ ಸಂಸರ್ಗಪೂಜೆಯನನುಗೊಳಿಸೆ ಮು । ತ್ತಾ ರಾಯು ಕೈಕೊಳುತಿರ್ದಾ ॥ ೮೪ ॥

ಭಾರ್ಯೆಸಿ ಬೆಳೆದೊಂದು ಕುರುವನತ್ತಿತ್ತೊತ್ತಿ । ಧೀರನೊಬ್ಬನು ಸೋರಿಪಂತೆ ॥
ನಾರಿಯರೊಡನಾಡಿ ಪುಂವೇದಕರ್ಮವ । ಸೋರಿಸುತಿರ್ದನಾ ಚದುರಾ ॥ ೮೫ ॥

ಸಾಧನೆಮಾಡಿ ವೈಯಲಸಿಕೆಯುಳಿದು ವಿ । ಶೋಧಿಯೊಳಿಪ್ಪವನಂತೆ ॥
ಮಾಧುರ್ಯವಚನೆಯರೊಡನಾಡಿ ಹಂಸಸ । ಮಾಧಿಯೊಳಿರ್ದನಾ ಜ್ಞಾನಿ ॥ ೮೬ ॥

ಭೇದವಿಜ್ಞಾನಿಯು ಸುಖವೆಂಬುದೆಲ್ಲವಾ । ಪಾದಿತಕರ್ಮನಿರ್ಜರಣೆ ॥
ಓದಿಗೆ ಕಾಣಿಸಿಕೊಳ್ಳದ ಕಲೆ ಸ್ವಸಂ । ವೇದನಾಗಮ್ಯವಾಗಿಹುದು ॥ ೮೭ ॥

ಮೊಲೆಯು ಮೇಲಿರ್ದ ಯೋಗಿಗಳುಂಟು ಬೆಟ್ಟದ । ಶಿಲೆಯು ಮೇಲಿಹ ಮೋಹಿಯುಂಟು ॥
ಲಲಿತಾತ್ಮಯೋಗದ ಶಕ್ತಿಯ ಬಲ್ಲರಾ । ರ್ಗಲಭೆಯು ಮಾತೇನು ಸಾಕು ॥ ೮೮ ॥

ಸರಸಿಜಾಕ್ಷಿಯರೊಡನರ್ತಿಮಾಡುತ ಮೂರು । ವರೆಕೋಟಿ ಬಂಧುವರ್ಗವನು ॥
ಹರುಷವೇರಿಸುತ ಷಟ್ಖಂಡ ಜೀಯೆನೆ ಚಕ್ರ । ಧರನಿರ್ದನೊಲಿದಯೋಧ್ಯೆಯೊಳು ॥ ೮೯ ॥

ಆಲಿಯೊಳವನಿಯ ನೋಡುತ ಜ್ಞಾನವೆಂ । ಬಾಲಿಯೊಳಮಲಹಂಸನನು ॥
ಆಲಿಸುತಾ ರಾಯನಿರ್ದನಿಂತಿದು **ರಾಜ್ಯ । ಪಾಲನಸಂಧಿ** ಸುಗಂಧಿ ॥ ೯೦ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೧ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೨ ॥

ಅಸಮಸುಜ್ಞಾನರಾಜ್ಯವ ದಶದಿಕ್ಕು ಪೂ । ರಿಸಲಾಳುತೆನ್ನ ಚಿತ್ತದೊಳು ॥
ಪೊಸಕಾಂತಿ ರೂಪಾಗಿ ರಾಜಿಸುತಿರು ನಿರ । ಲಸನೆ ಚಿದಂಬರಪುರುಷಾ ॥ ೯೩ ॥

ರಾಜ್ಯಪಾಲನಸಂಧಿ ಸಂಪೂರ್ಣಂ

## ಭರತೇಶನಿರ್ವೇಗಸಂಧಿ

ಶ್ರೀವರ ದೇವ ಕಾವರ ದೇವ ನಿಜಭವ್ಯ । ಜೀವರ ದೇವ ಮನ್ನತಿಗೆ ॥
ಪೀವರದೇವ ಸನ್ನುತಿದೋರು ದೇವರ । ದೇವ ನಿರಂಜನಸಿದ್ಧಾ ॥ ೧ ॥

ಕೀರ್ತಿಗೆ ತ್ರಿಭುವನ ಸಾಲದು ತೇಜಕೆ । ಮಾರ್ತಾಂಡ ಸಾಟಿಯುಸ್ಲೆಂದು ॥
ಕೀರ್ತಿಸೆ ನರಸುರರಾಳುತಿರ್ದನು ಚಕ್ರ । ವರ್ತಿ ಭೂತಳವನೇನೆಂಬೆ ॥ ೨ ॥

ಚದುರಂಗದೊಳಗಲ್ಲದವನಿಗೆ ಕಾಳಗ । ಕಿದಿರಹರಿಲ್ಲ ಲೋಕದೊಳು ॥
ಉದಧಿ ತಡಿಯನೊತ್ತಿ ಜಾರ್ವುದಲ್ಲದೆ ನಾಡ । ಮದದೊಳೊತ್ತುವ ದಕ್ಷನಿಲ್ಲ ॥ ೩ ॥

ವೀರಕೆ ಮೊದಲು ಭೂಪರು ಸೋತರೊಡನೆ ಶೃಂ । ಗಾರಕುದಾರಕೆ ಸೋತು ॥
ವೈರವಾಸನೆಯುಳಿದರ್ತಿಯೊಳೋಲೈಸ । ರಾ ರಾಜರತ್ನಶೇಖರನಾ ॥ ೪ ॥

ಚೆಲುವಿಕೆಗವನ ಶೃಂಗಾರಕೆ ಜಾಣ್ಮೆಗೆ । ವಿಲಸಿತಗಂಭೀರಗುಣಕೆ ॥
ತಳಲೋಕ ನರಲೋಕ ಸುರಲೋಕದೊಳು ಮೆಚ್ಚಿ । ತಲೆದೂಗದವರೊಬ್ಬರಿಲ್ಲ ॥ ೫ ॥

ಪಂಚಸಂಪದವೊಳಗಿರುತಿರೆ ಪೊರಗೆ ಪ । ಳಂಚಿ ಸಮಸ್ತಭಾಗ್ಯವಿರೆ ॥
ಪ್ರಾಂಚಿತಸಾಮ್ರಾಜ್ಯಲೀಲೆಯೊಳಿರ್ದನಾ । ಕಾಂಚನಾಂಗನು ಬಹುಕಾಲ ॥ ೬ ॥

ನಿಲ್ಕಡೆವೆತ್ತಂದಿನಾಯುಷ್ಯವೆಂಭತ್ತ । ನಾಲ್ಕುಲಕ್ಷಾಂಕಪೂರ್ವಗಳು ॥
ಬಲ್ಕೆವೆತ್ತಾಪೂರ್ವೆಯೆಂದರೆಷ್ಟೆಂಬುದ । ಸಿಲ್ಕಾಗದಂತೆ ಪೇಳುವೆನು ॥ ೭ ॥

ಖರ್ವವೆಪ್ಪತ್ತು ಮತ್ತೈವತ್ತಾರರ್ಬುದ । ಪರ್ವಿ ಸಂವತ್ಸರ ನಡೆಯೆ ॥
ಪೂರ್ವೆಯೆಂದಾ ಪೂರ್ವೆ ಚತುರಶೀತಿಯಲಕ್ಷ । ಶೀರ್ವನ್ನಯಿರ್ದನಾ ಚಕ್ರಿ ॥ ೮ ॥

ಯೋಗಸಾಮರ್ಥ್ಯದಿ ತನು ಸಡಿಲದೆ ನಸು । ಬಾಗಿದ ಮುರಿಮೀಸೆ ಮತ್ತೆ ॥
ಬೀಗಿಬೆಳೆಯುದಚ್ಚ ಜವ್ವನ ತಪ್ಪದೆ । ಭೋಗದೊಳಿರ್ದನಾ ಧನ್ಯಾ ॥ ೯ ॥

ಅನಿಲಸಾಮರ್ಥ್ಯವೊ ವಿಪ್ರರ ಪರಕೆಯೊ । ಜನನಿಯಾಶೀರ್ವಾದಫಲವೊ ॥
ಜಿನಸಿದ್ಧಹಂಸನಾಥನ ಪೆಂಪೊಯೆನಲು ಜ । ವ್ವನ ಜಾರದಿರ್ದನಾ ಸೊಬಗಾ ॥ ೧೦ ॥

ಚಿಂತೆಯೆ ಮುಪ್ಪು ಸಂತೋಷವೆ ಜವ್ವನ । ವಿಂತೆಂಬ ನಾಳ್ನುಡಿಯುಂಟು ॥
ಚಿಂತೆಯಿಲ್ಲವಗೆ ಸದಾನಂದವದರಿಂದ । ಕಾಂತಿಗೂಡಿರ್ದುದು ಪ್ರಾಯಾ ॥ ೧೧ ॥

ನರೆವೆಂಗಳೊಡನಾಡೆ ಮುಪ್ಪಹುದೈಸೆ ಸೌಂ । ದರದಚ್ಚ ಜವ್ವನೆಯರೊಳು ॥
ಪರಿರಮಿಸುವನಿಗೆ ಮುಪ್ಪೆಂಟೆ ಪ್ರಾಯವೆ । ಸ್ಫುರಿಸುತಿರ್ದುದು ದಿನದಿನಕೆ ॥ ೧೨ ॥

ಆಯ್ದಾಯ್ದು ತಂದಚ್ಚವೆಂಗಳನಿತ್ತರಾ । ರಯ್ದು ಭೋಗಿಸುತ ಮುಪ್ಪವರ್ಗೆ ॥
ಮೆಯ್ದೋರಲೊಡನೆ ಜಾರಿಸುತೆಳೆವೆಂಗಳ । ನೊಯ್ದು ಸಂಭೋಗಿಸುತಿರ್ದಾ ॥ ೧೩ ॥

ತರುಣಿಯರೊಡನರ್ತಿವಾಡುತ ತನುವಿಗಾ । ವರಿಸಿದ ಮದವ ಜಾರಿಸುತ ॥
ಗುರುಹಂಸನಾಥನ ನೋಡುತ ಕರ್ಮನಿ । ರ್ಜರೆಮಾಡುತಿರ್ದನಾ ಜಾಣಾ ॥ ೧೪ ॥

ಕೇಳಿಗೆಳಸಿ ಪೆಂಗಳೊತ್ತ ಸಾರಿದರವ । ರೇಳಿಗೆಯರಿತು ಮೋಹಿಸುತ ॥
ಓಲಗಕಾಸೆವಟ್ಟಡಿಗಡಿಗೆಯ್ದಿ ಭೂ । ಪಾಲರೋಲೈಸಲೊಪ್ಪಿರ್ದ ॥ ೧೫ ॥

ಆ ವಿಭು ಮತ್ತೊಂದು ಪಗಲು ಮೂವತ್ತೆರ । ಳ್ಸಾವಿರಮುಕುಟವರ್ಧನರ ।
ತೀವಿದೊಡ್ಡೋಲಗದೊಳಗಿರಲೊಂದು ಸು । ಖಾವಾಪ್ತಿ ತೋರಿತೇನೆಂಬೆ ॥ ೧೬ ॥

ನಿನ್ನಯ ಮುಖಕಿದು ಸರಿಯೊ ಮೇಣಲ್ಲವೊ । ಚೆನ್ನಿಗರರಸ ನೀನೊಲಿದು ॥
ಚೆನ್ನಾಗಿ ನೋಡೆಂಬವೊಲು ಮುಖಚಿತ್ರಕ । ಕನ್ನಡಿವಿಡಿದನಾ ನೃಪಗೆ ॥ ೧೭ ॥

ಹೊಳೆಹೊಳೆದರಸ ನಿಟ್ಟಿಸುವಾಗ ಮೊಗವೆಡ । ಬಲಕೊಲೆವಂದವೊಪ್ಪಿದುದು ॥
ಇಳೆಯೊಡೆತನವಿನ್ನು ಸಾಕೆಂದು ಮನಹೇಸಿ । ತಲೆಗೊಡಹುವನೊಯೆಂಬಂತೆ ॥ ೧೮ ॥

ಚಿರಕಾಲ ಬೇಟವ ಮಾಡಿ ಮುಕ್ತ್ಯಂಗನೆ । ಕರೆಯಟ್ಟಿದಾ ದೂತಿ ಬಂದು ॥
ಪೊರೆಸಾರ್ದು ಪೇಳ್ವಂತೆ ನೃಪನ ಕೆನ್ನೆಯೊಳೊಂದು । ನರೆಯುದ್ದುದಾ ಸಮಯದೊಳು ॥ ೧೯ ॥

ಧ್ಯಾನಯೋಗಾಂಗಿಗೆ ನರೆತೆರೆಯಾಗದಿ । ದೇನು ಕಾರಣ ತೋರಿತೆಂದು ॥
ಭೂನಾಥ ವಿಸ್ಮಯಬಡುತವಧಿಯೊಳನು । ಮಾನಿಸಿ ನೋಡಿದನೊಳಗೆ ॥ ೨೦ ॥

ಮುಟ್ಟಲಾಗಿರ್ದುದಾಯುಷ್ಯ ಮುಕ್ತಿಗೆ ತಾನು । ತೊಟ್ಟನೆ ನಾಳೆ ಲಂಘಿಸುವ ॥
ತಿಟ್ಟವಿರ್ದುದು ಘಾತಿಯಾದಿನ ಜಾರುವ । ಕಟ್ಟಣೆಯಿರೆ ಕಂಡನೊಳಗೆ ॥ ೨೧ ॥

ಮರೆದಿರ್ದೆನಹುದೆನ್ನನೀ ನರೆ ಜನಿಸಿಯೆ । ಚ್ಚರಿಸಿತಲ್ಲಾಯೆಂದು ನಕ್ಕಾ ॥
ಹರಿದುದು ಸಂಸಾರಸುಖದಾಶೆ ಮನದಲ್ಲಿ । ನೆರೆದುದಾ ನೃಪಗೆ ವಿರಕ್ತಿ ॥ ೨೨ ॥

ಸನ್ನಿಧಿಯಾದುದು ಮುಕ್ತಿ ಸಂಸಾರಾಂಗ । ಭಿನ್ನರುಚಿಯು ತೋರಿ ಪೋಯ್ತು ॥
ಕೆನ್ನೆಗೆ ನರೆ ತೋರೆ ಕನ್ನೆಯರಾಟವೆ । ಇನ್ನೇಕೆ ಸಾಕುಸಾಕೆಂದಾ ॥ ೨೩ ॥

ಧಿಗ್ಧಿಗು ನನ್ನ ಚರಿತ್ರವ ತಪಸೆಂಬ । ದುಗ್ಧವನೊಲಿದು ಸೇವಿಸದೆ ॥
ಮುಗ್ಧರಂದದಿ ವಿಷಯಗಳೆಂಬ ವಿಷವುಂಡು । ದಗ್ಧನಾದೆನಲಾ ಹಾಯೆಂದಾ ॥ ೨೪ ॥

ಸುಡುಸುಡು ನನ್ನ ನಡೆಯ ತಪಸೆಂಬ ಪಾ । ಲ್ಗಡಲೊಳು ಮೂಡಿ ಮುಳುಗದೆ ॥
ಜಡದೇಹಸುಖವೆಂಬ ಲವಣಸಮುದ್ರವ । ಕುಡಿದು ಬಾಯಾರಿದೆನೆಂದಾ ॥ ೨೫ ॥

ಅಯ್ಯಯ್ಯೊ ಧ್ಯಾನದ ತುಯ್ಯಲುಂಡಾತ್ಮನೊ । ಳುಯ್ಯಲನಾಡಿ ಸುಖಿಸದೆ ॥
ಗುಯ್ಯಲೆತ್ತುವರಂತೆ ಮೆಯ್ಯ ಹೋರಟೆಯೊಳು । ಹುಯ್ಯಲನುಂಡೆ ನಾನೆಂದಾ ॥ ೨೬ ॥

ನೋಡು ನೋಡೆನ್ನೊಡಹುಟ್ಟಿದವರು ವಿಾಸೆ । ಮೂಡುವಂದೆ ದೀಕ್ಷೆವಡೆದು ॥
ಕೂಡಿದರಮೃತವನಿಂದುವರೆಗೆ ಜೋಲಿ । ಮಾಡಿದೆ ನಾನೊಬ್ಬನೆಂದಾ ॥ ೨೭ ॥

ಒಡಹುಟ್ಟಿದವರ ವಾರ್ತೆಯದೇಕೆ ಮತ್ತೆಯೆ । ನ್ನೊಡಲೊಳು ಹುಟ್ಟಿದರ್ಭಕರು ॥
ಕಡುದೀಕ್ಷೆಯೊಳು ಸಿದ್ಧಿವಡೆದರಲ್ಲವೆ ನನ್ನ । ಜಡತೆಯ ನೋಡು ನೋಡೆಂದಾ ॥ ೨೮ ॥

ತಂದೆ ಮಾವಂದಿರಕಂಪ ಮುಂತಾದಾಪ್ತ । ವೃಂದವಾ ಮೈದುನರೆಲ್ಲ ॥
ಮುಂದಾದರಮೃತಸಂಪದಕೆ ನಾನೊಬ್ಬನೆ । ಹಿಂದಾದೆನಕಟ ಹಾಯೆಂದಾ ॥ ೨೯ ॥

ಆಗಲಿ ನಮ್ಮವರೆಲ್ಲ ಮುಕ್ತಿಗೆ ಮುಂದೆ । ಹೋಗಲಿ ಹೋದರೇನಾಯ್ತು ॥
ಹೋಗುತ ಹಾದಿಯನುಡೆಸುತ್ತಿಕೊಂಡರೆ । ಲಾಗಿಸಿದರೆ ಮಾರ್ಗವಿದಕೊ ॥ ೩೦ ॥

ತಪಸುಂಟು ತಪಸಿಗೆ ದೀಕ್ಷೆಯಾದವರೊಳು । ಸ್ವಪರತತ್ತ್ವಜ್ಞಾನವುಂಟು ॥
ವಿಪುಲಾತ್ಮಯೋಗವುಂಟದರಿಂದ ಕರ್ಮವ । ಕ್ಷಪಿಸಿ ಮುಕ್ತಿಗೆ ಪೋಪೆನೆಂದಾ ॥ ೩೧ ॥

ಬುದ್ಧಿಸಾಗರನೊಡನೆದ್ದು ಕೈಮುಗಿದು ಸು । ವೃದ್ಧಿಸಂಪದವಿದರಿಂದ ॥
ಉದ್ಧದ ಸಿರಿಯುಂಟೆ ಸುಖಿಸೀಗ ತಪಸಿನ । ಸುದ್ದಿಯೇಕವನೀಶಯೆಂದಾ ॥ ೩೨ ॥

ಏನು ಕಡಮೆಯಾಯ್ತು ಧರೆಯೆಲ್ಲ ಬಂದು ಪಾ । ದಾನತವಾಗಿದೆ ನಿನಗೆ ॥
ಮಾನವಲೋಕಕಗ್ಗಳವಾದ ಸಿರಿಯ ಬಿ । ಟ್ಟೇನ ನೆನೆವೆ ಸ್ವಾಮಿಯೆಂದಾ ॥ ೩೩ ॥

ಅಲ್ಲವೈ ಕೇಳಂದು ಪುರುನಾಥ ತನಗೇನು । ಮಿಲ್ಲದೆ ತಪಸಿಗೆಯ್ದಿದನೆ ॥
ಬಲ್ಲವಗೀತನು ಸ್ಥಿರವಲ್ಲ ಕುಟ್ಟಿಗೊಂ । ಡಲ್ಲವೈಯೆಂದನಾ ಚಕ್ರಿ ॥ ೩೪ ॥

ಅಲ್ಲದಂದತಿಭಾರವಹುದು ವಿರಕ್ತಿಯೊಂ । ದಿಲ್ಲದವರಿಗುಗ್ರತಪಸು ॥
ಬಲ್ಲ ವಿರಕ್ತಗೆ ಬೆಲ್ಲದೊಳೊಂದಿದಂ । ತಲ್ಲವೈ ತಪಸೆಂದನವನು ॥ ೩೫ ॥

ಕಲ್ಲಂತೆ ಕಠಿನವಾಗಿಹುವು ಕರ್ಮಗಳರಿ । ವಿಲ್ಲದಂದರಿವಾದ ಮೇಲೆ ॥
ಬಲ್ಲಿತೆ ಬಲುಹಲ್ಲ ಹಲ್ಲ ಸಂದಿಸಿದೆಳೆ । ಯಲ್ಲವೈಯೆಂದನಾ ಜಾಣಾ ॥ ೩೬ ॥

ಆರುಖಂಡವ ಗೆಲ್ದರೇನಾಯ್ತು ಕರ್ಮದ । ಮೂರುಕಾಂಡವ ಗೆಲ್ಲದೆನಗೆ ॥
ಮೂರುರನ್ನವೆ ಜೀವಹಿತವೈಸೆ ಹದಿನಾಲ್ಕು । ಸೋರೆಯ ಮಣಿಯೊಳೇನೆಂದಾ ॥ ೩೭ ॥

ಸೊಲ್ಲೆಲ್ಲ ಕೇಳಿದಷ್ಟಕೆ ಸಭೆಗಮೃತವ । ಚೆಲ್ಲುವುವಿವರ ಮುಂದಿನ್ನು ॥
ಬೆಲ್ಲವೆಲ್ಲಿಯದಿನಿದೆಲ್ಲಿಯದಮೃತ ತಾ । ನೆಲ್ಲಿಯದೆಂದನಾ ಮಂತ್ರಿ ॥ ೩೮ ॥

ನಲ್ಲತನಕೆ ಬಲ್ಲತನಕೆ ಲೋಕದೊಳು ನೀ । ನಲ್ಲದುಂಟೆ ನಿನ್ನ ನಡೆಗೆ ॥
ನಲ್ಲರು ನಾರಿಯರೊಲಿವರು ಹುಸಿಗ ನಾ । ನಲ್ಲ ರಾಜೇಂದ್ರ ನಿನ್ನಾಣೆ ॥ ೩೯ ॥

ಅರಿಯದಾನೊಂದನಾಡಿದೆನು ನೀ ಕಂಡುದೆ । ತೆರನೆನಗದು ತಾನೆ ಶರಣು ॥
ಮರೆವುದೆಮ್ಮಯ ತಪ್ಪನೆಂದು ಚಕ್ರಿಯ ಪಾದ । ಕೆರಗಿ ಕುಳಿತನವನೊಡನೆ ॥ ೪೦ ॥

ಮಗನೆ ಬಾ ದೊಡ್ಡಣ್ಣ ರಾಜ್ಯವನಾಂತು ದೀ । ಕ್ಷೆಗೆ ನನ್ನ ಕಳುಹೆಂದು ಚಕ್ರಿ ॥
ತೆಗೆದಪ್ಪಿ ನುಡಿದನಾ ನುಡಿಗೇಳ್ದು ಕಣ್ಣ ನೀ । ರೊಗುತ ಮೂರ್ಛೆಗೆ ಸಂದನವನು ॥ ೪೧ ॥

ಶೀತಳದಿಂದೊಡನೆಚ್ಚರಿಸಿದನಿಂತು । ಭೀತಿಬಡುವರೆ ಕ್ಷತ್ರಿಯರು ॥
ಏತಕೆ ಮರುಕ ಧೈರ್ಯದೊಳೆನ್ನ ಕಳುಹು ದೀ । ಕ್ಷಾತಂತ್ರಕೆಂದನಾ ತಂದೆ ॥ ೪೨ ॥
ಆನೆಯ ರಂಚಿಕೆ ಕಳಭಕಹುದೆ ದೇವ । ರಾನುವ ರಾಜ್ಯಭಾರವನು ॥
ಆನಲಾಪೆನೆ ನಾನು ಸ್ವಾಮಿಯಿಂತೇಕೆ ಸಂ । ಧಾನಿಪುದೆಂದನಾ ಕುವರಾ ॥ ೪೩ ॥
ಧರೆಯ ಭಾರವ ತಾಳ್ವ ದಕ್ಷನೈ ನೀನದ । ರಿರವನರಿತು ಪೇಳ್ದೆ ನಾನು ॥
ತರಳನೆ ನೀನು ಜವ್ವನಿಗನಲ್ಲವೆಯೆಂದು । ಶಿರದಡಹುತ ತಂದೆ ನುಡಿದಾ ॥ ೪೪ ॥
ಮರೆದೆಯ ನಾನಂದು ವೃಷಭರಾಜನ ತೊಡೆ । ದೆರಪಿನೊಳಿಟ್ಟಿರ್ದರೆನಗೆ ॥
ಉರೆ ಭಾರವೆಂದು ನೀನಾಂತೆಯಿಂದೀ ನಾಡ । ಹೊರೆಗೇಕೆ ನೆರವಾಗೆಯೆಂದಾ ॥ ೪೫ ॥
ವಚನಸೌಭಾಗ್ಯದೊಳೆನ್ನನುಬ್ಬಿಸಿ ದೇವ । ರಚಳಿತಶಿವಪದಕೆಳಸಿ ॥
ಶುಚಿಗೆಟ್ಟ ರಾಜ್ಯವ ನನಗೀವೆನೆಂಬುದಿ । ದುಚಿತವೆಯೆಂದನಾ ಕುವರಾ ॥ ೪೬ ॥
ದೇವರಿಗಿಷ್ಟವಾದನ್ನ ಭೂಷಣ ವಸ್ತ್ರ । ವೀವುತ ಪೊರೆದಿಷ್ಟುಕಾಲಾ ॥
ಈ ವೇಳೆಯೊಳು ದೇವರೇಕೆ ಕೊಕ್ಕರಿಸಿದ । ಭೂವಲಯುವನೀವುದೆಂದಾ ॥ ೪೭ ॥
ಇಷ್ಟವಾದರ್ಥವನಡಿಗಡಿಗಿತ್ತೆನ್ನ । ನಿಷ್ಟುದಿವಸ ಪೊರೆದೀಗ ॥
ಇಷ್ಟವಲ್ಲದ ರಾಜ್ಯವೀವಾಗ ನಾನೇನು । ಕಷ್ಟವ ಮಾಡಿದೆಯೆಂದಾ ॥ ೪೮ ॥
ನುಡಿಜಾಣನೆಂಬುದ ಬಲ್ಲೆನೈ ಮಗನೆಯಿ । ಪೊಡವಿ ಹೆಡ್ಡಗೆ ಕಷ್ಟವಹುದು ॥
ಕಡುಜಾಣಗಿದು ಕಷ್ಟವಲ್ಲಿಷ್ಟವಹುದೊಡಂ । ಬಡು ಪಟ್ಟಕೆಂದನಾ ಜನಕಾ ॥ ೪೯ ॥
ಮೋಕ್ಷರಾಜ್ಯಕೆ ದೇವರಿಚ್ಛೈಸಿ ನನಗೆ ಮ । ತ್ತೀ ಕ್ಷೇತ್ರವಿತ್ತರೇಕಹುದು ॥
ದೀಕ್ಷೆಯೆ ಶರಣು ನಾನೂ ಬಪ್ಪೆನೆಂದವ । ನಾಕ್ಷೇಪವಿಲ್ಲದಾಡಿದನು ॥ ೫೦ ॥
ಅಪ್ಪಾಜಿ ನನಗೆ ರಾಜ್ಯವನಿತ್ತು ಮುನಿಯಾದ । ನೊಪ್ಪಿಸಬೇಕಾನು ನಿನಗೆ ॥
ಒಪ್ಪಬೇಕದಕೆ ನೀನೀಗ ಸೈರಿಸಿ ಹಿಂದೆ । ಬಪ್ಪುದು ತಪಸಿಗೆಮ್ಮಂತೆ ॥ ೫೧ ॥
ಸಲೆ ಬರ್ದು ಗೆಲಲಿರ್ದು ಸುತಗೆ ರಾಜ್ಯವನಿತ್ತು । ಸಲಬೇಕು ಮುಕ್ತಿಗೆಂದೆಮ್ಮ ॥
ಕುಲಬಿರುದಿದ ನಾವು ಮಿಾರಬಹುದೆ ಮುಂದೆ । ಕಳುಹೆನ್ನ ಮತ್ತೆ ಬಾರೆಂದಾ ॥ ೫೨ ॥
ನರೆಯೊಂದು ತೋರಿದರೇನಾಯ್ತು ತಪಕೆ ದೇ । ವರಿಗಿಷ್ಟು ತವಕವೇಕೀಗ ॥
ತರಹರಿಪುದು ಮತ್ತೆ ದೀಕ್ಷೆಯ ತಾಳ್ವುದೆಂ । ದೊರೆದನಾ ಕುವರನಯ್ಯನನು ॥ ೫೩ ॥
ಇಹೆನಹುದಾಯುಷ್ಯ ಮುಟ್ಟಲಾಯ್ತುಣ್ಣ ಕೇ । ಳ್ದಹಿಸುವೆನಿಂದು ಘಾತಿಗಳಾ ॥
ಮಿಹಿರ ಮೂಡಲು ನಾಳೆ ಮುಕ್ತಿಗೆಯ್ದುವ ಪ್ರಾಪ್ತಿ । ವಹಿಸಿರ್ದುದೆಂದನಾ ಚಕ್ರಿ ॥ ೫೪ ॥
ಆ ನುಡಿಗೇಳ್ದದೆ ಹವ್ವನೆ ಹಾರಿ ಸು । ಮ್ಮಾನಗುಂದಿರ್ದನಾ ಕುವರಾ ॥
ನೀನುತ್ತರಂಗೊಟ್ಟರೆನ್ನಾಣೆ ನಿಲ್ಲೆಂದು । ಸೂನುವ ಮಾತ ಕಟ್ಟಿದನು ॥ ೫೫ ॥

ಅವನಿಯ ದೊರೆತನ ನಿನಗಾದಿರಾಜಗೆ । ಯುವರಾಜಪಟ್ಟವಿನ್ನಳಿದ ॥
ಕುವರರಿಗುಂಬಳಿಗೊಡುವೆನೆಂದಾ ಪುತ್ರ । ನಿವಹವ ನೋಡಿ ನುಡಿದನು ॥ ೫೬ ॥
ಆವ ನಾಡಿಚ್ಛೆಯೈ ವೃಷಭರಾಜನಿಗೆಂದ । ಕೈವಲ್ಯವೆಂಬ ನಾಡಿಚ್ಛೆ ॥
ದೇವರೊಡನೆ ಬಪ್ಪೆನೀ ನಾಡನೊಲ್ಲೆನೆಂ । ದಾ ವೀರ ವ್ರತವಿಟ್ಟು ನುಡಿದಾ ॥ ೫೭ ॥
ಹಂಸರಾಜನಿಗೊಂದು ರಾಜ್ಯವ ನುಡಿದಾಗ । ಸಂಶಯುವಳಿದೆದ್ದು ನಿಂದು ॥
ನಾಂ ಸಿದ್ಧಲೋಕವಲ್ಲದೆ ನಾಡನೊಲ್ಲೆನು । ಹಂಸನಾಥನೆ ಸಾಕ್ಷಿಯೆಂದಾ ॥ ೫೮ ॥
ಉಳಿದ ಕುಮಾರರೆಲ್ಲರು ಮುಂದೆ ನಿಂದು ಕೈ । ಗಳ ಮುಗಿದೆಲೆ ಸ್ವಾಮಿ ನಿನ್ನ ॥
ಬಳಿಯೊಳೆಯ್ದುವೆವಲ್ಲದಿಲ್ಲಿರೆವೆಂದು ನಿ । ಶ್ಚಲಚಿತ್ತರಾಗಿ ನುಡಿದರು ॥ ೫೯ ॥
ಎಲ್ಲರ ಪ್ರಾರ್ಥಿಸಿ ನಿಲಿಸುವರೆನಗೆ ಹೊ । ತ್ತಿಲ್ಲವೆಂದೆಣಿಸಿ ಚಕ್ರೇಶಾ ॥
ಹುಲ್ಲೆವಾರಾಗಿ ಗದ್ದುಗೆಯಿಂದ ನೆಗೆದಿಳಿ । ಯಲ್ಲಿ ನಿಂದನು ಸಭೆ ಮುಸಗೆ ॥ ೬೦ ॥

ಕರವಿಡಿದೊಡನರ್ಕಕೀರ್ತಿರಾಜನನೆತ್ತಿ । ಹರಿಪೀಠದಲ್ಲಿ ಕುಳ್ಳಿರಿಸಿ ॥
ದೊರೆ ತನ್ನ ಮುಕುಟವನಾತಗಿಕ್ಕಿದನು ಭೂ । ಸುರವೃಂದ ಜಯ ಜಯಯೆನಲು ॥ ೬೧ ॥
ಹಾರವನಿಕ್ಕಿ ನವೀನಪಟ್ಟವ ಕಟ್ಟಿ । ಧಾರಿಣಿಗೊಡೆಯ ನೀನೆಂದು ॥
ವೀರ ಸೇಸೆಯನಿಟ್ಟು ಜೋಲಿಮಾಡದೆ ಸುಕು । ಮಾರನುತ್ಸವವನು ಮುಗಿದಾ ॥ ೬೨ ॥
ತೆಗೆದಾದಿರಾಜನ ಕೆಲದಲ್ಲಿ ಪುಟ್ಟಗ । ದ್ದುಗೆಗಿಟ್ಟು ಯುವರಾಜನೆಂದು ॥
ಮಿಗೆ ಕಂಠಮಾಲೆಯನಿಕ್ಕಿ ಸೇಸೆಯನಿಟ್ಟು । ಸುಗುಣರಾಜೇಂದ್ರ ಮನ್ನಿಸಿದಾ ॥ ೬೩ ॥
ಜನವದೆ ಪರಿವಾರವದೆ ದೇಶವದೆ ಸರ್ವ । ರನುವರಿದೊಲ್ದು ಪಾಲಿಸುದು ॥
ನನಗತಿವಚನಕೆ ವೇಳೆಯಿಲ್ಲೆಂದಗ್ರ । ತನಯಗೆ ಸೂಚಿಸಿಬಿಟ್ಟಾ ॥ ೬೪ ॥
ಕಂಬನಿಬಿಡುತಿರ್ದರಾ ಪುತ್ರರೊಡನೆನ್ನ । ಹಂಬಲ ಬಿಟ್ಟು ನೀವಿವರ ॥
ಬೆಂಬಳಿವಿಡಿದಿಹುದೆಂದು ಭೂಪಾಲಕ । ದಂಬಕೆ ಕೈವೀಸಿಬಿಟ್ಟಾ ॥ ೬೫ ॥

ಧರೆಯು ಜಂಜಡಹೋಯ್ತು ಸತಿಮಂತ್ರಿಸಖರೆಂದು । ಸ್ಮರಿಸಿದನೆ ಚಕ್ರಿ ಮತ್ತೆ ॥
ಗುರುಹಂಸನಾಥನ ನೆನೆವುತ ಮುಂಗಡೆ । ಗಿರದೆದ್ದನಾ ಕ್ಷಣದಲ್ಲಿ ॥ ೬೬ ॥
ಪರಿದರ್ಕಕೀರ್ತ್ಯಾದಿರಾಜರು ಕಣ್ಣೀರು । ಸುರಿವುತ ಮುಂದಡ್ಡಗಟ್ಟಿ ॥
ಚರಣಾಬ್ಜದೊಳು ಮುಗ್ಗಿ ಕೆಡೆದರು ತಂದೆಯ । ವಿರಹವನಾರು ಸೈರಿಪರು ॥ ೬೭ ॥
ಮತ್ತೆ ನೋಡಿದನೆ ತನ್ನಯ ಪುತ್ರರೆಂದವ । ರತ್ತರಳಲಿಯೆಂದು ನೂಂಕಿ ॥
ಮತ್ತೇಭದಂತೆ ಲೀಲೆಯೊಳು ತಪೋವನ । ದತ್ತೆಯ್ದುತಿರ್ದನಾ ಧೀರಾ ॥ ೬೮ ॥
ಬಿಡದೆ ಸಭಾಜನವೆಯ್ದುತಿರ್ದುದು ಬಳಿ । ವಿಡಿದು ಬಳ್ಳಿಯ ತೆಗೆದಂತೆ ॥
ಪಿಡಿದರಷ್ಟರೊಳು ಪಲ್ಲಕ್ಕಿಯ ಭರತೇಶ । ನಡರಿದನಾತ್ಮಲೀಲೆಯೊಳು ॥ ೬೯ ॥

ವಸುಧಾಧಿಪತಿ ದೀಕ್ಷೆಗಡಿಯಿಟ್ಟನೆನೆ ಕೇಳ್ದು । ಮುಸಗಿತು ಸತಿಯರ್ಗೆ ವಿರಹಾ ॥
ಬಿಸಿಲೊಳೀಡಾಡಿದ ಮಾಂದಳಿರಂತಾದ । ರಸುವಿಗೆ ಮೂರ್ಛೆ ತಟ್ಟಿದುದು ॥ ೭೦ ॥
ಹರಣವಾಗಳೆ ಹೋಹುದಹುದಾತ ದೇಹವ । ಧರಿಸಿರ್ದನೆಂಬಾಸೆಯಿಂದ ॥
ಪರಿದೆಯ್ದಿ ನೋಡುವೆವೆಂಬ ಕಾತರದಿಂದ । ತರಹರಗೊಂಡಿರ್ದರೊಡನೆ ॥ ೭೧ ॥
ಅಕ್ಕಟ ಚಕ್ರವರ್ತಿಯ ಮಹಾಭಾಗ್ಯ ಕ । ಣ್ಣಿಕ್ಕುವಷ್ಟಕೆ ಮಾಯವಾಯ್ತು ॥
ಕಕ್ಕುಲಿತೆಯ ಸುಡುಸುಡು ಕಷ್ಟವೆಂದು ಹೆ । ಮ್ಮಕ್ಕಳತ್ತರು ತಮತಮಗೆ ॥ ೭೨ ॥
ಇದಿರಿಲ್ಲವೀತನಿಗೆಣೆಯಿಲ್ಲವೆಂಬ ಸಂ । ಪದವುಳ್ಳ ಷಟ್ಖಂಡಪತಿಯ ॥
ಬದುಕು ಕ್ಷಣಕೆ ಬಯಲಾದುದೆ ಹಾಹಾಯೆಂ । ದೆದೆಗರಗಿದರು ರಾಣಿಯರು ॥ ೭೩ ॥
ಆರು ತಡೆಯಬಹುದಾತ್ಮನನಾಯುಷ್ಯ । ತೀರಿದ ಮೇಲೆಂದು ನವಗೆ ॥
ಕೋರಿ ನಿರೂಪಿಸುತಿಹನಲ್ತೆ ತಾನಿಂದು । ದಾರಿದೆಗೆದನೊಳಗರಿದು ॥ ೭೪ ॥
ಬಾಳ ಬೀಸಾಡಿ ಹೋದವನಲ್ಲ ಮುಕ್ತಿಗೆ । ನಾಳೆ ಪಯಣವೆಂಬುದರಿದು ॥
ಪೇಳದೆಯ್ದಿದನೈಸೆ ನಮಗೂ ದೀಕ್ಷೆಯೆ ಗತಿ । ಯೇಳಿರೆಂದನುವಾದರೆಲ್ಲ ॥ ೭೫ ॥
ಜನನಾಥನಿರ್ದರೆ ಮನೆಯೊಳಿರ್ದೆವು ತಪೋ । ವನಕಾತನೆದ್ದ ಮೇಲಿನ್ನು ॥
ಮನೆ ಸುಖವಲ್ಲಾತ ಪೊಕ್ಕಡವಿಯೆ ನಮ । ಗನುಪಮಸುಖವೆಂದರೊಡನೆ ॥ ೭೬ ॥
ಕಣ್ಣು ಮನಸು ತಣಿವೊಲು ಸುಖಿಸಿದೆವಿನ್ನು । ಹೆಣ್ಣು ಜನ್ಮವ ತಪಸಿಂದ ॥
ಬಣ್ಣಗೆಡಿಸಿ ಸ್ವರ್ಗವಡೆವೆವೆಂದಾ ಜಾಣ । ವೆಣ್ಣುಗಳುಜ್ಜುಗಿಸಿದರು ॥ ೭೭ ॥
ತುರುಬಿನಜ್ಜಿಯರು ಪಟ್ಟದ ರಾಣಿ ಮೊದಲಾದ । ಪೆರೆನೊಸಲಬಲೆಯರೆಲ್ಲ ॥
ಮರುಕವ ಬಿಟ್ಟು ಧೈರ್ಯವನಾಂತು ದೀಕ್ಷೆಗೆ । ಕಿರುವಜ್ಜೆಯಿಟ್ಟರೋಜೆಯೊಳು ॥ ೭೮ ॥
ಸುಖದಲ್ಲಿ ಬಾಳ್ದು ನಿಮ್ಮಯ್ಯನಂದದಿ ಮೋಕ್ಷ । ಸುಖವೆಯ್ದಿರೆಂದೊಲ್ದು ಪರಸಿ ॥
ಸುಖಕಾಗಿ ನಾವು ದೀಕ್ಷೆಯನಾಂಪೆವೆಂದೊರೆ । ದಖಿಲನಾರಿಯರು ಸಾಗಿದರು ॥ ೭೯ ॥
ಕುಸುಮರಾಜಿಕುಂತಲಾವತಿಯರು ತುರುಬಿನ । ಪೆಸರಜ್ಜಿಯರ್ಕಳಾಗಿರ್ದು ॥
ಬಸಿವ ಕಂಬನಿಯ ಪುತ್ರರನಿಷ್ಟು ಹರಸಿ ತಾ । ಮುಸವಿಲ್ಲದೆಯ್ದಿದರ್ಮುಂದೆ ॥ ೮೦ ॥
ತಡೆಯಬಾರದು ತಮ್ಮ ಪತಿಯ ಕೈಯೊಳೆ ದೀಕ್ಷೆ । ವಡೆದು ಸುಖಿಗಳಾಗಲೆಂದು ॥
ಒಡನೆ ಪನ್ನಂಗಪಲ್ಲಕ್ಕಿಯೊಳಾತ್ಮಯ್ಗಳ । ಬಿಡುಗೆಗೊಟ್ಟರು ಕುಮಾರಕರು ॥ ೮೧ ॥
ಅನುಜರೆಲ್ಲರು ದೀಕ್ಷೆಗೆಯ್ದಿದರವರ ಮಾ । ನಿನಿಯರು ತಪಸಿಗೆಯ್ದುತಿರೆ ॥
ಜನನಿಯರೊಡನೆ ಪನ್ನಂಗಪಲ್ಲಕ್ಕಿಯೊ । ಳನುಗೂಡಿ ಬೀಳ್ಕೊಟ್ಟರಳುತ ॥ ೮೨ ॥
ಪುರದ ಕಾಂತೆಯರೆಲ್ಲ ಮದಿಲುಮಾಡವನೇರಿ । ಪರಿಕಿಸಿಗೋಳಿಡುತಿರಲು ॥
ಪರಿವಾರ ಪ್ರಜೆ ಶೋಕಗೈಯೆ ಪೆಂಗಳು ಹಿಂದೆ । ಬರೆ ರಾಯ ಮುಂದೆಯ್ದುತಿರ್ದಾ ॥ ೮೩ ॥

ಅಯ್ಯೊ ನಮ್ಮೊಡೆಯನೆ ಸಿರಿಯ ಕಾಮನ ಬಿಲ್ಲ । ರಯ್ಯವೊಲ್ತೋರಿ ಜಾರುವೆಯ ॥
ಮೆಯ್ಯ ಪೊತ್ತವರ ಸುಖವ ಸುಡಲೆಂದು ಪೆ । ಣ್ಬಯ್ಯಲೆದ್ದುದು ಪುರದೊಳಗೆ ॥ ೮೪ ॥
ಮುಪ್ಪು ದೋರದೆ ಬಾಳ್ದೆ ಮುದ್ದುವೆಂಗಳಿಗೆ ನೋ । ವೊಪ್ಪಚ್ಚಿ ತೋರದಂತಾಳ್ದೆ ॥
ತೆಪ್ಪಗಿಂದಡವಿಗೆಯ್ದುವೆಯ ನಮ್ಮೊಡೆಯ ನ । ಮ್ಮಪ್ಪಯೆಂದಳುವರಲ್ಲಲ್ಲಿ ॥ ೮೫ ॥
ಬೀದಿಯೊಳ್ನೀನೆಯ್ದುವಾಗ ಕಂಡರೆ ಸ್ವರ್ಗ । ವಾದಂತೆ ನಲವಪ್ಪುದೆಮಗೆ ॥
ಹೋದುದೆ ನಮ್ಮ ಸಂಪತ್ತು ಹಾಹಾಯೆಂದು । ವೇದನೆಬಟ್ಟರಲ್ಲಲ್ಲಿ ॥ ೮೬ ॥
ಪೆಂಡಿರು ಮಕ್ಕಳು ಸೊಸೆಯರುವೆರಸಿ ಷ । ಟ್ಖಂಡವ ಜಯಿಸಿ ಮತ್ತವರ ॥
ಕೊಂಡೊಯ್ಯುತಿರ್ದೆಯ ತಪಕೆಂದು ಪೆಂಗಳ । ತಂಡ ಗೋಳಿಟ್ಟುದಲ್ಲಲ್ಲಿ ॥ ೮೭ ॥

ಶೋಕಿಸುವವರತ್ತ ನೋಡದೆ ನೃಪತಿ ಪ । ರಾಕಿಂದ ಪುರವನು ದಾಂಟಿ ॥
ಭೀಕರಾರಣ್ಯವ ಸಾರ್ದನು ಬಳಸಿರ್ದ । ನೇಕಪರಿಸ್ಪಂದವೆರಸಿ ॥ ೮೮ ॥
ಮಲಯಜತರುವಿರ್ದುದದರ ಮೂಲದೊಳೊಂದು । ಶಿಲೆಯಿರ್ದುದತಿತೆರಪಾಗಿ ॥
ಕೆಲದವರ್ಜಯಜಯಯೆನಲು ಪಲ್ಲಕ್ಕಿಯಿಂ । ದಿಳಿದನಾ ನಿಶ್ಶಂಕಮಲ್ಲಾ ॥ ೮೯ ॥
ಶಿಲೆಯ ಮೇಲೋಜೆಯೊಳ್ನಿಂದನು ಮುಖಕಳ । ಕಳಿಸುತ ಜನವ ನೋಡಿದನು ॥
ಬಳಿಸಂದರೆಲ್ಲರು ಮುಖಕಾಂತಿಗುಂದಿ ಕೈ । ಗಳ ಮುಗಿದರು ತವತವಗೆ ॥ ೯೦ ॥
ಒತ್ತ ಸಾರ್ದರ್ಕಕೀರ್ತ್ಯಾದಿರಾಜರು ತಲೆ । ಗುತ್ತಿರ್ದರುಳಿದ ನಂದನರ ॥
ಮೊತ್ತವೆಲ್ಲವು ಕಳೆಯೇರಿರ್ದುದದಕೆ ರಾ । ಜೋತ್ತಮ ನಸುನಗುತಿರ್ದಾ ॥ ೯೧ ॥
ಸಖರು ಸಂತಸದೊಳಿರ್ದರು ಭೂಪರರೆಬರು । ಮುಖಕಾಂತಿವೆತ್ತಿರ್ದರವರು ॥
ಮುಖರಿತದೀಕ್ಷೆವಡೆವರೆಂದು ತಿಳಿದಭಿ । ಮುಖನಾಗಿ ನೃಪ ನೋಡುತಿರ್ದಾ ॥ ೯೨ ॥
ಪೆಂಗಳ ಪಲ್ಲಕ್ಕಿ ಕಡೆಸಾರ್ದು ಮೇಲೊಂದು । ಪಂಗಡವಾಗಿರ್ದುವಾಗ ॥
ಶೃಂಗಾರಯೋಗಿ ದೀಕ್ಷೆಯನಾಂಪೆನೆಂದಂತ । ರಂಗದೊಳುಜ್ಜುಗಿಸಿದನು ॥ ೯೩ ॥
ನೆರವಿಯ ದೂರಕೆ ತೊಲಗಿಸಿ ಪುತ್ರಮಿ । ತ್ರರು ಮಂತ್ರಿ ತನ್ನೊತ್ತಿಲಿರಲು ॥
ತೆರೆಯೊಂದ ಪಿಡಿಯಿಸಿ ನಿಂದನಾ ನೃಪನಿದು । **ಭರತೇಶನಿರ್ವೇಗಸಂಧಿ** ॥ ೯೪ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೫ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾವೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೬ ॥
ಕಾಣದರ್ಥವ ಕಾಣಿಸುವ ಪರಂಜ್ಯೋತಿ ನೀ । ಮಾಣದೆ ನನ್ನೆದೆಯೆಂಬ ॥
ಕೋಣೆಯೊಳಿರು ಹೋದೆಯಾದರೆ ನಿನಗೆ ನಿ । ನ್ನಾಣೆ ಚಿದಂಬರಪುರುಷಾ ॥ ೯೭ ॥

ಭರತೇಶನಿರ್ವೇಗಸಂಧಿ ಸಂಪೂರ್ಣಂ.

## ಧ್ಯಾನಸಾಮರ್ಥ್ಯಸಂಧಿ

ಶ್ರೀರುಚಿಂತಾರತ್ನ ಗುಣರತ್ನ ದೇವಶಿ । ರೋರತ್ನ ತ್ರಿಭುವನರತ್ನಾ ॥
ತ್ರೈರತ್ನರೂಪ ಸನ್ಮತಿದೋರು ಸಹಜಶ್ರೃಂ । ಗಾರ ನಿರಂಜನಸಿದ್ಧಾ ॥ ೧ ॥

ತೆರೆಯು ಮರೆಯೊಳು ಸಿದ್ಧಾಸನವಲ್ಲಿ ಬಂ । ಧುರಶಿಲೆಯೊಳು ರಾಯ ಕುಳಿತು ॥
ಗುರುವಿಲ್ಲ ತನಗೆ ತಾನೆ ಗುರುವೆಂಬುದ । ಹರಹಿದನೇನ ಬಣ್ಣಿಪೆನು ॥ ೨ ॥

ತನ್ನಾತ್ಮ ತನಗಲ್ಲದಾಂತ ಮೈಯೆರವೆಂಬ । ಗಿನ್ನುಂಟೆ ಸಂಗದ ಗುಂಜು ॥
ಭಿನ್ನವಸ್ತುಗಳ ಬೇರ್ಪಡಿಸಿ ಯೋಗೀಂದ್ರನೆಂ । ಬುನ್ನತಿವೆತ್ತನೇನೆಂಬೆ ॥ ೩ ॥

ಸಾಭರಣಾಂಕಿತಸಿದ್ಧರುಂಟಿನಲು ವ । ಸ್ತ್ರಾಭರಣಗಳಿರ್ದರೇನು ॥
ಲೋಭವೇನೀ ವಸ್ತ್ರ ರನ್ನ ಚಿನ್ನದೊಳೆನು । ತಾ ಭೂಪ ಬಿಸುಟನೆಂದೆಂಬೆ ॥ ೪ ॥

ದೇಹಕಲ್ಲದೆ ವಸ್ತ್ರಭೂಷಣದೊಪ್ಪ ನಿ । ರ್ದೇಹದಾತ್ಮನಿಗಿಲ್ಲವಿವರ ॥
ಮೋಹವೇನೆಂದು ವಸ್ತ್ರಾಭರಣವ ಬಿಸು । ಟಾ ಹೇಮವರ್ಣನೊಪ್ಪಿದನು ॥ ೫ ॥

ಕೋಟಿಚಂದ್ರಾರ್ಕರ ಪ್ರಭೆ ನನಗಹುದಿವು । ಕೀಟಕತನುಶೋಭೆಯೆಂದು ॥
ಕಾಟಿಗೆ ಸರಿಗಂಡು ದಿವ್ಯಭೂಷಣವ ಕಿ । ರೀಟಿಯಿಟ್ಟನು ದೆಸೆದೆಸೆಗೆ ॥ ೬ ॥

ಆದಿಜಿನಗೆ ಜೆಡೆಯಿರ್ದು ಕರ್ಮಕ್ಷಯ । ವಾದುದಿಲ್ಲವೆ ಚಕ್ರಿಗಂತೆ ॥
ಕೂದಲಿರ್ದರೆ ದೋಷವೇನುಪಚಾರಕೂ । ರ್ತಾದುದು ಲೋಚೆಂದು ನುಡಿವೆ ॥ ೭ ॥

ಕೇಶದ ಲೋಚುಬಣ್ಣಿಸಲೇಕೆ ಮನದ ಸಂ । ಕ್ಲೇಶವ ಲೋಚುಮಾಡಿದನು ॥
ಆ ಶೂರ ಕಣ್ಮುಚ್ಚಿ ತನ್ನ ನೋಳ್ಪುದು ಸುಪ್ರ । ಕಾಶಚೇತೋಜ್ಞಾನವಾಯ್ತು ॥ ೮ ॥

ಆಸನಾಯತ ಮುಚ್ಚಿದಕ್ಷಿಗಳಿಂದ ಮು । ಹಾಸಿದ್ಧಬಿಂಬದಂತೆಸೆವ ॥
ಭಾಸುರಬಾಹ್ಯಸಾಮಗ್ರಿಯೊಳ್ಮುನಿ ಧ್ಯಾನ । ಬೀಸರಿಸದೆ ನಿಂದನೊಳಗೆ ॥ ೯ ॥

ಅಂಗ ಬೇರಾತ್ಮ ಬೇರೆಂದನುಭವಿಪಂತ । ರಂಗಸಾಮಗ್ರಿಯಿಂದೊಳಗೆ ॥
ಭಂಗುರಕರ್ಮವ ಭಂಗಿಸುತಿರ್ದನ । ಷ್ಟಾಂಗಯೋಗಾನುಭವಾಢ್ಯಾ ॥ ೧೦ ॥

ನೋಡುತಿರ್ದನು ತನ್ನ ನಿಜವ ಕರ್ಮಗಳು ಕೆ । ಟ್ಟೋಡುತಿರ್ದುವು ಕಂಡ ಕಡೆಗೆ ॥
ಕೂಡೆ ಕೂಡಾನಂದ ಸುಜ್ಞಾನ ಸುಪ್ರಭೆ । ಮೂಡುತಿರ್ದುವು ನಿಜಾತ್ಮನೊಳು ॥ ೧೧ ॥

ಕ್ಷೋಣಿಯುನಗೆದಷ್ಟಕೊಳಗೆ ಹೊಳಿದುದೊಂದು । ಮಾಣಿಕಬೊಂಬೆ ತೋರ್ಪಂತೆ ॥
ಕಾಣಿಸುತಿರ್ದನಾತ್ಮನು ಧ್ಯಾನಿಸಲು ಕರ್ಮ । ರೇಣು ಕದಲಿದಷ್ಟಕೊಳಗೆ ॥ ೧೨ ॥

ಬರಿಕೈಯ ತೋರದ ಮಳೆಗರೆದರೆ ಮಣ್ಣ । ಗಿರಿ ಗಲಗಲನೆ ಸೋರ್ವಂತೆ ॥
ಪರಮಹಂಸಧ್ಯಾನ ಭೇದಿಸಿದಷ್ಟಕೆ । ಜರಿವುತಿರ್ದುದು ಕರ್ಮಪಿಂಡಾ ॥ ॥ ೧೩ ॥

ಕಾಷ್ಠದ ಬಣಬೆಯನಡರಿ ಮೇಲ್ಮೇಲೆ ಗ । ರಿಷ್ಠವಪ್ಪುರಿಮಾಲೆಯಂತೆ ॥
ಗೋಷ್ಠಿಗೊಂಡಿಹ ಕರ್ಮಗಳ ಕ್ಷಣಕ್ಷಣಕೇರೆ । ನಿಷ್ಠುರವಾಯ್ತು ಧ್ಯಾನಾಗ್ನಿ ॥ ೧೪ ॥
ಘೋರಕರ್ಮವೆ ಕಾಷ್ಠ ತನು ಹೋಮಕುಂಡ ಧ್ಯಾ । ನಾರೂಢ ಶಿಖಿ ಮನವೆಂಬ ।
ಧೀರದೀಕ್ಷಿತನು ಸಂಸೃತಿಯೆಂಬ ವೈರಿಗೆ । ಮಾರಣಾಧ್ವರವನೊಡ್ಡಿದನು ॥ ೧೫ ॥
ಎರಡುಕಂಗಳ ಮುಚ್ಚಿ ಸುಜ್ಞಾನವೆಂಬ ದೊ । ಡ್ಡರಿಗಣ್ಣ ತೆಗೆದಾತ್ಮಶಿವನು ॥
ಅರಿಕರ್ಮದನುಜರಿಪ್ಪಂಗ ಮೂರೆಂಬ ಮು । ಪ್ಪುರಗಳ ಸುಡುತಿರ್ದನಾಗಾ ॥ ೧೬ ॥
ಪ್ರಳಯಕಾಲಾಗ್ನಿಯಿಂದಿಳೆಯೆಲ್ಲ ಬೆಂದು ಕು । ಪ್ಪಳಿಸುವಂತಾ ತಪೋಧನನ ॥
ಒಳವೆತ್ತ ಧ್ಯಾನಾಗ್ನಿಯಿಂದ ಸರ್ವಾಂಗದೊ । ಳಿಳಿವುತಿರ್ದುದು ಕರ್ಮ ಬೆಂದು ॥ ೧೭ ॥
ಅಂದು ಕವಾಟವನೊಡೆದುರಿವಗ್ನಿಯು । ನಿಂದು ಕಂಡಂತಶ್ವವೇರಿ ॥
ಇಂದು ಕರ್ಮವ ಸುಡುವಗ್ನಿಯ ಭಾವದೊ । ಳ್ನಿಂದು ನೋಡಿದನಾ ಪ್ರತಾಪಿ ॥ ೧೮ ॥
ಕಾಕಿಣಿಯಿಂದಂದು ಗುಹೆಯ ಕತ್ತಲೆಯ ನಿ । ರಾಕರಿಸಿದ ವಿಡಾಯುವನು ॥
ಭೂಕಾಂತ ಬಿಟ್ಟುದಿಲ್ಲಿನೆ ದೇಹದೊಳಗೆ ಮ । ಹಾಕಾಂತಿವೆತ್ತುದಾ ಧ್ಯಾನಾ ॥ ೧೯ ॥
ಚಕ್ರವ ತೊರೆದು ಯೋಗೀಂದ್ರನಾದರೆ ಧ್ಯಾನ । ಚಕ್ರವುದಯಿಸಿತಾ ಕ್ಷಣವೆ ॥
ಶಕ್ರವಂದಿಪನಿನ್ನು ಮುಕ್ತಿಯನಾಳ್ವನಾ । ವಿಕ್ರಮಿಗೆಂದೆಂದು ಸಿರಿಯೆ ॥ ೨೦ ॥
ಹಂಸನಾಥನ ನೋಡುತಿರ್ದನು ಕರ್ಮವಿ । ಧ್ವಂಸವಡೆವುತಿರ್ದದೊಡನೆ ॥
ಅಂಶು ಪಜ್ಜಳಿಸುತಿರ್ದುದು ಮಝು ಮುನಿಕುಲೋ । ತ್ತಂಸನ ಧ್ಯಾನವಿಕ್ರಮಕೆ ॥ ೨೧ ॥
ತಡೆದಿರ್ದ ಕಟ್ಟೆಯನೊಡೆಯಲೊಡನೆ ನೀರು । ಬುಡಬುಡನಿಳಿದು ಪೋಪಂತೆ ॥
ಒಡೆದುದೆ ಬಂಧ ತುಂಬಿದ ಕರ್ಮಜಲ ಕಂಡ । ಕಡೆಗಿಳಿದುದು ದೇಹದಿಂದ ॥ ೨೨ ॥
ಹೊತ್ತ ಮೂಡೆಯ ಕಟ್ಟು ಸಡಿಲೆ ಧಾನ್ಯಗಳೊಕ್ಕು । ನೆತ್ತಿಗೆ ಹಗುರವಹಂತೆ ॥
ಅತ್ತಿತ್ತ ಕರ್ಮ ಕದಲಿದಷ್ಟಕೊಳಗೆ ಸು । ಚಿತ್ತಗೆ ಲಘುದೋರುತಿಹುದು ॥ ೨೩ ॥
ಹಲವು ತೆರೆಯ ನಡುವಿರ್ದ ದೀಪಕೆ ತೆರೆ । ತೊಲಗಿದಷ್ಟಕೆ ಪ್ರಭೆ ಹೊರಗೆ ॥
ಹೊಳೆವಂತೆ ಕರ್ಮ ಪೈಸರಿಸಿದಷ್ಟಕೆ ಹಂಸ । ಕಳೆ ಮೈಯ ಹೊರಗೆ ಬಿಂಬಿಸಿತು ॥ ೨೪ ॥
ಅಕ್ಷರಂಗಳ ಮುನ್ನ ಹೊಸರತ್ನಮಾಲೆಯಂ । ತೀಕ್ಷಿಸುತಿಹನಾತ್ಮನೊಳಗೆ ॥
ಈ ಕ್ಷಣದೊಳಗವು ಮಸುಳಿದುವಮಲಹಂ । ಸೇಕ್ಷಣಕಳೆಯೆ ರಾಜಿಸಿತು ॥ ೨೫ ॥
ಮುನ್ನ ಧರ್ಮಧ್ಯಾನನತಿಪ್ರಭೆಯಿಲ್ಲಾಗಿ । ಭಿನ್ನಾಕ್ಷರಂಗಳೊಪ್ಪಿದುವು ॥
ಇನ್ನಂಟೆ ಪರಮಶುಕ್ಲಧ್ಯಾನದಲ್ಲಿ ಹಂ । ಸೋನ್ನತಕಳೆಯೆ ರಾಜಿಸಿತು ॥ ೨೬ ॥
ಇನನಂತೆ ಶುಕ್ಲ ಚಂದಿರನಂತೆ ಧರ್ಮ ಚಂ । ದ್ರನ ಮುಂದೆ ಮೆರೆವ ನಕ್ಷತ್ರ ॥
ಇನನ ಮುಂದೆಸೆವುವೆ ಅಕ್ಷರಪ್ರಭೆ ಮಸು । ಳ್ದನುಪಮಮಾಯ್ತಾತ್ಮಕಾಂತಿ ॥ ೨೭ ॥

ವಿವಿಧಶಬ್ದಬ್ರಹ್ಮವಾ ಪರಬ್ರಹ್ಮದೊ । ಳವಗತವಾಯ್ತೊಯೆಂಬಂತೆ ॥
ವ್ಯವಹಾರ ಜಾರಿ ನಿಶ್ಚಯವೇರಿ ಹಂಸಾನು । ಭವದೊಳಿರ್ದನು ಹಂಸಯೋಗಿ ॥ ೨೮ ॥

ಧ್ಯಾನವೆಂಬುರೆ ಧ್ಯೇಯವೆಂಬ ಧ್ಯಾನಿಪನೆಂಬ । ಧ್ಯಾನದ ಫಲವೆಂಬ ನಾಲ್ಕು ॥
ತಾನೊಬ್ಬನಾಗಿ ತನ್ನೊಳಗೆ ತಾನಿರ್ದನಾ । ತ್ಮಾನಂದನಾ ದಿವ್ಯಯೋಗಿ ॥ ೨೯ ॥

ಭೇದಸತ್ಕಾರಕವೆಂಬುದು ಬಂಧ ನಿ । ರ್ಭೇದಸತ್ಕಾರಕ ಮೋಕ್ಷ ॥
ವೇದಸಿದ್ಧಾಂತಕಸಾಧ್ಯವಾ ಕಲೆ ಸ್ವಸಂ । ವೇದನಾಗಮ್ಯನಲ್ಲಿರ್ದಾ ॥ ೩೦ ॥

ನುಡಿಗಳೊಳ್ತೋರ್ಪುದೆಂತುಟು ನುಡಿ ಪುದ್ಗಲ । ಜಡವದು ಹಂಸನೆ ಜ್ಞಾನಿ ॥
ಕಡೆಗೆ ಹಂಸನ ಹಂಸನಿಂದರಿದನುಭವ । ವಿಡಿದಾತ್ಮಗಿಹುದಾತ್ಮಸಿದ್ಧಿ ॥ ೩೧ ॥

ಶಿರದಿಂದ ಪಜ್ಜೆಮುಟ್ಟವಮಲಸುಜ್ಞಾನವೆ । ಪುರುಷರೂಪಾಗಿ ಮೈತುಂಬಿ ॥
ಪೊರೆಯೇರುತಿರ್ದುದಾ ಧ್ಯಾನದ ಸೊಬಗನಾ । ಭರತಯೋಗೀಂದ್ರನೆ ಬಲ್ಲಾ ॥ ೩೨ ॥

ನಗುವಂತೆ ಮೊಗವಿರ್ದುದಲುಗದೆ ಮೈಯಿರ್ದು । ದೊಗುವೊಲಿರ್ದುದು ಹೊಸಕಾಂತಿ ॥
ಪ್ರಗುಣಯೋಗಿಯು ನೋಡಿ ತುಟಿ ಮಿಸುಕದೆ ಮುಂದಿ । ತೆಗೆದಿರ್ದುದುರೆ ಬೆರಗಾಗಿ ॥ ೩೩ ॥

ಬಳಬಳನುದುರುತಿರ್ದುದು ಕರ್ಮ ಚಿತ್ಪ್ರಭೆ । ಚಳಚಳನೊಳಗೇರುತಿಹುದು ॥
ಎಳನೇಸರೊಳಗೈಕ್ಯವಾದಂತೆ ಪರಮಾತ್ಮ । ಕಳೆಯೊಳಿರ್ದನು ಯೋಗಿರತ್ನಾ ॥ ೩೪ ॥

ತೊಳಲಿ ನಾಡೆಲ್ಲವ ತನ್ನಯ ಮನೆಯ ಹೊ । ಕ್ಕಲಸಿಕೆಗಳೆವನಂದದೊಳು ॥
ಇಳೆಯ ಚಿಂತೆಯೊಳಾಡಿದವನೀಶ ತನ್ನಾತ್ಮ । ನೊಳು ನಿಂದು ವಿಶ್ರಮಿಸಿದನು ॥ ೩೫ ॥

ಅಸ್ಥಿರಭವದೊಳು ಮೂಲೋಕವೆಂಬ ಪ । ರಸ್ಥಾನದೊಳಗಾಡಿ ಮುನ್ನ ॥
ದುಸ್ಸ್ಥಾನವೆಂದವ ತೊರೆದಾತ್ಮರೂಪೆಂಬ । ಸ್ವಸ್ಥಾನದೊಳಗಿರ್ದನಾಗ ॥ ೩೬ ॥

ಮೂಲೋಕದೊಳು ಸ್ಥಾನಲಾಭವೆಂಬುದು ಬಹು । ಕಾಲ ಹಲವುಬಾರಿಯಾಯ್ತು ॥
ಕಾಲಾನುಕಾಲಕೆ ದೊರಕಿತಾತ್ಮಸ್ಥಾನ । ವಾ ಲಾಭಕಧಿಕವಿನ್ನುಂಟೆ ॥ ೩೭ ॥

ಸಾಲುನಾಡುಗಳ ಮುನ್ನಾಳಿದನವು ಸಾವು । ಬಾಳುದೋರಿದುವು ಜಾರಿದುವು ॥
ಕೀಳುನಾಡೆಂದವ ತೊರೆದಾತ್ಮಕಳೆಯೆಂಬ । ಮೇಲುನಾಡಿನೊಳಿರ್ದನಾಗ ॥ ೩೮ ॥

ತಾಳಿದ ಮೈಯಷ್ಟು ತೆರಪಿನೊಳಹುದಿಂದು । ನಾಳೆ ಮೂಲೋಕದಷ್ಟಿಹುದು ॥
ಸಾಲದೆ ಪರಮಾತ್ಮಸಾಮ್ರಾಜ್ಯವಾ ನಾಡ । ನಾಳುತಿರ್ದನು ಯೋಗಿರಾಜಾ ॥ ೩೯ ॥

ಮಂತ್ರಿ ಸೇನಾಪತಿ ಮೊದಲಾದರಿರೆ ಪರ । ತಂತ್ರದಿ ಧರೆಯ ಮುನ್ನಾಳ್ದ ॥
ಸಂತೃಪ್ತಿವಡೆದಾತ್ಮರಾಜ್ಯವ ತಾನೆ ಸ್ವ । ತಂತ್ರದೊಳೊಲಿದಾಳುತಿರ್ದಾ ॥ ೪೦ ॥

ಎರವೆಂದು ಕಂಡು ಮುನ್ನಾಳ್ದನು ರಾಜ್ಯವ । ಸ್ಥಿರವೆಂದೆ ತನ್ನ ಕಂಡಿರ್ದಾ ॥
ಎರವೆಂಬುದೆರವಾಯ್ತು ಸ್ಥಿರ ತಾನೆ ಸ್ಥಿರವಾಯ್ತು । ಭರತೇಶ ಕಂಡಲ್ಲಿ ಹುಸಿಯೆ ॥ ೪೧ ॥

ತಾಯರ್ತಿ ತಂದೆಯರ್ತಿಯು ಮಕ್ಕಳರ್ತಿಯು । ಸ್ತ್ರೀಯರರ್ತಿಯು ನೋಡುವಾಗ ॥
ಮಾಯೆಯೆಂದೆ ನೋಡುತಾತ್ಮನೊಳಿರ್ದನಾ । ರಾಯ ಕಂಡುದು ಹುಸಿಯಾಯ್ತು ॥ ೪೨ ॥

ಲೋಕ ಮೆಚ್ಚುವವೊಲು ಬಾಹ್ಯದೊಳರ್ತಿಸು । ತೇಕಾಂತದೊಳಗಾತ್ಮಸುಖವಾ ॥
ಸ್ವೀಕರಿಸುತ ರಾಯನಿರ್ದನಂದಿನ ಸುವಿ । ವೇಕವಿಂದಿಗೆ ಫಲವಾಯ್ತು ॥ ೪೩ ॥

ಅಣುಮಾತ್ರ ಪರಸಂಗಹೊದ್ದದೆ ಕರ್ಮವ । ರ್ಗಣೆ ಬೇರೆ ಹಂಸ ಬೇರೆಂದು ॥
ತಣಿದು ತನ್ನೊಳು ನಿಂದು ನೋಡುತಿರ್ದನು ಕರ್ಮ । ಗಣ ಜಾರುತಿರ್ದುದತ್ತಿತ್ತ ॥ ೪೪ ॥

ಇಂದ್ರಿಯ ತನು ಚಿತ್ತ ವಚನ ಕರ್ಮಾಳಿ ಬೇ । ರಿಂದ್ರಾರ್ಚಿತಾತ್ಮ ಬೇರೆಂದು ॥
ನಾಂ ದ್ರವ್ಯಭಾವದೊಳ್ನಿರ್ಮಲನೆಂದು ಯೋ । ಗೀಂದ್ರ ತನ್ನನೆ ನೋಡುತಿರ್ದಾ ॥ ೪೫ ॥

ಶುದ್ಧನೆಂದೀಕ್ಷಿಸಿದರೆ ಶುದ್ಧನಹನಾತ್ಮ । ಬದ್ಧನೆಂದೀಕ್ಷಿಸೆ ಬದ್ಧಾ ॥
ಸಿದ್ಧಾಂತಕದು ತೋರದಾತ್ಮನಿಂದಾತ್ಮ ನಿ । ಬದ್ಧಿಸೆ ಕಾಣ್ಬನಾ ಕಲೆಯಾ ॥ ೪೬ ॥

ಸೂಚಿಪುವೈಸೆ ಶಾಸ್ತ್ರಗಳಾತ್ಮಗುಣಗಳ । ಯೋಚಿಸಿ ಸ್ಥಿರವ ಪೇಳುವುವು ॥
ವಾಚಾಮಗಮ್ಯವಸ್ತುವನೆಂತು ವಚನದಿ । ಗೋಚರಿಸುವರದಂತಿರಲಿ ॥ ೪೭ ॥

ಧ್ಯಾನಕೆ ಮುಖವಿಕ್ಕುವಾಗೊಮ್ಮೆ ಕರ್ಮ ಬೇ । ರಾನು ಬೇರೆಂದು ಯೋಚಿಸಿದಾ ॥
ಧ್ಯಾನದೊಳ್ನಿಂದ ಮೇಲಾ ಚಿಂತೆಹೋಯ್ತು ತ । ಲ್ಲೀನವಾಗಿರ್ದನಾತ್ಮನೊಳು ॥ ೪೮ ॥

ಗುರುಹಂಸನಾಥನೆಂಬಾನೆಂಬ ಸಂಕಲ್ಪ । ವೆರಡಿರುತಿರ್ದುದು ಮತ್ತೆ ॥
ಎರಡಳಿದೊಂದಾಗಿ ನಿರ್ವಿಕಲ್ಪದೊಳು ಭಾ । ಸುರಯೋಗಿ ತನ್ನೊಳಗಿರ್ದಾ ॥ ೪೯ ॥

ಜಂಪಾಪಾತಾಭಿಮುಖವಾಯ್ತು ಕರ್ಮೌಘ । ಸೊಂಪೇರಿತಾತ್ಮವಿಜ್ಞಾನಾ ॥
ಪೆಂಪಿನ ಧ್ಯಾನದೊಳಾ ತಪೋಧನನಿರೆ । ಕಂಪಿಸಿತೊಡನೆ ಮೂಲೋಕಾ ॥ ೫೦ ॥

ಮಿಡುಕಲೀಯದೆ ಮನವನು ತಡೆದಾತ್ಮನೊ । ಳಡಗಿಸಿ ನಿಷ್ಕಂಪನಾಗಿ ॥
ಕಡುಗಲಿ ನಿಂದ ಹಂಸಧ್ಯಾನನಿಷ್ಠೆಗೆ । ನಡುಗದಿಹುದೆ ಮೂರುಲೋಕಾ ॥ ೫೧ ॥

ತರುಣಿ ಪುಷ್ಪವ ನೀಡುತಿರೆ ಮಂಚವಲುಗಲಾ । ಕರದ ಪೂ ಜಗುಳಲಾರೈದು ॥
ಭರತೇಶ ಮುನಿಯಾದನಲ್ಲೆಯೆಂದಿಂದ್ರನ । ಚ್ಚರಿವಟ್ಟು ನುಡಿದನಂಗನೆಗೆ ॥ ೫೨ ॥

ಕುಳಿತಿರ್ದ ಗದ್ದುಗೆಯಲ್ಲಾಡೆ ಮುಗ್ಗಿ ಕೋ । ಮಲೆ ತನ್ನನಪ್ಪಲಾ ಫಣಿಪಾ ॥
ತಿಳಿದಹೋ ಭರತೇಶ ಮುನಿಯಾದನಲ್ಲೆಯೆಂ । ದೆಳೆಯುಳನಪ್ಪಿ ನುಡಿದನು ॥ ೫೩ ॥

ನಿಡುಗಲ್ಲ ಮೇಲೊಂದು ಸಿಂಹವಿರ್ದಾ ಕಲ್ಲು । ನಡುಗಲು ತಲೆಕೆಳಗಾಗಿ ॥
ಕೆಡೆವುತಿದ್ದೆಡೆಯೊಳೆಚ್ಚತ್ತು ಲಂಘಿಸಿ ಕೆಲ । ಗಡೆಗೆ ಸಾರ್ದಿರ್ದುದೊಪ್ಪದೊಳು ॥ ೫೪ ॥

ಶೀಡಿದ ಗಾಳಿಗೆ ಚಪ್ಪರ ಲತೆಗಳ । ಲ್ಲಾಡುವಂತಲುಗಿತು ಭೂಮಿ ॥
ನಾಡು ಬೀಡಚ್ಚರಿವಟ್ಟುದೇನೆಂದು ಕೊಂ । ಡಾಡಲಾ ಧ್ಯಾನಶಕ್ತಿಯನು ॥ ೫೫ ॥

ಭೋಗದೊಳಿರ್ದ ವ್ಯಂತರಖಚರರ ತಲೆ । ವಾಗಿಸಿದತಿಪರಾಕ್ರಮನು ॥
ಯೋಗಕೆ ಮುಖವಿಕ್ಕಿದಾಗ ಮೂಲೋಕವ । ತೂಗಾಡಿಸದೆ ಸುಮ್ಮನಿಹನೆ ॥ ೪೬ ॥

ಮಾಣದೆ ಚಿತ್ರಭೆಯೇರುತಿರ್ದುದು ಕರ್ಮ । ರೇಣು ಕೀಳ್ಪಡುತಿರ್ದುದದನು ॥
ಶ್ರೇಣಿಯಾರೋಹಣವೆಂಬರಿನ್ನದರೊಳ್ಪ । ಕಾಣಿಸಿ ಪೇಳ್ವೆನೆಲ್ಲರಿಗೆ ॥ ೪೭ ॥

ಆಗಮದೊಳು ಪದಿನಾಲ್ಕು ಗುಣಸ್ಥಾನ । ಯೋಗವ ಪೇಳ್ವರಂತವನು ॥
ಭಾಗಿಸಿ ಮೂರುಗುಣಸ್ಥಾನವೆಂದು ಪ್ರ । ಯೋಗಿಪರಧ್ಯಾತ್ಮದಲ್ಲಿ ॥ ೪೮ ॥

ಬಹಿರಾತ್ಮನೆಂದಂತರಾತ್ಮನೆಂದನುಪಮ । ಮಹಿಮೆಯ ಪರಮಾತ್ಮನೆಂದು ॥
ಬಹುವಚನವ ಮೂರುಮಾತಿನೊಳಡಗಿಪ । ರಿಹಃವಲ್ಲಿ ಪದಿನಾಲ್ಕುತಾಣಾ ॥ ೪೯ ॥

ತೊಡಗೆ ಮೂವರು ಬಹಿರಾತ್ಮರೊಂಭತ್ತಾಗೆ । ನಡುವಿರ್ದರಂತರಾತ್ಮಕರು ॥
ಕಡೆಯೊಳಿಬ್ಬರು ಪರಮಾತ್ಮರು ಪದಿನಾಲ್ವ । ರಡಕ ಮೂವರೊಳಿದು ಸುಗಮಾ ॥ ೫೦ ॥

ಬಹಿರಾತ್ಮನಲ್ಲಂತರಾತ್ಮನಾ ಭರತೇಶ । ಸಹಸದಿ ಪರಮಾತ್ಮನಾದ ॥
ಲಹರಿಯ ಪೇಳ್ವೆನಾಗಮವೆಂಬುದಧ್ಯಾತ್ಮ । ಮಹಿಮೆಯೊಳಡಗಲೆಂತೆನಲು ॥ ೫೧ ॥

ರಾಜಸಂಪದವ ತೊರೆದು ಯೋಗಿಯಾಗಿಯು । ರಾಜವೋಡಿಯ ಬಿಟ್ಟುದಿಲ್ಲ ॥
ತೇಜಸ್ವಿಯಲ್ಲವೆ ಮೊನೆದೋರಿ ಕರ್ಮದ । ಪೌಜಿಗೆ ತಾಗಿದಿರಾದಾ ॥ ೫೨ ॥

ಅಶ್ವರತ್ನವ ಬಿಟ್ಟನಹುದಾಗ ಚಿತ್ತವೆಂ । ಬಶ್ವವನೊಡನೆ ತಾನೇರಿ ॥
ವಿಶ್ವಕರ್ಮದ ಮೇಲೆ ಧ್ಯಾನಖಡ್ಗವನಾಂತು । ವಿಶ್ವತೋನೇತ್ರನೇರಿದನು ॥ ೫೩ ॥

ಮುಖವಿಕ್ಕಲೊಡನೆ ಮೂರಾಯುಷ್ಯ ತಡೆದುವಾ । ಸುಖಿ ಮುಂದೆ ತೇಜಿಯ ನೂಂಕೆ ॥
ಶಿಖಿಗಂಡ ರಸದಂತೆ ಕುಗತಿ ಮುಂತಾದ ದು । ರ್ಮುಖಕರ್ಮ ಜರಿದುವೀರೆಂಟು ॥ ೫೪ ॥

ಮುಂದೊತ್ತಲೆಂಟುಕಷಾಯ ಬಿದ್ದುವು ಕ್ಲೀಬ । ವೆಂದು ಸ್ತ್ರೀವೇದವೆಂದೆರಡು ॥
ನಿಂದಿರೆ ಛೀಯೆನೆ ಸರಿದುವು ಕಲಿ ಖಡ್ಗ । ದಿಂದಿಕ್ಕೆ ಷಂಢಗೆ ಪೆಣ್ಗೆ ॥ ೫೫ ॥

ಏರಿದನೊಡನೆ ಮುಂದರತಿಶೋಕಾದಿಯಾ । ದಾರುಕಷಾಯ ನೆಗ್ಗಿದುವು ॥
ಕೇರಿ ಮುಂದೊತ್ತಲು ಪುಂವೇದ ಕಂಗೆಟ್ಟು । ಹಾರಿತಾ ವೀರಗಾರಿದಿರು ॥ ೫೬ ॥

ಬಳಿಕ ಸಂಜ್ವಲನದ ಹಮ್ಮೊಮ್ಮೆ ಮುನಿಸೊಮ್ಮೆ । ತಲೆದೋರದೋಡಲಾ ಲೋಭಾ ॥
ಚಿಲುಮಾನದೊಳು ನಿಂದುದದರ ಬಾದರಗೂಡಿ । ಗಲಿಸಿತು ಮಾಯೆ ಹೋ ಧಿರುರೆ ॥ ೫೭ ॥

ದಾಯೆಂದು ಮುಂದೊತ್ತೆ ಲಘುಲೋಭ ಹೋಯ್ತಲ್ಲಿ । ಗಾ ಯೋಗಿ ಮೋಹರಾಕ್ಷಸನಾ ॥
ಆಯುಷ್ಯಭಾಷೆಯ ತೊತ್ತಳದುಳಿದು ವಿ । ಡಾಯುದಿಂದೆದ್ದನು ಮುಂದೆ ॥ ೫೮ ॥

ಬೋಧರೋಧಗಳು ನಾಲ್ಕವಧಿಲೋಚನದೊಂದು । ರೋಧ ಮುನ್ನಳಿದಿರ್ದುವುಳಿದ ॥
ಪ್ರಾಧೂರ್ತಪ್ರಕೃತಿಯನೆರಡುಪೆಟ್ಟಿನೊಳೊತ್ತಿ । ಬೋಧಿಪೆನೆಂದನುವಾದಾ ॥ ೫೯ ॥

ಪ್ರಚಲೆ ನಿದ್ರೆಯನೊಮ್ಮೆ ಧ್ಯಾನಖಡ್ಗದಿ ಪೊಯ್ದು । ಪ್ರಚುರಪಂಚಾಂತರಾಯವನು ॥
ನಿಚಿತಾಕ್ಷಿ ರೋಧವಮೂರೊಂದು ಚಿತ್ಪಿಹಿತವ । ಶುಚಿ ಪೊಯ್ದನೊಂದೆ ಪೆಟ್ಟಿನೊಳು ॥ ೭೦ ॥
ಜಾರಿದುವರುವತ್ತಮೂರು ಕರ್ಮಗಳಾಗ । ವಿಾರಿದನಂತರಾತ್ಮತೆಯಾ ॥
ತೋರಿತು ಪರಮಾತ್ಮಸಂಪತ್ತು ಮುನಿಯಲ್ಲ । ಧೀರನಾ ಕ್ಷಣ ಜಿನನಾದಾ ॥ ೭೧ ॥

ಮನಸು ವಾಹನವೆಂದು ಧ್ಯಾನ ಕೂರಸಿಯೆಂದು । ಮುನಿ ಹೊಯ್ಬನೇರಿದನೆಂಬ ॥
ಧ್ವನಿಯೆಲ್ಲ ರಚನೆ ತಾಂ ತನ್ನ ನಿಟ್ಟಿಸೆ ಕರ್ಮ । ಹನಿತುದೆಂಬುದು ಸಹಜಾರ್ಥಾ ॥ ೭೨ ॥
ವಿರಚಿಸುವುದು ತಳುವಾಯ್ತೆೃಸೆ ಕರ್ಮನಿ । ಜರ್ರೆಗೆಯ್ದ ಕಾಲ ನೋಳ್ಪಾಗ ॥
ಎರಡುಗಳಿಗೆಗಿಷ್ಟು ಕಡಮೆಯೋನೆಂಬೆನಾ । ಪರಮಾತ್ಮಯೋಗಶಕ್ತಿಯನು ॥ ೭೩ ॥
ಘಾತಿನಾಲ್ಕಳಿಯಲನಂತಚತುಷ್ಟಯೋ । ದ್ಭೂತಿಯಾಯ್ತಲ್ಲಿ ಮತ್ತೈದು ॥
ಮಾತ ತಳ್ತೊಂಭತ್ತು ಲಬ್ಧಿಯೆಂಬರು ತದ್ವಿ । ಭೂತಿಯಾಯ್ತಾ ನಿರಂಜನಗೆ ॥ ೭೪ ॥
ಕೈವಲ್ಯಸುಜ್ಞಾನ ಕೈವಲ್ಯದರ್ಶನ । ಕೈವಲ್ಯಸುಖಶಕ್ತಿಯೆಂಬ ॥
ನೈವಾರ್ಯವಲ್ಲದನಂತಚತುಷ್ಟಯ । ಶ್ರೀ ವಶವಾದುದೇನೆಂಬೆ ॥ ೭೫ ॥
ಮದ ನಿದ್ರೆ ಹಸಿವು ಮರಣ ತೃಷೆ ಮೊದಲಾದ । ಹದಿನೆಂಟುದೋಷ ಜಾರಿದುವು ॥
ತ್ರಿದಶನರೋರಗರಗಣಿತಸುಖವ ವಿಾ । ರಿದ ನಿಜಸುಖ ಸಮನಿಸಿತು ॥ ೭೬ ॥
ಕಾಣ್ಬನರಿವನಾಗ ಜಗದೊಳಹೊರಗನಾ । ಕಾಣ್ಬಷ್ಟು ತ್ರಿಜಗವನೊಮ್ಮೆ ॥
ಮಣ್ಬಟ್ಟಲೊಂದನೆತ್ತುವವೊಲೆತ್ತುವ ಶಕ್ತಿ । ಜಾಣ್ಬಟ್ಟು ನೆಲಸಿತೇನೆಂಬೆ ॥ ೭೭ ॥
ಕವಿದ ಕರ್ಮದ ಮುಸುಕಳಿಯೆ ಶುದ್ಧಾತ್ಮನ । ಸ್ತುವಿನ ಚಿತ್ಪ್ರಭೆ ಪೊರಪೊಣ್ಮೆ ॥
ರವಿಚಂದ್ರಕೋಟಿಪ್ರಕಾಶ ವೈಯಿಂದುಕ್ಕಿ । ಭುವನವ ತುಂಬಿತಾ ಕ್ಷಣವೆ ॥ ೭೮ ॥
ಕರ್ಮ ಪೈಸರಿಸಿದಷ್ಟಕೆ ತನು ಲಘುವಾಗಿ । ನಿರ್ಮಲಶಿಲೆಯಿಂದ ಕೂಡೆ ॥
ಭರ್ಮಕಾಂತಿಯ ಗಿರಿ ನೆಗೆವಂತೆ ಪರಮಜ್ಯೋ । ತಿರ್ಮಯ ನೆಗೆದನಂಬರಕೆ ॥ ೭೯ ॥
ವಿಲಸಿತಸಿದ್ಧಲೋಕಕೆ ದಾಳಿಯಿಡುವೆನೆಂ । ದೆಳಸಿ ಪ್ರಸ್ಥಾನಗೈದಂತೆ ॥
ನೆಲದಿಂದ ಮೇಲೈದುಸಾವಿರಮಾರಿನೊ । ಳ್ನಿಲಸಿದನಾ ಪರಮಾತ್ಮಾ ॥ ೮೦ ॥
ತೆರೆವಿಡಿದೊತ್ತಿಲಿರ್ದವರಾಗ ದೂರವಾ । ದರು ಕೂಡೆ ಕೈಗಳ ಮುಗಿದು ॥
ಶಿರವೆತ್ತಿ ನೋಡುತ ಜಯಜಯವೆನುತಿರೆ । ಭರತಜಿನೇಂದ್ರ ಮೇಲಿರ್ದಾ ॥ ೮೧ ॥

ಹಾ ನೋಡು ಭರತೇಶ ಜಿನನಾಥನೇಳಿಗೆ । ಮಾನಿನಿ ಮಣಿವವೆಂದಿಂದ್ರಾ ॥
ವಿಾನಾಕ್ಷಿವೆರಸಿ ನಿರ್ಜರರೊಡನೆಯ್ತಂ ಬೆ । ಳ್ವಾನೆಯನಡರ್ದಿಳೆಗಿಳಿದಾ ॥ ೮೨ ॥
ಮೇಲಣಿಂದಿಂದ್ರನೆಯ್ತರುತಿರಲಿತ್ತ ಪಾ । ತಾಳದಿಂದುರಗೇಂದ್ರ ತನ್ನ ।
ಬಾಲೆವೆರಸಿ ಫಣಿಗಣಗೂಡಿ ಸುರವಾದ್ಯ । ಜಾಲದೊಳೆಯ್ತರುತಿರ್ದಾ ॥ ೮೩ ॥

ಭರತಜಿನೇಶ್ವರ ಭವರೋಗವೈದ್ಯ ಚೆ । ಲ್ವರ ಚೆಲ್ವ ಜಯಜಯಯೆನುತ ॥
ಬರುತಿರ್ದರಂಬರೇಚರರು ಕಿನ್ನರರು ಕಿಂ । ಪುರುಷರು ದಿಕ್ಕುದಿಕ್ಕಿಂದ ॥ ೮೪ ॥

ಧನದನಾ ಕ್ಷಣ ಗಂಧಕುಟಿಯನೊಡ್ಡಿದನಲ್ಲಿ । ಕನಕಾಬ್ಜ ಕರ್ಣಿಕಾರವನು ॥
ಇನಿತು ಸೋಂಕದೆ ಕಮಲಾಸನದಲ್ಲಿ ಪಾ । ವನಪರಂಜ್ಯೋತಿಯೊಪ್ಪಿದನು ॥ ೮೫ ॥

ಪುರುನಾಥನೊಡನಿರ್ದ ಜಿನರು ಚಾರಣರೆಲ್ಲ । ಪರಿದೆದ್ದು ಬೇಗ ಬಂದಾಗ ॥
ಭರತನಾಥನ ಸಾರ್ದರೇನಿದು ತಂದೆಯು । ಸಿರಿ ಮಗಗೆಂಬ ಪದ್ಧತಿಯೊ ॥ ೮೬ ॥

ತಂದೆಯ ಮಂತ್ರಿ ಕುಮಾರನ ಸಾರ್ವುದು । ಚಂದವೆಂದೋಜೆಯ ನೆನೆದು ॥
ಬಂದನೊಯೆನಲು ತೇಜೋರಾಶಿಮುನಿ ಬಂದು । ವಂದಿಸಿ ಕುಳಿತನು ಜಿನಗೆ ॥ ೮೭ ॥

ಸುರಪನು ಫಣಿಪನು ತನ್ಮಾತಮ್ಮರಸಿಯು । ರ್ವೆರಸಿ ಪಾದಾನತರಾಗಿ ॥
ಪರಿಪರಿಯಲಿ ಸ್ತುತಿಸಿದರು ಪೂಜಿಸಿದರಾ । ದುರಿತನಿರ್ಧೂಮಧಾಮನನು ॥ ೮೮ ॥

ಸುರಗಣವೆಲ್ಲವು ಭಕ್ತಿಮಾಡಿತು ಕೂಡೆ । ಧರೆಯಲ್ಲಿ ನಿಂದಿರ್ದರಾಗ ॥
ಪರಿದು ಸೋಪಾನವನಡರಿ ಬಂದಾ ಜಿನೇ । ಶ್ವರಗೆರಗಿದರರ್ತಿಯಿಂದ ॥ ೮೯ ॥

ಅರ್ಕಕೀರ್ತ್ಯಾದಿರಾಜರ ಮುಖ ನಗೆವೆತ್ತು । ವರ್ಕನ ಕಂಡಬ್ಜದಂತೆ ॥
ಸಾರ್ಕೆಯ ಸಖರು ಮುಂತಾದವರೆಲ್ಲ ಕು । ಳಿಕೊರ್ಳಿಡಿದರು ನೋಡಿ ಜಿನನಾ ॥ ೯೦ ॥

ಪರಮಾತ್ಮಸಿದ್ಧಿಯೆಂತೆಲೆ ಸ್ವಾಮಿಯೆಂದಿಂದ್ರ । ಕರಗಳ ಮುಗಿದನಷ್ಟರೊಳು ॥
ಭರತಸರ್ವಜ್ಞ ದಿವ್ಯಧ್ವನಿಯಿಂದ ವಿ । ಸ್ತರಿಸಿದನೇನ ಬಣ್ಣಿಪೆನು ॥ ೯೧ ॥

ಆತ್ಮಸಿದ್ಧಿಯದೇನು ಗಣ್ಯವೈಯಿಂದ್ರ ಕೇ । ಳಾತ್ಮ ಬೇರಂಗ ಬೇರೆಂದು ॥
ಆತ್ಮನಿಂದಾತ್ಮನ ನೋಡಿದರಪ್ಪುದೆಂ । ದಾತ್ಮಾರ್ಥಿಗೊರೆದನಾ ಸ್ವಾಮಿ ॥ ೯೨ ॥

ಪಂಚಾಸ್ತಿಕಾಯ ಷಡ್ದ್ರವ್ಯದಿ ಸಪ್ತತ । ತ್ತ್ವಂಚಿತನವಪದಾರ್ಥದಲಿ ॥
ಪ್ರಾಂಚಿತಾತ್ಮನೆ ಉಪಾದೇಯನಿನ್ನುಳಿದ ಪ್ರ । ಪಂಚವೆಲ್ಲವು ಹೇಯವೆಂದಾ ॥ ೯೩ ॥

ಚೇತನವಾಗಲಚೇತನವಾಗಲಿ । ಚೇತನದೊಡನಚೇತನವು ॥
ಓತು ಮಿಶ್ರಿತವಾಗಲೆಲ್ಲವು ಪರವಸ್ತು । ಪೂತಾತ್ಮ ನಿಜವಸ್ತುವೆಂದಾ ॥ ೯೪ ॥

ಪರವಸ್ತುರತರೀಗ ಪರಸಮಯಿಗಳಾತ್ಮ । ನಿರತರೆ ನಿಜಸಮಯಿಗಳು ॥
ಪರರ ಸಾರ್ದೊಡೆ ಬಂಧ ತನ್ನ ಸಾರ್ದೊಡೆ ಮೋಕ್ಷ । ಪರಮರಹಸ್ಯವಿದೆಂದಾ ॥ ೯೫ ॥

ದೇವ ತಾಪಸ ಶಾಸ್ತ್ರವೆಂದಿವಿರಿಟ್ಟೊಲ್ದು । ಭಾವಿಸೆ ತನುಸುಖವಹುದು ॥
ಕೈವಲ್ಯಸುಖಕೆ ತನ್ನನೆ ನೋಡಬೇಕನ್ಯ । ಭಾವದಿಂದಾಗದೈಯೆಂದಾ ॥ ೯೬ ॥

ಧ್ಯಾನವ ಸಾಧಿಸುವಾಗನ್ಯವಸ್ತುಸಂ । ತಾನವ ಮೊದಲೆಯ್ದಬೇಕು ॥
ತಾನೆ ತನ್ನೊಳು ನಿಂದಮೇಲನ್ಯಸಂಗವ । ನೇನುಳಿಯದೆ ಬಿಡಬೇಕು ॥ ೯೭ ॥

ಉಂಡರೇನುಟ್ಟರೇನಬಲೆಯರೊಳು ಭೋಗ । ಗೊಂಡರೇನವು ತನ್ನವೆಂದು ॥
ಕಂಡರೆ ಕೆಟ್ಟನನ್ಯಗಳೆಂಬ ಮತಿ ದೃಢ । ಗೊಂಡು ಭೋಗಿಸೆ ಕೆಡನೆಂದಾ ॥ ೯೮ ॥

ಭಾವದೊಳಾತ್ಮನ ನೋಡುತ ಸುಖವನೆ । ಸೇವಿಸುತಿದು ನನ್ನದೆನುತ ॥
ಆ ವಸ್ತುವಿಂದನ್ಯವೆಲ್ಲವು ಪರವೆಂಬ । ಭಾವನೆಯಿರೆ ಕೆಡನವನು ॥ ೯೯ ॥

ಬಿರಿಸಾದ ಕರ್ಮಬಂಧಿಗಳು ಬಾಹ್ಯಾರ್ಥವ । ತೊರೆದಾತ್ಮಸುಖವ ಸಾಧಿಪರು ॥
ಉರೆ ಮೃದುಕರ್ಮಿಗಳನ್ಯವಿದ್ದರು ತಮ್ಮೊ । ಳೆರಗಿ ಮುಕ್ತಿಯ ಗಳಿಸುವರು ॥ ೧೦೦ ॥

ಪುರುನಾಥಭುಜಬಲಿನಾಥರು ಭವವ ನಿ । ಷ್ಠುರಯೋಗದಿಂದ ನೂಂಕಿದರು ॥
ಪರಿನೋಡು ನಾವೀಗ ಮೃದುವಿಂದ ಭವವನು । ತ್ತರಿಸಿದೆವಿದೆ ಸಾಕ್ಷಿಯೆಂದಾ ॥ ೧೦೧ ॥

ಧ್ಯಾನಸಾಮರ್ಥ್ಯವನಾರು ಬಲ್ಲರು ತನ್ನ । ತಾನೆ ಕಂಡಾಗ ತಾಂ ಬಲ್ಲಾ ॥
ನಾನಾವಿಚಾರಕಿಂತಿದು ಕಟ್ಟಕಡೆಯ ಸಂ । ಧಾನವೈ ಭವ್ಯ ಕೇಳೆಂದಾ ॥ ೧೦೨ ॥

ದಿನದಿನಕಾತ್ಮಾನುಭವ ಹೆಚ್ಚಿದಷ್ಟಕೆ । ತನುಸುಖ ತಾನೆ ತಗ್ಗುವುದು ॥
ತನಗೆ ತಾನೆ ಬಾಹ್ಯವೆಲ್ಲವ ತೊರೆವನಾ । ತ್ಮನ ಪೊರ್ದಿ ಸುಖಿಯಹನೆಂದಾ ॥ ೧೦೩ ॥

ತನ್ನಲ್ಲಿ ತಾ ನಿಂದರಘ ತಾನೆ ಜರಿವುದು । ಭಿನ್ನದೇಹಗಳು ಬೇರಹುವು ॥
ಅನ್ನಿಗಾರಾರ್ಕೊಡಬೇಕಾತ್ಮಸಿದ್ಧಿಯು । ತನ್ನ ತಾಂ ಪಡೆವನೈಯೆಂದಾ ॥ ೧೦೪ ॥

ಪರಮಾಣುಮಾತ್ರಪುದ್ಗಲವಸ್ತು ಬೆರಸದೆ । ವರಹಂಸ ನಿಂದರಂತದನು ॥
ಪರಮಾತ್ಮಸಿದ್ಧಿಯೆಂದೆಂಬರೆಂದೊರೆದನಾ । ಭರತಜಿನೇಂದ್ರನಿಂದ್ರನಿಗೆ ॥ ೧೦೫ ॥

ನವಗೊಂದು ಕಾರ್ಯವುಂಟಮರೇಂದ್ರ ಸೈರಿಸೆಂ । ದವಸರಗೊಂಡಷ್ಟರೊಳಗೆ ॥
ಕುವರರು ಸಖಮಂತ್ರಿಭೂಪರೊಕ್ಕಲರು ತಾ । ವವಗಾಢ ಮಿಗೆ ನಿಂದರೊಸೆದು ॥ ೧೦೬ ॥

ಸುರುಚಿರದೀಕ್ಷೆಯ ಪಾಲಿಸಿ ನಮ್ಮನು । ದ್ಧರಿಸೆಲೆ ಸ್ವಾಮಿಯೆಂದೆಲ್ಲ ॥
ಭರದಿಂದ ವೃಷಭರಾಜನ ಮುಂದೆ ಮಾಡಿಕೊಂ । ಡಿರದೆ ಮೈಯಿಕ್ಕಿದರ್ಜಿನಗೆ ॥ ೧೦೭ ॥

ಭವತು ಜೋತ್ತಿಷ್ಠತಯೆಂದು ಸ್ವಾಮಿಯು ದಿವ್ಯ । ರವ ಪೊಣ್ಮೆತೊಡನೆದ್ದರವರು ॥
ದಿವಿಜೇಂದ್ರಫಣಿಪತೇಜೋರಾಶಿಮುನಿಗಳು । ತ್ಸವಿಸೆ ದೀಕ್ಷೆಯನಿತ್ತನೊಡನೆ ॥ ೧೦೮ ॥

ರವಿಕೀರ್ತಿ ಮೊದಲಾದ ನೂರ್ವರಿಗಂದಾದಿ । ಶಿವ ದೀಕ್ಷೆಗೊಟ್ಟ ರೀತಿಯೊಳು ॥
ಇವರಿಗಿಂದೀ ಸ್ವಾಮಿ ದೀಕ್ಷೆಯನಿತ್ತನೆ । ಲ್ಲವನಾಡಲೇಕದು ಸಾಕು ॥ ೧೦೯ ॥

ಅರುಹ ನಮ್ಮಂಬಿಕೆಯರಿಗೆ ನಾದುನಿಯರ್ಗೆ । ಕರುಣಿಸು ದೀಕ್ಷೆಯನೆಂದು ॥
ಒರೆದರ್ಕಕೀರ್ತ್ಯಾದಿರಾಜರೆರಗೆ ಜಿನೇ । ಶ್ವರನೇಳೆನಲೆದ್ದರೊಡನೆ ॥ ೧೧೦ ॥

ಉರಗೇಂದ್ರನರಸಿಯರಿಂದ್ರನ ಸತಿಯರು । ತೆರೆವಿಡಿದರು ನಲ್ಮೆಯಿಂದ ॥
ಕರೆತಂದು ಮುನಿಗಳಾ ಪುಣ್ಯಕಾಂತೆಯರನಾ । ತೆರೆಯೊಳು ಪುಗಿಸಿದರಾಗ ॥ ೧೧೧ ॥

ಗಂಡ ದೀಕ್ಷೆಯನಾಂತರಿಂದು ದೀಕ್ಷೆಗೆ ಬಂದ । ಪೆಂಡಿರ ನೋಡಿದರೈಸೆ ॥
ಕಂಡು ಬಲ್ಲರೆ ಮುನ್ನ ಚಕ್ರಿಯ ಪೆಂಡಿರ । ಗಂಡೆಂಬ ನೆಳಲೊಳನ್ನಿಗರು ॥ ೧೧೨ ॥

ಸುರವಾದ್ಯವೊಳಗೆ ತೇಜೋರಾಶಿ ಮೊದಲಾದ । ಗುರುಗಳು ಪೊರ್ದಿ ಸತ್ಕರಿಸೆ ॥
ನಿರುಪಮದೀಕ್ಷೆಯನಾ ಪುಣ್ಯ ಸತಿಯರೆ । ಲ್ಲರಿಗಿತ್ತನಾ ಪರಂಜ್ಯೋತಿ ॥ ೧೧೩ ॥

ಅಂದು ಯಶಸ್ವತಿಗಾ ಸುನಂದಾರ್ಯೆಗೆ । ಸಂದಂತೆ ದೀಕ್ಷೋಪಯೋಗಾ ॥
ಇಂದಿವರ್ಗಾಯ್ತೆಂದು ಬಿಡುವೆನು ಮುನ್ನೊಮ್ಮೆ । ಬಂದ ನುಡಿಯೆ ಬರಲೇಕೆ ॥ ೧೧೪ ॥

ಹಾರ ಪದಕ ಲುಳಿ ಕಡಗ ಕಾಂಚೀದಾಮ । ವೀರಮುದ್ರಿಕೆಗಳ ತೆಗೆದು ॥
ದೂರ ಬೀಸಾಡಿದರೇರಿದ ಕಾಮವಿ । ಕಾರವ ಕಡೆಗಿಡುವಂತೆ ॥ ೧೧೫ ॥

ಕೊರಲೇಕಸರ ಪಂಚಸರ ತ್ರಿಸರವ ಪರಿ । ದರಲಂಬನೆಸುಗೆ ತಮ್ಮತ್ತ ॥
ಬರಬಾರದೆಂದು ದಿಗ್ಬಂಧನಗೈವಂತೆ । ಮುರಿದಿಟ್ಟರುರೆ ದೆಸೆದೆಸೆಗೆ ॥ ೧೧೬ ॥

ನಡುವಿನ ಚಿಂತಾಕು ಕೊರಳ ಚಿಂತಾಕು ಬ । ಲ್ಮಡಿಯ ಮುತ್ತಿನ ಬಲೆಗಳನು ॥
ಕಡೆಗೆ ಬೀಸಾಡಿದರಿನ್ನಿವು ದೇಹಕೆ । ತೊಡಕೆಂದು ಕೂಡೆ ಕೊಕ್ಕರಿಸಿ ॥ ೧೧೭ ॥

ಹರಳೋಲೆ ಮುತ್ತಿನ ಬೊಟ್ಟು ಮೂಗುತಿ ರನ್ನ । ವೆರೆದ್ವೈರದಾಳಿಯ ತೆಗೆದು ॥
ಧರೆಗಿಟ್ಟರಾವಾವ ಕಾಲಕು ಸ್ತ್ರೀಜನ್ಮ । ದೊರಕಬೇಡೆಂಬ ಭಾವದೊಳು ॥ ೧೧೮ ॥

ಕಂಡಕಡೆಗೆ ರನ್ನಗೊಂಡೆಯ ಮಾಣಿಕ । ಪೆಂಡೆಯಗಳ ಕೆದರಿದರು ॥
ಗಂಡ ಕೈಬಿಡಲೊಳಗೇರಿದ ವಿರಹದ । ಕೆಂಡವ ಹೊರಗಿಡುವಂತೆ ॥ ೧೧೯ ॥

ಸರಪಣಿ ಪಿಲ್ಲಿ ಮಿಂಟಿಗೆ ಪಾದಸರ ಗೌಳ । ಸರ ಭುಜಕೀರ್ತಿ ಮುಂತಾದ ॥
ಪರಿಪರಿಯಾಭರಣಂಗಳ ಬಿಸುಟರೊಂ । ದರೆ ಹುಲಿಸಕೆ ಸರಿಗಂಡು ॥ ೧೨೦ ॥

ಹರಣಕೆ ತನುವಿಗಲಂಕಾರವೆನಿಸಿದ । ಪುರುಷರತ್ನನನಗಲ್ದವರು ॥
ಹರಳುಕಲ್ಲುಗಳ ಹೊತ್ತಿಹರೆ ಬಿಟ್ಟರು ನೋಡಿ । ಸುರಕಾಂತೆಯರು ಬೆರಗಾಗೆ ॥ ೧೨೧ ॥

ಗಾತ್ರ ಪೈಸರಿಸದೋಜೆಯೊಳು ವಿರಕ್ತಿ ತ । ನ್ಮಾತ್ರ ಚಿತ್ತದೊಳು ಧೈರ್ಯದೊಳು ॥
ಕ್ಷತ್ರಿಯಕಾಂತೆಯರಲ್ಲವೆ ಬಿಸುಟರು । ಸೂತ್ರಿಸಿದಖಿಲಭೂಷಣವ ॥ ೧೨೨ ॥

ಲಗ್ಗೆಯೊಳೆಲ್ಲರೊಂದೆ ಬಾರಿ ನಳಿನರಿ । ಗಗ್ಗರಿ ಫಣಿಫುಳಿರೆನಲು ॥
ನೆಗ್ಗಿದರೊಡನಿಟ್ಟ ಬಳೆಗಳ ಮೋಹವ । ನುಗ್ಗೊತ್ತುವಂತೆ ಧೀರೆಯರು ॥ ೧೨೩ ॥

ಅತ್ತೆಯರನು ನೋಡಿ ಸೊಸೆಯರು ಸೊಸೆಯರೊಂ । ದುತ್ತುಂಗಧೈರ್ಯವ ನೋಡಿ ॥
ಅತ್ತೆಯರ್ಮೆಚ್ಚುತ ದಂದುಗವಳಿದು ಸು । ಚಿತ್ತದಿ ದೀಕ್ಷೆದಾಳಿದರು ॥ ೧೨೪ ॥

ಬಳೆನೆಗ್ಗಿ ತೊಡಿಗೆಯನೀಡಾಡಿ ದೀರ್ಘಕುಂ । ತಳವ ಬೋಳಿಸುವಾಗ ಕಂಡು ॥
ಕೆಲದೊಳಿರ್ದವರು ಗೋಳಿಟ್ಟರೆ ಜಿನಸಭೆ । ಯೊಳು ಶೋಕವಿಲ್ಲ ತಾಳಿದರು ॥ ೧೨೫ ॥

ಮಾಣಿಕ್ಯವಗಲಿ ಕಮಂಡಲು ಜಪಸರ । ಪಾಣಿಗೆ ಸಾರ್ದುವಾಗವರ ॥
ರಾಣಿಯರೆಂಬುದು ಹೋದುದಕ್ಕಗಳೆಂದು । ಕೇಣಿಗೊಂಡುದು ಪೊಸವೆಸರು ॥ ೧೨೬ ॥
ಕಂತಿಯರೆನೆ ಲೋಚು ಬಿರಿಸದನಿದ್ದಿದ್ದು । ಪಂಥದಿ ಸಾಧಿಸುದೆಂದು
ಗ್ರಂಥಿಯ ಬಿಡಿಸಿ ಬಿಟ್ಟಕ್ಕಗಳೆಂಬೊಂದು । ಪಂತಿಯೊಳಿಟ್ಟನಾ ಜಿನನು ॥ ೧೨೭ ॥
ತೊಲಗಿತು ತೆರೆ ವಾದ್ಯ ನಿಂದುವಾಗೊಂದೊಂದು । ಬಿಳಿದಿನ ಸೀರೆವಾತ್ರದೊಳು ॥
ತಲೆಸೆರಗಿನ ಮುಸುಕಿನೊಳು ಶಾಂತದೊಳಿರ್ದ । ರೆಳೆಲತೆ ದೀಕ್ಷೆಗೊಂಡಂತೆ ॥ ೧೨೮ ॥
ಫಣಿಪನಂಗನೆಯರು ಸುರಪನಂಗನೆಯರು । ಮಣಿದರು ಸಭೆ ನಮಿಸಿದುದು ॥
ಕುಣಿದಾಡಿ ದಿವಿಜರು ಪುಷ್ಪವೃಷ್ಟಿಯ ನಭೋಂ । ಗಣದಲ್ಲಿ ಕರೆದರರ್ತಿಯೊಳು ॥ ೧೨೯ ॥
ಪೊಸಮುನಿಗಳು ಮುನಿಗೋಷ್ಠಿಯೊಳ್ಕುಳಿತರಾ । ಪೊಸತಿನಕ್ಕಗಳು ಕಂತಿಯರ ॥
ಪಸರಕೆ ಸಾರ್ದರಾ ವಾರ್ತೆಯೆಂಬುದು ಪತ್ತು । ದೆಸೆಗೆ ಹೋಯ್ತಾ ಕ್ಷಣದಲ್ಲಿ ॥ ೧೩೦ ॥

ಚಕ್ರಿಯ ಸ್ತ್ರೀರತ್ನ ನರಕಕೆಯ್ದುವಳೆಂದು । ವಕ್ರದೊಳ್ಕೆಲಬರಾಡುವರು ॥
ಅಕ್ರಮವಾ ಮಾತು ಪರಮಸಿದ್ಧಾಂತವಾ । ಕ್ಯಕ್ರಮವೊಂದುಂಟು ಕೇಳಿ ॥ ೧೩೧ ॥
ದುರ್ಗತಿಗೆಯ್ದುವ ಚಕ್ರಿಯ ಸ್ತ್ರೀರತ್ನ । ದುರ್ಗತಿಗೆಯ್ದುವಳ್ಸಹಜ ॥
ಸ್ವರ್ಗಕೆ ಮುಕ್ತಿಗೆಯ್ದುವರ ಸ್ತ್ರೀರತ್ನಕೆ । ಸ್ವರ್ಗವಿಂತಿದು ಸುಸಿದ್ಧಾಂತಾ ॥ ೧೩೨ ॥
ಪುರುಷರ ಪರಿಣಾಮಕನುಸಾರಿಯಾದೊಂದು । ಪರಿಣಾಮ ಸ್ತ್ರೀರತ್ನಕಿಹುದು ॥
ಪುರುಷನೆಯ್ದಿದ ಗತಿಯತ್ಯಲ್ಪದೂರ ಸಾ । ರಿರುತಿಹಳವಳದರಿಂದ ॥ ೧೩೩ ॥
ಸುತ ಮೋಕ್ಷಗಾಮಿ ಸೋದರ ಮೋಕ್ಷಗಾಮಿ ತ । ತ್ಪತಿ ಭರತೇಶನೆಂಬಾಗ ॥
ಸತಿಸುಭದ್ರಾದೇವಿ ಸ್ವರ್ಗವೈದುವಳಾಗಿ । ನುತದೀಕ್ಷೆವಡೆದಳೋಜೆಯೊಳು ॥ ೧೩೪ ॥
ಭರತಚಕ್ರಿಯ ಪೊತ್ತ ಬೋಯಿಗಳಿಗೆ ಸ್ವರ್ಗ । ನೆರೆದಗ್ರಸತಿಗುಂಟೆ ಕುಗತಿ ॥
ಕರ ಶುಚಿದೇಹಿಯಾಕೆಗೆ ಕಮಂಡಲುವಿಲ್ಲ । ಬೆರಸಿರ್ದಳಜ್ಜಿಕೆಗಳೊಳು ॥ ೧೩೫ ॥
ಮೇನಕಾವಿಟನರ್ಕಕೀರ್ತ್ಯಾದಿರಾಜರಾ । ಸ್ಥಾನದೊಳಿರ್ದರೋಜೆಯೊಳು ॥
ಜೈನೇಂದ್ರ ಕಮಲಪೀಠದೊಳಿರ್ದನಿಂತಿದು । **ಧ್ಯಾನಸಾಮರ್ಥ್ಯದ ಸಂಧಿ** ॥ ೧೩೬ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೩೭ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೩೮ ॥
ತೃಣವ ಸುಡುವ ಕಿಚ್ಚಿನಂತಷ್ಟಕರ್ಮವ । ಕ್ಷಣಕೆ ಸುಡುವ ಶಕ್ತಿಯುಳ್ಳ ॥
ಗಣನಾತೀತ ನನ್ನೆದೆಯೊಳಿರಮೃತದ । ಕಣಿಯೆ ಚಿದಂಬರಪುರುಷಾ ॥ ೧೩೯ ॥

ಧ್ಯಾನಸಾಮರ್ಥ್ಯಸಂಧಿ ಸಂಪೂರ್ಣಂ

## ಚಕ್ರೇಶಕೈವಲ್ಯಸಂಧಿ

ವಿಸ್ಮಯರೂಪ ವಿಚಿತ್ರಸಾಮರ್ಥ್ಯ ಆ । ಕಸ್ಮಿಕಮಹಿಮ ಮಹೇಶಾ ॥
ಅಸ್ಮದಾರಾಧ್ಯ ಸನ್ಮತಿದೋರು ದಶದಿಶಾ । ರಶ್ಮಿ ನಿರಂಜನಸಿದ್ಧಾ ॥ ೧ ॥

ಹಂಸಹಂಸಾ ಮಹಾದೇವಯೇನೆಂಬೆನಾ । ಹಂಸನಾಥಾರಾಧ್ಯ ಚಕ್ರಿ ॥
ಪ್ರಾಂಶುಪದವ ಪೆತ್ತರೊಡನೆ ತನ್ನವರಂತೆ । ಸಂಸಿದ್ಧಿವಡೆದರೇನೆಂಬೆ ॥ ೨ ॥

ನಡುವಗಲಲ್ಲಿ ಘಾತಿಯನಿಕ್ಕಿ ಚಕ್ರಿ ಸಂ । ಗಡದವರ್ಗಿತ್ತ ದೀಕ್ಷೆಯನು ॥
ಕಡುಚಿತ್ರ ವೃಷಭಯೋಗಿಗೆ ಘಾತಿಕರ್ಮವಾ । ಕಡೆವಗಲೊಳು ಕೆಟ್ಟುದೊಡನೆ ॥ ೩ ॥

ತಳುವಿಲ್ಲದೆನ್ನಯ್ಯ ಕರ್ಮವ ನೀಗಿ ನಾ । ನಲಸಿಪ್ಪುದೋ ಜೆಯೆಯೆಂದು ॥
ಛಲಹುಟ್ಟಿ ಸಾಧಿಸಿದನೊಯೆಂಬ ತೆರದೊಳಾ । ಕಲಿಯೋಗಿ ಪರಮಾತ್ಮನಾದಾ ॥ ೪ ॥

ತಂದೆ ಚಿಕ್ಕಂದು ತನ್ನಯ ಕೈಯ ನೋಡೆ ತಾ । ತಂದೆಯ ಕೈಯ ನೋಡಿದನು ॥
ಅಂದು ನೀನಾನೊಂದೆ ಪರಿಯೆಂದು ನುಡಿದಿರ್ದ । ನಿಂದಿಗಾ ನುಡಿ ದೃಷ್ಟವಾಯ್ತು ॥ ೫ ॥

ಚಂದ್ರಿಕಾದೇವಿಯಕ್ಕಗಳಾಗ ಹರುಷಾಂಬು । ಧೀಂದ್ರದೊಳ್ಮುಳುಗಿದರೊಡನೆ ॥
ಇಂದ್ರಾರ್ಚಿತಾರ್ಯೆಯರೆಲ್ಲರುಬ್ಬಿದರು ಜಿ । ನೇಂದ್ರನಾಸ್ಥಾನ ಕೀರ್ತಿಸಿತು ॥ ೬ ॥

ನೆರವಿ ದೀಕ್ಷೆಯನಾಂತ ಚಿಂತೆಯೊಳಿರ್ದ ಸೋ । ದರ ಕೂಡೆ ಜಿನನಾಗೆ ಕಂಡು ॥
ಧಿರುರೆ ನನ್ನೊಡೆಯಯೆಂದರ್ಕಕೀರ್ತ್ಯಾದಿರಾ । ಜರು ಕುಣಿದಾಡಿದರೊಡನೆ ॥ ೭ ॥

ಅಜ್ಜನ ಪೆಸರನಂದಪ್ಪಾಜಿಯಿಟ್ಟುದು । ಪಜ್ಜಳಿಸಿದುದಿಂದು ಭವವಾ ॥
ಜಜ್ಜುಗುಟ್ಟಿದೆಯಲಾ ಭಾಪು ಸಾಹಸಿಯೆಂದು । ಪಜ್ಜೆಗೆ ನಮಿಸಿದರೊಸೆದು ॥ ೮ ॥

ನಾಗರಮುನಿಗನುಕೂಲಯೋಗಿಗೆ ಬುದ್ಧಿ । ಸಾಗರದಕ್ಷಿಣಾರ್ಯರಿಗೆ ॥
ಆಗಳೆ ಅವಧಿಚೇತೋಜ್ಞಾನವಾದುವೇ । ನಾಗವೆ ಚಕ್ರಿಯಾಪ್ತರಿಗೆ ॥ ೯ ॥

ಮತ್ತೆ ಕೆಲರುಕುವರರಿಗೆ ಭೂಭುಜರಿಗಾ । ಪೊತ್ತಿನೊಳವಧಿ ಮುಂತಾದ ॥
ಉತ್ತಮಸಿದ್ಧಿಗಳಾದುವಾತ್ಮಾರಾಮ । ನೊತ್ತಿನವರಿಗದು ಘನವೆ ॥ ೧೦ ॥

ವಿರಚಿಸಿದರು ಕೂಡೆ ಗಂಧಕುಟಿಯನೊಲ್ದು । ನರಸುರೋರಗರರ್ಚಿಸಿದರು ॥
ಭರತಜಿನನ ಸಾರೆ ವೃಷಭಜಿನೇಶ್ವರ । ನರಮನೆಗಟ್ಟಿದನಾಗ ॥ ೧೧ ॥

ಆ ರಾತ್ರಿ ಬೆಳಗಿನೊಳಗೆ ಹೋಯ್ತು ರವಿ ಮೂಡ । ಲಾರಾಧ್ಯ ಭರತಸರ್ವಜ್ಞಾ ॥
ದೂರಿತನಿರ್ಘಾತಿಗಳನಿಕ್ಕಲನುವಾದ । ವೀರವನೇನ ಬಣ್ಣಿಪೆನು ॥ ೧೨ ॥

ಗಂಧಕುಟಿಯನುಳಿದನು ದೀಕ್ಷೆಗೊಂಡ ಶ್ರೀ । ಗಂಧವೃಕ್ಷದ ಮೊದಲ್ಗಿಳಿದು ॥
ಬಂಧುರಶಿಲೆಯಲ್ಲಿ ಪಲ್ಯಂಕಯೋಗಾನು । ಬಂಧದಿ ಕುಳಿತನಾ ಸ್ವಾಮಿ ॥ ೧೩ ॥

ಪರಮೌದಾರಿಕದೇಹದೊಳ್ತುಂಬಿರ್ದ । ಪರಮಾತ್ಮನೆಂಬ ಪಾಲ್ಗಡಲಾ ॥
ಧರೆಯಿಂದ ಸುರಲೋಕದಗ್ರಕೆತ್ತುವನೆಂಬ । ಸ್ಮರಣೆಯಿರ್ದುದು ಮಹಾತ್ಮನಿಗೆ ॥ ೧೪ ॥

ನೊಚ್ಚಿತಾಗಿರ್ದುದಾಯುಷ್ಯ ಕರ್ಮತ್ರಯ । ಹೆಚ್ಚಿರ್ದವವ ಕುಂದುಮಾಡಿ ॥
ಕೊಚ್ಚಿ ಬಿಡುವೆನೆಂದು ನಾಲ್ಕು ಸಮುದ್ಘಾತ । ದುಚ್ಚಳತ್ಕಲೆಗೆಳಸಿದನು ॥ ೧೫ ॥

ಮೇಲಪರಂಜಿ ಕಾಸದೆ ಜಾಣ ತೆಗೆದತ್ತ । ನೂಲಂತೆ ಬಪ್ಪವೊಲ್ಕವರ್ಾ ॥
ಗಾಳಿಸಿದಮಲಾತ್ಮವಸ್ತುವಾ ಪರಮಾತ್ಮ । ಹೇಳಿದಂತಾದುದೇನೆಂಬೆ ॥ ೧೬ ॥

ಆಪರಂಜಿ ಬೇರದು ತೆಗೆವನು ಬೇರದು । ಉಪಚಾರವಂತು ತಾನಲ್ಲ ॥
ಉಪಮಿಸಲರಿದಿದನಾತ್ಮನನಾತ್ಮನೆ । ವಿಪುಲಕೆ ತೆಗೆದನೆಂತೆನಲು ॥ ೧೭ ॥

ಬಗೆದನು ಮೊದಲೊಮ್ಮೆ ದಂಡದಾಕಾರವ । ಪ್ರಗುಣಾತ್ಮ ಮೈಯಿಂದ ಪೊಣ್ಮೆ ॥
ಜಗವೆಂಬ ಹಡಗಿನ ನಡುವೊಂದು ಕೂಕಂಭ । ನೆಗೆದಂತೆ ನಿಂದಿರ್ದನಾಗ ॥ ೧೮ ॥

ರಾಜಿಪ ಶಿಲೆಯಲ್ಲಿ ಬಾಹ್ಯಾಂಗವಿರ್ದುದು । ತೈಜಸಕಾರ್ಮಣಗೂಡಿ ॥
ಮೂಜಗದುದ್ದದೊಳಾತ್ಮ ನಿಂದಿರ್ದನು । ಸೋಜಿಗವಲ್ತೆ ಚಿದ್ಘನತೆ ॥ ೧೯ ॥

ಔದಾರಿಕಾಂಗಕೆ ಮುಮ್ಮಡಿದಟ್ಟದೊ । ಳಾದಿಯಿಂದಂತ್ಯಕೆ ನೋಡೆ ॥
ವೇದಿಸಿ ಹದಿನಾಲ್ಕುರಜ್ಜುವಿನುದ್ದದೊ । ಳಾ ದಿವ್ಯವಸ್ತು ರಾಜಿಸಿತು ॥ ೨೦ ॥

ಆದನೆ ಕವಾಟಕೆಂದೆತ್ತಿದನೆತ್ತಿದಂ । ದದೊಳದು ಬರುತಿರ್ದುದೊಡನೆ ॥
ಮೊದಲಂತೆ ಮುಮ್ಮಡಿದಟ್ಟದೀ ಲೋಕಕೆ । ಕ್ಕದ ಕದವೆಂಬವೊಲಾಯ್ತು ॥ ೨೧ ॥

ದಕ್ಷಿಣೋತ್ತರಕೇಳುರಜ್ಜುವಿನಗಲದಿ । ಮೋಕ್ಷದಿಂ ತಳಲೋಕದಡಿಗೆ ॥
ಈಕ್ಷಿಸೆ ಪದಿನಾಲ್ಕುರಜ್ಜುವಿನುದ್ದದೊ । ಳಾ ಕ್ಷಣ ನಿಂದಿರ್ದನಾತ್ಮಾ ॥ ೨೨ ॥

ಆಲಿಸಿ ಪ್ರತರೆಗೆಂದೊಡರಿಸಿದನು ಮೂರು । ಗಾಳಿಯಿಂದೊಳಗಾತ್ಮವಸ್ತು ॥
ಮೂಲೋಕತುಂಬಿ ಮಹಾಕುಂಭತುಂಬಿದ । ಪಾಲಂತೆ ತುಂಬಿರ್ದುದೊಡನೆ ॥ ೨೩ ॥

ಎಳೆಬಿಸಿಲೆಂತು ಬೆಳ್ಳಗಿಲೆಂತು ಮಂಜೆಂತು । ಬೆಳುದಿಂಗಳೆಂತೊಮ್ಮೆ ಜಗವಾ ॥
ಮುಳುಗಿಕೊಂಡಿಪ್ಪವಂತಾತ್ಮ ಮೂಜಗವನ । ಗ್ಗಳವೆತ್ತು ತುಂಬಿರ್ದನಾಗ ॥ ೨೪ ॥

ಎತ್ತಿದನೊಡನೆ ಪೂರಣೆಗೆಂದು ಲೋಕವ । ಸುತ್ತಿದ ಮೂರುಗಾಳಿಯನು ॥
ಮತ್ತೊಳಕೊಂಡು ಮೂಲೋಕಕೆ ಮುಸುಕಿಟ್ಟ । ಬಿತ್ತರದಂತಿರ್ದನಾತ್ಮಾ ॥ ೨೫ ॥

ಕಡೆಮೊದಲಿಗೆ ಲೋಕವೆಲ್ಲ ಶುದ್ಧಾತ್ಮನೊ । ಳಡಗಿರ್ದುದಾ ಸಮಯದೊಳು ॥
ಪೊಡವಿಯೆಲ್ಲವು ದೇವನುದರದೊಳಿಹುದೆಂಬ । ನುಡಿ ಹುಟ್ಟಿತಖಿಲಲೋಕದೊಳು ॥ ೨೬ ॥

ಲೋಕವನೆರಡುಮೈವೆರಸಿ ಪರ್ವಿಸಿದನಾ । ಲೋಕನ ಸುಜ್ಞಾನವೆರಡು ॥
ಲೋಕದ ಹೊರಗಣಾಕಾಶವ ಮುಸುಕಿದ್ದು । ವೇಕೋ ಹಂಸನದ್ವೈತವೆನಲು ॥ ೨೭ ॥

ಗುರುಪುಂಸಹಂಸ ಶ್ರೀಹಂಸಮಾಹಾತ್ಮ್ಯವಾ । ಪುರುನಾಥಭರತನಾಥರಿಗೆ ॥
ಪರಿಗಮ್ಯವಲ್ಲದೆ ನರರಿಗೆ ಗಮ್ಯವೆ । ಧರೆಯ ದಾಂಟಿರ್ದುದತ್ತತ್ತ ॥ ೨೮ ॥

ಕಡೆಗಂಡು ಷಟ್ಖಂಡದೊಳು ದಾಳಿಗೈದುರಿ । ಗೊಡನಂದು ತಿರುಗಿದಂದದೊಳು ॥
ತುಡುಕಿ ಮೂಲೋಕವ ಮೊದಲಿರ್ದ ದೇಹದ । ತ್ತಡಿಯಿಟ್ಟನಾ ಮಹಾಮಹಿಮಾ ॥ ೨೯ ॥
ಭುವನಪೂರಣದಿಂದ ಪ್ರತರೆಗಿಳಿದು ಮತ್ತೆ । ಪ್ರವರಕವಾಟಕೆ ಸಂದು ॥
ಹವಣಿಸಿ ದಂಡದಾಯತವಾಗಿ ತೊರೆದು ದೇ । ಹವ ಪೊಕ್ಕು ಮುನ್ನಿನಂತಿರ್ದಾ ॥ ೩೦ ॥
ಪಿರಿದಾದ ವಾಙ್ಮನೋದೇಹಸಂಚಲವನೊ । ತ್ತರಿಸುತಲ್ಪಾಲ್ಪಕೆ ತರುತ ॥
ವರಗೋತ್ರನಾಮವೇದನವನಾಯುಷ್ಯಕೆ । ಸರಿಗೈದನಾ ಜಾಣರೊಡೆಯಾ ॥ ೩೧ ॥
ಪುದಿದ ಘಾತಿಯನಿಕ್ಕಲೊಡನಾಯ್ತು ಜಿನನಾಮ । ವದೆ ತೀರ್ಥಂಕರನಾಮವವಗೆ ॥
ಅದು ಕೂಡೆ ಶೇಷಕರ್ಮವನಿಕ್ಕುತಿರ್ದನ । ಗ್ಗದ ವೀರರೊಡೆಯನೇನೆಂಬೆ ॥ ೩೨ ॥
ಕೆಡೆದುವೆಪ್ಪತ್ತೆರಡೊಮ್ಮೆ ಕರ್ಮಗಳವ । ರೊಡನೆ ಬಿದ್ದುವು ಪದಿಮೂರು ॥
ಕುಡುಮಿಂಚಿನಂತಂಗ ಬಯಲಾಗೆ ಜಗದ ಮೇ । ಲ್ಗಡೆಗೆ ಲಂಘಿಸಿದನಾ ಸ್ವಾಮಿ ॥ ೩೩ ॥
ಸಂಚಿತವಿವರಣೆ ಜೋಲಿಯಾಯ್ತೆ್ಯಸೆ ಯೋ । ಗಾಂಚಿತಕಾಲ ನೋಳ್ಪಾಗ ॥
ಪಂಚಹ್ರಸ್ವಾಕ್ಷರದೋದಿನಷ್ಟೆ ಕಾಲ । ಹೊಂಚಿ ಮರ್ದಿಸಿದನಷ್ಟರೊಳು ॥ ೩೪ ॥
ಸಮಯವೆಂಬುದು ಸೂಕ್ಷ್ಮಕಾಲವದರಳೊಂದೆ । ಸಮಯದೊಳೇಳುರಜ್ಜುವನು ॥
ಗಮಿಸಿ ಲೋಕಾಗ್ರದೊಳ್ನೆಲಸಿದನೆಂದರೇ । ನಮಮ ಸಾಮರ್ಥ್ಯನೊ ಹಂಸಾ ॥ ೩೫ ॥
ಬದ್ಧಾಷ್ಟಕರ್ಮಗಳಳಿದುವು ಕೂಡೆ ವಿ । ಶುದ್ಧಾಷ್ಟಗುಣ ನೆಲಸಿದುವು ॥
ಉದ್ಧತ ನೃಪ ಮುನಿ ಜಿನನೆಂಬ ನುಡಿ ಹೋಯ್ತು । ಸಿದ್ಧನಾಗಿರ್ದನಾ ಹಂಸಾ ॥ ೩೬ ॥
ದಿವ್ಯಸಮ್ಯಕ್ತ್ವಸುಜ್ಞಾನವೀಕ್ಷಣಶಕ್ತಿ । ದಿವ್ಯಸೂಕ್ಷ್ಮತ್ವಾವಗಾಹಾ ॥
ದಿವ್ಯನಿರ್ಗುರು ಲಘು ನಿರ್ಬಾಧೆಯೆಂದಿಂತು । ದಿವ್ಯಾಷ್ಟಗುಣದೊಳೊಪ್ಪಿದನು ॥ ೩೭ ॥
ಗಳೆ ಪಡಿ ಪ್ರತರೆ ಪೂರ್ಣದಿ ತೆರಪಾದಂದ । ವಳಿದಚ್ಚಪುರುಷರೂಪಿನೊಳು ॥
ತಳೆದ ಮೈಗೇನಾನು ನಸುಕುಂದದಳತೆಯೊ । ಳ್ನೆಲೆಗೊಂಡನಾತ್ಮ ಮೋಕ್ಷದೊಳು ॥ ೩೮ ॥
ಭರತೇಶನೆಂಬುದು ದೇಹ ಹೋದಂದೆ ಹೋ । ಯ್ತರರೆ ಸಿದ್ಧರ ಸಮೂಹದೊಳು ॥
ತಿರುಗದ ಹಾದಿಯ ಹೋಗಿ ಮುಕ್ತಿಯೊಳು ನಿಂ । ದಿರುತಿರ್ದನಾ ಸಿದ್ಧನತ್ತ ॥ ೩೯ ॥

ಶ್ರೀಹಂಸಹಂಸ ನೋಡೇನೆಂಬೆನೊಡನಿತ್ತ । ಲಾ ಹೊತ್ತಿನೊಳು ಪಂಚಸುತರು ।
ಮೋಹದ ಘಾತಿಯನಿಕ್ಕಿ ಬಾಂಗಡೆಯೊಳು । ತ್ಸಾಹವೆತ್ತಿರ್ದರಾಶ್ಚರ್ಯಾ ॥ ೪೦ ॥
ಹಂಸಯೋಗಿಗೆ ನಿರಂಜನಸಿದ್ಧಮುನಿಗೆ ಮ । ಹಾಂಶುಯೋಗಿಗೆ ರತ್ನಮುನಿಗೆ ॥
ಸಂಸುಖಿಮುನಿಗೆ ಕೈವಲ್ಯಬೋಧಾವಾಪ್ತಿ । ಸಂಸಿದ್ಧಿಯಾಯ್ತೊಂದೆಬಾರಿ. ॥ ೪೧ ॥

ಹುಟ್ಟುವಾಗವರೊಂದೇ ಬಾರಿ ಹುಟ್ಟಿದರೀಗ । ಹುಟ್ಟಿತೊಂದೇಬಾರಿ ಮಹಿಮೆ ॥
ತೊಟ್ಟನೆ ಭರತೇಶ ಮುಕ್ತಿಗೆಯ್ದಿದ ನೋವು । ಹುಟ್ಟಿತಿಲ್ಲವರ್ಗದರಿಂದ ॥ ೪೨ ॥
ಪಂಚಮಗತಿಗಯ್ಯನತ್ತಲೆಯ್ದಿದರಿತ್ತ । ಪಂಚಪುತ್ರರು ಘಾತಿಗಳನು ॥
ಪಂಚತ್ವವೊಗಿಸಿದರೆಂಬಾಗ ಧರೆಯೊಳ । ದೇಂ ಚೆಲ್ವೊ ಚಕ್ರಿಯ ಬದುಕು ॥ ೪೩ ॥
ಶ್ರೀಮಾಲೆಯಕ್ಕಗಳ್ವನಮಾಲೆಯಕ್ಕಗ । ಳಾ ಮಣಿದೇವಿಯಕ್ಕಗಳು ॥
ಹೇಮರಾಜಿಯಕ್ಕಗಳ್ಗುಣಮಾಲೆಯಕ್ಕಗ । ಳಾಮೋದವೆತ್ತರುಬ್ಬಿದರು ॥ ೪೪ ॥
ಮಕ್ಕಳ ಪೆತ್ತವರ್ಮಕ್ಕಳ ಸಿರಿಯು ಕಂ । ಡುಕ್ಕದಿಹರೆ ನಲ್ಮೆಯಿಂದ ॥
ಮಿಕ್ಕಿನಕ್ಕಗಳು ಸಂತಸವ ತಾಳ್ದರು ದಶ । ದಿಕ್ಕಿನ ಪರಿಸೆ ಕೀರ್ತಿಸಿತು ॥ ೪೫ ॥
ತಂದೆ ಹೋದಳಲರ್ಕಕೀರ್ತ್ಯಾದಿರಾಜರ್ಗೆ । ಸಂದಿಸಿತಿಲ್ಲ ಸೋದರರು ॥
ಬಂದೇ ಬಾರುನ್ನತಿವೆತ್ತುದಕೆದೆಯೊಳಾ । ನಂದಿಸುತಿರ್ದರಚ್ಚರಿಸಿ ॥ ೪೬ ॥
ದೊರೆಗಳ್ಗೆ ಕೆಲರಿಗೆ ಕುವರರ್ಗೆ ಕೆಲರಿಗೆ । ವರವಿಟ ಮೊದಲಾದ ಸಖರ್ಗೆ ॥
ದೊರೆದುವಾಗವಧಿ ಮುಂತಾದ ಸಂಪದವದೇ । ನರಿದೆ ಚಕ್ರಿಯ ಸೋಂಕಿನವರ್ಗೆ ॥ ೪೭ ॥
ಮಾಗಧನುಬ್ಬಿ ನನ್ನೊಡೆಯನೀ ಧರೆಯೊಳಿ । ದ್ದಾಗ ಸರ್ವರಿಗರ್ತಿಗೈದು ॥
ಹೋಗುತ ಸರ್ವರಿಗರ್ತಿಮಾಡಿದನೆಂದು । ರಾಗಿಸಿ ಕೈಯೆತ್ತಿ ಪೊಗಳ್ದ ॥ ೪೮ ॥
ವರತನು ವಿಜಯಾರ್ಧ ಹಿಮವಂತ ಮೊದಲಾದ । ರರರೆ ಲೇಸೆಂದರಂತದನೆ ॥
ವರಸಿಂಧುದೇವಗಂಗಾದೇವನವರುಬ್ಬಿ । ಸ್ಮರಿಸುತಿರ್ದರು ಚಕ್ರಧರನಾ ॥ ೪೯ ॥
ಅನುಪಮವೆನೆ ಪಂಚಗಂಧಕುಟಿಯ ಪಂಚ । ಜಿನರಿಗಾ ಕ್ಷಣ ರಚಿಸಿದರು ॥
ಮನುಜನಾಗಾಮರರರ್ಚಿಸಿದರು ಜನ । ಜನಿತವಾದುದು ಮಹಾಮಹಿಮೆ ॥ ೫೦ ॥
ಭರತಸರ್ವಜ್ಞ ಮುಕ್ತಿಗೆ ಸಂದ ಶಿಲೆಯು ಹ । ತ್ತಿರ ವಜ್ರ ಹೋಮವ ರಚಿಸಿ ॥
ಹರುಷನೃತ್ಯವನಾಡಲರ್ಕಕೀರ್ತ್ಯಾದಿರಾ । ಜರು ನೋಡುತಿರ್ದರರ್ತಿಯೊಳು ॥ ೫೧ ॥
ಭೂವಲಯದ ಭಾರವೆತ್ತ ತೊಂಭತ್ತಾರು । ಸಾವಿರಹೆಣ್ಣಾಟವೆತ್ತ ॥
ಕೈವಲ್ಯ ಕ್ಷಣಕಹುದೆತ್ತಲೆಂದುರಗೇಂದ್ರ । ಭಾವಿಸಿ ಪೊಗಳ್ದನಾ ವಿಭುವಾ ॥ ೫೨ ॥
ತನಗೆ ತಾಂ ಗುರುವಾಗಿ ದೀಕ್ಷೆಯನಾಂತು ತ । ನ್ನನೆ ತಾನು ತನ್ನಲ್ಲಿ ನೋಡಿ ॥
ತನುವಳಿದಮೃತವೆಯ್ದಿದನಹೊ ಪೂತು ಭಾ । ಪೆನುತಿರ್ದ ಮಕುಟವಲ್ಲಾಡೆ ॥ ೫೩ ॥
ಮೆಯ್ಯ ದಂಡಿಸಿದನೆ ಭಿಕ್ಷೆಗೆಂದೊರ್ವರ್ಗೆ । ಕೆಯ್ಯೊಡ್ಡಿದನೆ ಚಕ್ರಧರನು ॥
ಉಯ್ಯಲ ತೂಗಿದಂತಮೃತಕೆ ಸಂದ ಬ । ಲ್ಗೆಯ್ಯನಲ್ಲವೆ ಪುರೆಯೆಂದಾ ॥ ೫೪ ॥
ಗದ್ದುಗೆಯಿಳಿದು ಬಂದನು ಕೂಡೆ ಕಮಲದ । ಗದ್ದುಗೆಯೇರಿ ಮೆರೆದನು ॥
ಇದ್ದಿದ್ದ ಗಂಧಕುಟಿಯನು ಬಿಟ್ಟಮೃತೋರ್ವಿ । ಗೆದ್ದಾತನಿಗೆ ನಮೋಸ್ತೆಂದಾ ॥ ೫೫ ॥

ತಿರಿದುಂಡುದಿಲ್ಲ ತಪೋಮುದ್ರೆಯಾಂತಿಪ್ಪು । ತಿರುಗಾಡಿತಿಲ್ಲ ದೇಶದೊಳು ॥
ಸಿರಿಯೊಳಿರ್ದನು ಸಿರಿಯೊಳೆ ಪೋಗಿ ಮುಕ್ತಿಯ । ಸಿರಿಯಾಳ್ದನಹೊ ಪುರೆಯೆಂದಾ ॥ ೫೬ ॥
ಸಾಕಾಗದದ ಪೇಳುತಿರೆ ಕಲಿಯುಗದ ರ । ತ್ನಾಕರಸಿದ್ಧಗಿಪ್ಪಿರಲಿ ॥
ಸಾಕು ನಿಲ್ಲೆಂದಮರೇಂದ್ರ ವಿನೋದಾರ್ಥ । ವಾಕುದೋರಿದನನಿತರೊಳು ॥ ೫೭ ॥
ನಾನೆಷ್ಟರವನಿನ್ನು ರತ್ನಾಕರಸಿದ್ಧ । ತಾನೆಷ್ಟರವನು ಬಣ್ಣಿಪೊಡೆ ॥
ನೀನೆಷ್ಟರವನೆಂದು ನಾಗೇಂದ್ರ ಪೊಗಳ್ದನ । ತ್ಯಾನಂದ ಮಿಗೆ ಚಕ್ರಧರನಾ ॥ ೫೮ ॥
ಅಹುದಲಾ ಗುಣಕೆ ಮತ್ಸರವೆ ಚಕ್ರಿಯವೊಲು । ಬಹುಭಾರವಾಂತಿರ್ದು ಕ್ಷಣಕೆ ॥
ಸಹಜದಿ ಮುಕ್ತರಾದವರಾರು ನೀನಾಡ । ಬಹುದೆಂದನೊಡನೆ ದೇವೇಂದ್ರ ॥ ೫೯ ॥
ಆತನಂದದಿ ಮುಕ್ತಿ ನವಗಾಗಲೆಂದು ತ । ದ್ಭೂತಳಹೋಮಭಸ್ಮವನು ॥
ಪ್ರೀತಿಯಿಂದಮರೇಂದ್ರ ಧರಿಸಿದನುರಗೇಂದ್ರ । ನಾತುರದಿಂದಿಟ್ಟ ತಾನು ॥ ೬೦ ॥
ನೆರೆದರ್ಕಕೀರ್ತ್ಯಾದಿರಾಜ ಮುಂತಾದ ಸ । ರ್ವರು ಧರಿಸಿದರಕ್ಕರಿಂದ ॥
ಭರತನಾಥನ ಮೋಕ್ಷಕಲ್ಯಾಣ ಜಗವನು । ದ್ಧರಿಸಿತು ಸುಖವೆತ್ತರೆಲ್ಲ ॥ ೬೧ ॥
ತನು ಬಯಲಾಗಲೊಡನೆ ಗಂಧಕುಟಿ ಹೋಯ್ತು । ಮುನಿಗಳಜ್ಜಿಗಳು ಮುಂತಾದ ॥
ಜನಗಳಿದ್ದರುವರು ಜಿನರತ್ತ ಸಾರ್ದು ಮು । ನ್ನಿನವೊಲಿರ್ದರು ಸುಖದಲ್ಲಿ ॥ ೬೨ ॥
ಹರಿ ಭುಜಗೇಂದ್ರ ಗಂಗಾಸಿಂಧುದೇವ ವ್ಯಂ । ತರರು ಜಿನರಿಗಾರ್ಯಗಣಕೆ ॥
ಶಿರಮಣಿದರ್ಕಕೀರ್ತ್ಯಾದಿರಾಜರಿಗಿಂಪ । ನೊರೆದು ಸಾಗಿದರು ತಮ್ಮಾರ್ಗೆ ॥ ೬೩ ॥
ಅವರಂತೆ ಮಣಿದರ್ಕಕೀರ್ತ್ಯಾದಿರಾಜರಾ । ಗವೆ ತಮ್ಮ ಪುರಕೆ ಸಾಗಿದರು ॥
ವಿವಿಧದೇಶಕೆ ಗಂಧಕುಟಿಯೆಲ್ಲ ಪರಿದು ಪೋ । ದುವು ಕೂಡೆ ತದ್ಭೂಮಿಯಿಂದ ॥ ೬೪ ॥
ಮನೆಗೆಯ್ದಲೊಡನೆ ಮಾಗಧಗೆ ತನ್ನೊಡೆಯನ । ನೆನೆವುದು ಮರುಕದೋರಿದುದು ॥
ಜಿನಸಭೆಯೊಳು ಶೋಕವಿಲ್ಲಾಗಿ ಮುನ್ನ ಸು । ಮ್ಮನೆ ಹೋದನೈಸೆ ತಾಳುವನೆ ॥ ೬೫ ॥
ಭರತಚಕ್ರೇಶ ಹಾಹಾ ನನ್ನ ಸ್ವಾಮಿ ಹಾ । ಸುರಪನ ನಗುವ ಗಂಭೀರಾ ॥
ಪುರುಷರೂಪಿನ ಕಲ್ಪತರುವೆ ನೀನಿಂತು ಹೋ । ಹರೆ ಕೆಟ್ಟೆನಲ್ತೆ ಹಾ ಯೆಂದಾ ॥ ೬೬ ॥
ವೀರಕೆ ವಿನಯಕೆ ವಿದ್ಯಾಪರೀಕ್ಷೆಗು । ದಾರಕೆ ಶೃಂಗಾರರಸಕೆ ॥
ಧೀರಕೆ ಜಗದೊಳಪ್ರತಿಯಾದ ಹೊಸಹೊಂತ । ಕಾರಿ ಹಾಹಾ ಕೆಟ್ಟೆನೆಂದಾ ॥ ೬೭ ॥
ಓಲಗದೊಳು ನಿನ್ನ ಕಂಡಾಗ ಸ್ವರ್ಗ ಬಂ । ದೋಲೈಸಿದಂತಿಹುದೆನಗೆ ॥
ಊಳಿಗದವನ ನೀನೀಡಾಡಿ ಮೋಕ್ಷಕೆ । ದಾಳಿಮಾಡುವರೆ ಹಾಯೆಂದಾ ॥ ೬೮ ॥
ಬಿನ್ನವಿಸಿದರೆ ಪರಾಕುಮಾಡುವೆಯ ನಾ । ನನ್ನಿಗನೆಂದು ನೋಡುವೆಯ ॥
ಮನ್ನಣೆಯಲ್ಪವಿತ್ತೆಯ ಮುಕ್ತಿಗೆಯ್ದಿ ನೀ । ನೆನ್ನ ಕೊಂದೈ ಸ್ವಾಮಿಯೆಂದಾ ॥ ೬೯ ॥

ಅವನತ್ತಲಳುತಿರಲಿತ್ತಲ್ಪದೂರವೆ । ಯ್ದುವುದು ಚಿತ್ತದೊಳಳಲೇರಿ ॥
ತವೆ ಸಿಂಧುದೇವಗಂಗಾದೇವನವರು ಶೋ । ಕವನೆಸಗಿದರೇನನೆಂಬೆ ॥ ೭೦ ॥

ಭಾವ ಹಾ ನಮ್ಮ ನೀನೀಡಾಡಿ ಹೋಹರೆ । ನಾವಿನ್ನು ಬಾಳ್ವುದು ಬದುಕೆ ॥
ಸಾವೇಕೆ ಬಾರದು ನವಗೆಂದು ಕಣ್ಣೀರ । ತೀವಿ ಬಾಯಳಿದೊರಲಿದರು ॥ ೭೧ ॥

ನಿನ್ನ ಮೈದುನರೆಂದು ನುಡಿವಾಗ ನಮಗೆ ಕಿ । ವ್ಮಿನ್ನ ಬಾರದ ತೇಜವಿಹುದು ॥
ಇನ್ನಾರ ಬಲ್ಮೆಯುಂಟೆಂದು ಗೋಳಿಟ್ಟರು । ಹೊನ್ನ ನೀಗಿದ ಲೋಭಿಯಂತೆ ॥ ೭೨ ॥

ಸೇವಕರಾಗಿ ದೂರದೊಳಿರೆ ಲೇಸೆಂದು । ಸೇವೆಗೆ ಮೆಚ್ಚಿ ನೀನೆನಗೆ ॥
ಭಾವಮೈದುನರೆಂದು ವಿನಯುವ ಮಾಡಿಂತು । ನೋವುದೋರಿದೆ ಚಕ್ರವರ್ತಿ ॥ ೭೩ ॥

ಮರೆವುದೆಂತುಟು ನಿನ್ನ ವಿನಯವನೆಂದೆದೆ । ಮರುಗುತ ಬಟ್ಟೆಯೊಳೆಯ್ದಿ ॥
ಪಿರಿಚಿ ತಮ್ಮೂರ್ಮೆಯ್ದಿ ತಮ್ಮ ಪೆಂಡಿರಿಗದ । ನರುಹಿದರೊಡನುಬ್ಬಿತಳಲು ॥ ೭೪ ॥

ಕೆಟ್ಟೆವಣ್ಣಾಜಿ ಹಾಹಾ ಕಿಚ್ಚ ನೀನೆಮ್ಮ । ಹೊಟ್ಟೆಯೊಳ್ಪೊಯ್ದೆಯೈಯೆಂದು ॥
ತೊಟ್ಟನೆ ಭೂಮಿಗೆ ಬಿದ್ದರುಳಿದರೊಡ । ಹುಟ್ಟಿದರಳಲೇನು ಕಿರಿದೆ ॥ ೭೫ ॥

ಬಣ್ಣಿಗೆಕಾರ ಬಲ್ಲಿದರಿಗೆ ಬಲ್ಲಿದ । ಕಣ್ಣು ಮನದ ಮೆಚ್ಚಿನರಸೆ ॥
ಅಣ್ಣಾಜಿ ನಮ್ಮ ಕೊಂದೈಯೆಂದರಳಲಿಂದ । ಹೆಣ್ಣೊಡಹುಟ್ಟಿಗೆ ಸಹಜಾ ॥ ೭೬ ॥

ತಡೆವೆವು ಸಲುಗೆಯೊಳ್ಸೆರಗ ಪಿಡಿವೆವೆಮ್ಮ । ನುಡಿಯನಿನಿಸು ಮಾರೆಯಣ್ಣಾ ॥
ಕಡೆಯುಗಮುಟ್ಟರದೆಮ್ಮ ಕಣ್ಣಾರ್ತಿಯ । ಕೆಡಿಸಿ ಹೋಹರೆ ರಾಯರೊಡೆಯಾ ॥ ೭೭ ॥

ಪಟ್ಟದ ರಾಣಿಯು ನಲ್ಮೆಯೇನಾಯ್ತೊಡ । ಹುಟ್ಟಿದೆಮ್ಮಕ್ಕರೇನಾಯ್ತು ॥
ಬಟ್ಟೆಯೊಳೀಡಾಡಿದೈಯೆಂದು ಮರುಗಿದ । ಬೆಟ್ಟದ ಜೇನೆಗೊಂಡಂತೆ ॥ ೭೮ ॥

ಪೊಡವಿಯ ಸಿರಿಯಿಂದು ಹಾರಿತೆ ತವರೂರ । ಕಡೆಯಾಸೆ ಬಯಲಾಯ್ತೆ ನಮಗೆ ॥
ಕಡುಪಾಪಿಗಳ ಕಣ್ಣ ಮುಂದೆ ನೀನಿಹೆಯ ಕ । ನ್ನಡಿರೂಪಾಯೆಂದೊರಲಿದರು ॥ ೭೯ ॥

ದಿವಿಜೆಯರತ್ತಳುತಿರಲಿತ್ತ ರಾಯನ । ಕುವರಿಯರಾ ವಾರ್ತೆಗೇಳಿ ॥
ಜವಗುಂದಿ ಮೂರ್ಛೆವಟ್ಟೊಯ್ಯನೆಚ್ಚತ್ತು ಶೋ । ಕವ ಮಾಡುತಿರ್ದರೇನೆಂಬೆ ॥ ೮೦ ॥

ಅಪ್ಪಾಜಿ ಹಾ ನಮ್ಮ ನೀಡಾಡಿ ಜಗದಗ್ರ । ಕುಪ್ಪರಿಸಿದೆಯ ಹಾಯೆಂದು ॥
ದಪ್ಪವಳಿದು ಬೆದೆಬೆಂದರು ಶಿಶು ಬಿಸಿ । ತುಪ್ಪವ ಕುಡಿದ ರೀತಿಯೊಳು ॥ ೮೧ ॥

ಕುವರರು ಸೊಸೆಯರು ಪೆಂಡಿರನೆಲ್ಲರ । ಸವರಿಕೊಂಡಿಂತೆಯ್ದಿ ನಮ್ಮ ॥
ತವರುಮನೆಯ ಹಾಳುಮಾಳ್ಪುದು ನಿನಗೆ ಬ । ಲ್ಲವಿಕೆಯೆ ಷಟ್ಖಂಡದೊಡೆಯಾ ॥ ೮೨ ॥

ಆವಾವ ಕಾರ್ಯಕೂ ನೀನೆಮ್ಮ ಕರೆಸುವೆ । ಈ ವೇಳೆಯೊಳಗೇಕೆ ಮರೆತೆ ॥
ಹಾ ವಿಧಿಯೆಂದಳಲಿದರು ಮೂವತ್ತೆರ । ಳ್ಸಾವಿರಕುವರಿಯರೆಲ್ಲ ॥ ೮೩ ॥

ಅಳಿಯಂದಿರಳಲಿದರಲ್ಲಲ್ಲಿ ಹೆಣ್ಣನಿ । ತ್ತಿಳೆಯಾಣ್ಮರಳಲಿದರೆಲ್ಲ ॥
ಅಲರಂಬನಣುಗರು ಮೂವರು ಕೇಳ್ದು ಕು । ಪ್ಪಳಿಸಿ ಬಿದ್ದರು ಭೂಮಿಯಲ್ಲಿ ॥ ೮೪ ॥

ದೀಕ್ಷೆದಾಳಿದನೆಂಬ ಸುದ್ದಿಯ ಕೇಳಿ ತಾ । ವೀಕ್ಷಿಸಿ ಪಯಣಕುಜ್ಜುಗಿಸಿ ॥
ಮೋಕ್ಷಕೆಯ್ದಿದನೆನಲಲ್ಲಿಯೆ ಕೆಡೆದರು । ಪಕ್ಷ ಮುರಿದ ಪಕ್ಷಿಯಂತೆ ॥ ೮೫ ॥

ಅಯ್ಯೋ ಹಾಹಾ ಕೆಟ್ಟೆವೆಮ್ಮ ನೀನಿಂತುಟಾ । ರಯ್ಯದೆ ಪೋಪರೆ ತಂದೆ ॥
ಒಯ್ಯನೆಯ್ದಿದರೇನು ಬೇಗವಿಷ್ಟೇಕೆಂದು । ಹುಯ್ಯಲಿಟ್ಟಳಲಿದರವರು ॥ ೮೬ ॥

ಪಡೆದ ತಾಯ್ತಂದೆಯ ಹಂಗ ನಾವರಿಯೆವು । ಪಿಡಿದೆಮ್ಮ ನೀನೆ ರಕ್ಷಿಸಿದೆ ॥
ಕಡು ಸಿರಿಯಿತ್ತೆ ಸಂತಸದಲ್ಲಿ ನಡೆಸಿದೆ । ಕಡೆಗಿಂತುಟಹರೆ ಅಪ್ಪಾಜಿ ॥ ೮೭ ॥

ಸುಡು ಸುಡು ಸಿರಿಯ ನಿನ್ನಯ ಹಸ್ತದೊಳೆ ದೀಕ್ಷೆ । ವಡೆವ ಸೈಪಿಲ್ಲಾಯ್ತೆ ನಮಗೆ ॥
ಸಿಡಿದು ಹೋದೆಯಲಾ ಹಾಹಾಯೆಂದು ಮಿಳ್ಳಾಸ । ಮಿಡುಕುತಿರ್ದರು ಮೂವರತ್ತ ॥ ೮೮ ॥

ಶ್ರೀಜಿನಸಭೆಯ ಬೀಳ್ಕೊಂಡಿತ್ತ ತವ್ಮೊಡ । ನೋಜೆಯಿಂದೋಲೈಸಿ ಬರ್ಪ ॥
ಪೌಜನೆಲ್ಲವನು ಬೀಳ್ಕೊಟ್ಟರ್ಕಕೀರ್ತ್ಯಾದಿ । ರಾಜರು ಹೊಕ್ಕರು ಪುರವಾ ॥ ೮೯ ॥

ಬಿಮ್ಮಗಿದ್ದುದು ಪುರ ಪ್ರಜೆಗಳ ಕಂಗಳೊ । ಳುಮ್ಮುತಿರ್ದುದು ಕಣ್ಣ ನೀರು ॥
ಸುಮ್ಮನೆ ನೋಡುತ ಸುಯ್ಯುತ ಸಾರ್ದರು । ತಮ್ಮ ಚಾವಡಿಯನಾ ನೃಪರು ॥ ೯೦ ॥

ತಂದೆ ಕುಳ್ಳಿರುವ ಗದ್ದುಗೆಯ ಕಾಣುತ ಭುಗಿ । ಲೆಂದೆದ್ದುದೆದೆಯಲ್ಲಿ ಶೋಕಾ ॥
ಬಂದುವು ಕಣ್ಣೀರು ಸ್ವಾಮಿ ಹಾಹಾ ಕೆಟ್ಟೆ । ವೆಂದು ಬಾಯ್ಬಿಟ್ಟೊರಲಿದರು ॥ ೯೧ ॥

ಧೈರ್ಯ ಜಾರಿದುದೋಜೆ ಹಾರಿತು ನುಡಿಯ ಚಾ । ತುರ್ಯವೆಂಬುದು ಬಯಲಾಯ್ತು ॥
ಸೂರ್ಯನಿದ್ದವರಿಗಾಗಿರುಳಾಯ್ತು ಪಿತನ ಸೌಂ । ದರ್ಯದ ರೂಪು ತೋರದಿರೆ ॥ ೯೨ ॥

ಅಪ್ಪಾಜಿಯೆಲ್ಲಿದ್ದೆ ಷಟ್ಖಂಡದರಸುಗ । ಳ್ಕಪ್ಪವ ತಂದಿದ್ದರೆಲ್ಲ ॥
ಒಪ್ಪಿಸಿಕೊಳ್ಳಬೇಡವೆ ಮೊಗದೋರೆಂಬ । ರಿಪ್ಪ ಸೇವಕರು ಗೋಳಿಡಲು ॥ ೯೩ ॥

ಆಲಸ್ಯ ನಿನಗಿಲ್ಲ ನಿನ್ನ ಚಾವಡಿಗನು । ಕಾಲ ಸಂದಣಿ ತಪ್ಪದಿಂದು ॥
ಹಾಳುಸುರಿವುತಿದೆಯೆಂತು ನೋಡುವೆವೆಂದು । ಬಾಲೆಯರಂತೆ ಶೋಕಿಪರು ॥ ೯೪ ॥

ನಿನ್ನ ಕಾಣೆವು ನನ್ನ ಸೋದರರೊಬ್ಬರು । ಮುನ್ನಿನಂತೆಡೆಯಾಡರಿಲ್ಲಿ ॥
ರನ್ನದ ಚಾವಡಿ ಕಾಂತಿಗೆಟ್ಟಿದೆ ಕೆಟ್ಟೆ । ವಿನ್ನಾರು ಶರಣೆಮಗಯ್ಯಾ ॥ ೯೫ ॥

ಇಂತಳುತಿದ್ದಿದ್ದು ತಮ್ಮ ಬೇಗೆಯ ತಾವೆ । ಸಂತೈಸಿಕೊಂಡರು ಕೂಡೆ ॥
ಅಂತದಕೆಲ್ಲರರ್ತಿಸಿದರು ಭರತಭೂ । ಕಾಂತಪುತ್ರರಿಗದು ಸಹಜಾ ॥ ೯೬ ॥

ಸೇವಕರಾಪ್ತರ ಬೀಳ್ಕೊಟ್ಟು ಕೂಡೆ ತ । ಮ್ಮಾವಾಸದೊಳಹೊಕ್ಕರವರು ॥
ಕಾವಲೊಳಿರ್ದವರಿಪ್ಪರ ಕಾಣ್ಬಂತೆ । ಭಾವೆಯರ್ಕಂಡರ್ತಾವವರಾ ॥ ೯೭ ॥

ಕಿಕ್ಕಿರಿದಿರ್ದ ಪೆಣ್ಬಡೆ ಹೋದುದೀ ಮನೆ । ರಕ್ಕಸವೊಳಲಾಯ್ತು ನಮಗೆ ॥
ಹೊಕ್ಕಿದರೊಳು ಬಾಳ್ವುದೆಂತೆಂದರಾ ಮನೆ । ಚಿಕ್ಕದೆ ಹರವರಿಯಲ್ಕೆ ॥ ೯೮ ॥

ಅವರೆಲ್ಲರೊಡನೆಯಿದ್ದು ಬಾಳ್ವುದೆ ಸುಖ ನಾವು । ಭವನದೊಳುಳಿದುದಾಯ್ತಲ್ಲ ॥
ನವಗಿಂತು ತೋರುತಿರ್ದುದು ನಿಮ್ಮ ಮನದನು । ಭವವೆಂತೊಯೆನುತೊರಲಿದರು ॥ ೯೯ ॥

ಕಾಣೆವೆಮ್ಮತ್ತ್ಯಜಿಯರನು ಸೋದರಿಯರ । ಕಾಣೆವು ಮಾವಾಜಿಯರನು ॥
ಕ್ಷೀಣವೀ ಸಂಪತ್ತು ಛೀಯೆಂದು ಕುವರರ । ರಾಣಿಯರಾಡಿದರಳುತ ॥ ೧೦೦ ॥

ಭರತರಾಜನ ಸೊಸೆಯರು ನೋವುದೇನೂರ । ತರುಣಿಯರ್ನಾಡಕಾಂತೆಯರು ॥
ಪಿರಿದು ಶೋಕವ ಮಾಡಿದರು ಪರದಾರಸೋ । ದರ ಹೋದರಳಲಾಗದಿಹುದೆ ॥ ೧೦೧ ॥

ಗಣ್ಯ ನೀನಿಂತು ಹೋಹರೆ ವಸ್ತ್ರರತ್ನಹಿ । ರಣ್ಯಭೂದಾನಿ ಸಾಗುವರೆ ॥
ಪುಣ್ಯವಿಲ್ಲೆಮಗೆ ಹಾಹಾಯೆಂದು ನೆರೆದು ಬ್ರಾ । ಹ್ಮಣ್ಯ ಗೋಳಿಟ್ಟುದಲ್ಲಲ್ಲಿ ॥ ೧೦೨ ॥

ದಾರಿಗರೂರುಗರ್ನಾಡುಗರಿಹ ಪರಿ । ವಾರ ವಿದ್ವಾಂಸರು ನೃಪರು ॥
ನೀರುಗಣ್ಣೊಳು ಹಗಲಿರುಳು ಗೋಳಿಟ್ಟರಾ । ಮಾರನಗ್ರಜ ಮುಕ್ತಿಗೆಯ್ದೆ ॥ ೧೦೩ ॥

ಮನುಜರು ನೋವುದೇನಾನೆಕುದುರೆ ಗೋವು । ತನಿಹುಲ್ಲ ನೀರಾಶೆಯುಳಿದು ॥
ಹನಿವ ಕಂಬನಿಯಿಂದ ದೂನಿಸುತೊಂದೆರ । ಳ್ದಿನವಿದ್ದುವಾ ರಾಯನಗಲೆ ॥ ೧೦೪ ॥

ವಿಜಯಪರ್ವತಪವನಂಜಯವೆಂಬೆರ । ಳ್ಗಜಹಯಗಳು-ಮೇವ ಬಿಟ್ಟು ॥
ತ್ಯಜಿಸಿ ದೇಹವ ಸುರರಾದುವು ಭರತಭೂ । ಭುಜನ ಸೋಂಕಾರ ರಕ್ಷಿಸದು ॥ ೧೦೫ ॥

ಗೃಹಪತಿ ದೀಕ್ಷೆಗೊಂಡನು ವಿಶ್ವಕರ್ಮನು । ಗೃಹದಲ್ಲಿ ವ್ರತಯುಕ್ತನಾದ ॥
ಸ್ವಹಿತಕೆ ಮುಂದಯೋಧ್ಯಾಂಕ ದೀಕ್ಷೆಯ ಕೊಂಬ । ನಹಹ ಸಾಕಿಲ್ಲಿಗಾ ಮಾತು ॥ ೧೦೬ ॥

ಚಕ್ರ ಮುಂತಾದೇಳು ನಿರ್ಜೀವರತ್ನಯ । ಥಾಕ್ರಮ ನವನಿಧಿ ಕೂಡೆ ॥
ಶುಕ್ರನಸ್ತಮಿಸಿದಂದದಿ ಬಯಲಾದುವು । ಚಕ್ರಿಯಿಲ್ಲದೊಡವೇಕಿಹುವು ॥ ೧೦೭ ॥

ತಂದಿತ್ತರಾರು ಮಾಡಿದರಾರು ಮುನ್ನವು । ಸಂದ ಚಕ್ರಿಯ ಪುಣ್ಯದಿಂದ ॥
ಮಂದಿರದೊಳು ಮೂಡಿದುವು ಚಕ್ರಿ ಹೋದೊಡೆ । ಬಂದಂತೆ ಬಯಲಾದುವೊಡನೆ ॥ ೧೦೮ ॥

ಬೀಟೆಯುಂದದಿ ಬಾಯ ಬಿಟ್ಟಿರ್ದ ವಜ್ರಕ । ವಾಟಗಳ್ಕೂಡೆ ಮುಚ್ಚಿದುವು ॥
ಮಿಾಟಾದ ಚಕ್ರಿಯ ಸಿರಿ ಲೋಕದೊಳು ಖೇಂದ್ರ । ನಾಟಕವಾಡಿದಂತಾಯ್ತು ॥ ೧೦೯ ॥

ಭ್ರಮಿಸಿ ಧಾರಿಣಿಯಿತ್ತ ಗೋಳಿಡುತಿರ್ದುದ । ತ್ತಮೃತಕಾಂತೆಯೊಳು ಚಕ್ರೇಶಾ ॥
ರಮಿಸಿದಂದವನಿಷ್ಟು ಪೇಳ್ವೆನು ಕವಿತಾ । ಸಮಯದೊಳಾತ್ಮಲೀಲಾರ್ಥ ॥ ೧೧೦ ॥

ಶೃಂಗಾರಗೆಡದನುದಿನ ತನ್ನ ನೋಡಿ ಕ । ರ್ಮಂಗಳನಿಕ್ಕಲಾ ನೃಪಗೆ ॥
ಅಂಗಮೂರಳಿದಾಗ ಶೃಂಗಾರಸಿದ್ಧನೆಂ । ದಿಂಗಿತವಾಯ್ತೊಂದು ಪೆಸರು ॥ ೧೧೧ ॥

ಶೃಂಗಾರಸಿದ್ಧ ಪೋಪಾಗ ಮುಂಬರಿದು ಮು । ಕ್ತ್ಯಂಗನೆಗುಸುರೆ ದೂತಿಯರು ॥
ಹೆಂಗಳರಸಿ ದಿಗಿಲನೆ ಮಂಚದಿಂದೆದ್ದ । ಳಂಗದೊಳ್ನಿಗೆಯೆ ರೋಮಾಂಚಾ ॥ ೧೧೨ ॥
ಕ್ಷಮೆವಿರಕ್ತಿಗಳೆಂಬ ದೂತಿಯರ್ತನ್ನಿಷ್ಟ । ರಮಣನ ಕರೆತಂದರೆಂದು ॥
ಅಮರ್ದಪ್ಪಿ ಮನ್ನಿಸಿ ಕೆಳದಿಯರ್ವೆರಸಿ ವಿ । ಕ್ರಮಗಿದಿರ್ವಂದಳಾ ನೀರೆ ॥ ೧೧೩ ॥
ಬೇಟವ ಮಾಡಿದಖ್ಯಹುಕಾಲವಿಂದಾತ । ಕೂಟಕೆ ಸಾರ್ತಂದನೆನಲು ॥
ಚಾಟುವೆಣ್ಣಬ್ಬಳೆ ನಗುತಿದಿರ್ಗೊಂಡ ಸ । ಘಾಟವನೇನ ಬಣ್ಣಿಪೆನು ॥ ೧೧೪ ॥
ದಮೆ ಶಾಂತಿ ಕಾಂತಿ ಸನ್ಮತಿ ಋದ್ಧಿ ಬುದ್ಧಿಯೆಂ । ಬಮಳವಿಳಾಸಿನಿವೃಂದಾ ॥
ಚಮರ ಸೀಗುರಿ ತಳಿ ಕನ್ನಡಿ ಕಲಶವಾಂ । ತಮರ್ದೊಡವರೆ ಬಂದಳೊಸೆದು ॥ ೧೧೫ ॥
ಶೃಂಗಾರವಡೆದ ವಿದ್ಯಾದೇವಿಯರು ಮುಂದೆ । ಶೃಂಗಾರಧವಳವ ಪಾಡೆ ॥
ಶೃಂಗಾರರಸದ ಸೋನೆಯ ಕರೆವುತ ದಿವ್ಯ । ಶೃಂಗಾರೆ ಬಂದಳೋಜೆಯೊಳು ॥ ೧೧೬ ॥
ವೇಣು ವೀಣಾ ಸ್ವರಮಂಡಲವೆತ್ತಿ ಕ । ಲ್ಯಾಣ ದೇವಿಯರೊಲ್ದು ಪಾಡೆ ॥
ಜಾಣೆ ಪರಾಕವಧಾನ ಜತನವೆಂದು । ವಾಣಿಯುಗ್ಘಡಿಸಲೆಯ್ದಿದಳು ॥ ೧೧೭ ॥
ಮಣಿದು ಪಾವುಗೆಯ ಮೆಟ್ಟಿಸುತ ಕೈಗೊಡುತ ಭೂ । ಷಣ ಕೊಂಕೆ ತಿದ್ದುತೋಲೈಸಿ ॥
ಅಣಿಮಾದಿಸಿದ್ಧಿದೇವಿಯರೊಡನೆಯ್ದೆ ಬಿ । ನ್ನಣಕಾತಿ ಬಂದಳಾ ದೇವಿ ॥ ೧೧೮ ॥
ತರಹರದಲಿ ನಡೆ ತರಹರದಲಿ ನುಡಿ । ಕರಜಾಣ ನಿನ್ನೋಪನೆಂದು ॥
ಸಿರಿವೆಣ್ಣ ಕಿವಿಸಾರ್ದು ಸೂಚಿಸುತೋಲೈಸಿ । ಬರೆ ಬಂದಳಾ ಬಿಂಕಕಾತಿ ॥ ೧೧೯ ॥
ಅಂಗಾಲ ಕಾಂತಿ ಮೂಲೋಕವ ಮುಸುಕೆ ದಿ । ವ್ಯಾಂಗದ ಕಾಂತಿ ಕಂಡಾಗ ॥
ಶೃಂಗಾರಸಿದ್ಧನ ಮುಳುಗಿಪುದೆಂಬ ಬೆ । ಡಂಗಿನೊಳ್ಬಂದಳಾ ಸೊಬಗೆ ॥ ೧೨೦ ॥
ಚಂದ್ರನ ಕಾಂತಿ ಸೂರ್ಯನ ಕಾಂತಿಯಾಕೆಯ । ರುಂದ್ರಸೇವಕಿಯರಿಗಿಹುದು ॥
ಚಂದ್ರಾರ್ಕಕೋಟಿಗೆ ಸಾಟಿಯಿಲ್ಲಟೆನೆ ಕಾಂತಿ । ಸಾಂದ್ರಿಸೆ ಬರುತಿರ್ದಳಾಕೆ ॥ ೧೨೧ ॥
ಕಾಮಿನಿಯರನೆಸುವಂಗಜನವಳಿರ್ದ । ಸೀಮೆಯ ಹೊಗಯೋಗ್ಯನಲ್ಲ ॥
ಆ ಮುಕ್ತಿಸತಿಯ ತೊತ್ತಿರು ಕೋಟಿಮದನರ । ನೇಮಿಸುವರು ನೋಟದಿಂದ ॥ ೧೨೨ ॥
ವಿಮಲಾಂಘ್ರಿಯಿಂದ ಬಲ್ಮುಡಿಗೆ ಸಂಜೀವನ । ದಮೃತವೆ ರೂಪದರಿಂದ ॥
ಅಮೃತಕಾಮಿನಿಯೆಂಬರುರೆ ಸಾವು ಹುಟ್ಟು ಮು । ಪ್ಪಮರಲಿಲ್ಲಾಕೆಗೆಂದೆಂದು ॥ ೧೨೩ ॥
ನರಸುರನಾಗಲೋಕದ ಪೆಂಗಳವಳ ತೊ । ತ್ತಿರ ಕಾಲುಂಗುಟಕೆ ನಿವಾಳಿ ॥
ಗುರುಹಂಸನಾಥ ನೋಡಮೃತಕಾಂತೆಯ ಚೆಲ್ವ । ವಿರಚಿಪ ದಕ್ಷನಾರ್ಪುರೆ ಹಾ ॥ ೧೨೪ ॥
ಆ ಸತಿಯಿದಿರಾಗಿ ಬರುತಿರ್ದಳಿತ್ತ ವಿ । ಲಾಸದಿ ಶೃಂಗಾರಸಿದ್ಧಾ ॥
ಸೂಸುವ ಕಾಂತಿಯೊಳೆಯ್ತರುತಿರ್ದ ಮ । ಹಾಸಘಾಟಕೆಯನೇನೆಂಬೆ ॥ ೧೨೫ ॥

ಮೂರುಲೋಕದ ಸತಿಯರ ಸೋಂಕಿ ಮುನ್ನೀರು । ಪಾರದವೆಂದು ಕೊಕ್ಕರಿಸಿ ॥
ಮೂರುದೇಹವ ಬಿಟ್ಟು ಚಿತ್ಪ್ರಭೆ ವೈಯಾಗಿ । ನೀರನೆಯ್ತರುತಿರ್ದನಾಗ ॥ ೧೨೬ ॥

ಅತ್ತಿತ್ತ ತಿರುಗಿ ನೋಡುವ ನೋಟವಿಲ್ಲಾಗ । ಸುತ್ತಲರಿವ ಕಾಣ್ಬ ಮೋಡಿ ॥
ವತ್ತೆ ಜಾರದ ಪ್ರಾಯ ತ್ರಿಜಗವ ಮುಸುಕಿ ಮುಂ । ದೊತ್ತುವ ಪ್ರಭೆಯೊಳೆಯ್ತಂದಾ ॥ ೧೨೭ ॥

ಇಂದ್ರಕೋಟಿಗಳ ನಾಗೇಂದ್ರಕೋಟಿಗಳ ನ । ರೇಂದ್ರಕೋಟಿಗಳ ಮನ್ಮಥರ ॥
ಸಾಂದ್ರಲಾವಣ್ಯದ ಸಿರಿಯ ತನ್ನಂಗುಟ । ತಂದ್ರಗಾಣಿಸಲೆಯ್ದುತಿರ್ದಾ ॥ ೧೨೮ ॥

ಜಾಣನು ಚೆಲುವನು ತ್ರಿಜಗವನೆತ್ತುವ । ತ್ರಾಣಿ ಮಹಾಸುಖಿ ಗರುವಾ ॥
ಕಾಣಲೊಡನೆ ಮುಕ್ತಿಸತಿಯ ಸೋಲಿಸುವ ಬಿ । ನ್ನಾಣದೊಳೆಯ್ತರುತಿರ್ದಾ ॥ ೧೨೯ ॥

ಆರು ತನ್ನೊಡನಿಲ್ಲ ತಾನೊಬ್ಬನೇಕಾಂಗಿ । ವೀರವೋಡಿಯೊಳೆಯ್ದೆ ಬರುತ ॥
ಸಾರೆ ಕಂಡನು ಮುಕ್ತಿಕಾಂತೆಯ ಕೂಡೆ ಶೃಂ । ಗಾರಸಿದ್ಧನ ಕಂಡಳಾಕೆ ॥ ೧೩೦ ॥

ಜುಮ್ಮನಿಬ್ಬರಿಗೆ ರೋಮಾಂಚಗಳೆದ್ದುವು । ಛಿಮ್ಮನೆ ಬಿಗುಹೇರಿ ತನ್ನ ॥
ಸುಮ್ಮಾನ ತಲೆಗೇರಿ ಮೂರ್ಛಿಸುತಿರೆ ಪರ । ಬೊಮ್ಮನ ಶಕ್ತಿ ಜಾರಿಸಿತು ॥ ೧೩೧ ॥

ಸರಸತಿ ಸಿರಿವೆಣ್ಣು ಕೂಡೆದೆದಟ್ಟೈ ನಿ । ನ್ನರಸಗಾರತಿಯನೆತ್ತೆನಲು ॥
ಪರಿಹರಿಸಿದಳು ಪಾವುಗೆಗಳ ಮುಕ್ತಿಸೌಂ । ದರಿ ಮುಟ್ಟೆ ಸಾರ್ದಳೋಪನನು ॥ ೧೩೨ ॥

ಕಲಶಕನ್ನಡಿಯನಾಂತಿದ್ದರು ಸತಿಯರ । ತ್ತೆಳಸಿ ನೋಡದೆ ಮುಕ್ತಿಸತಿಯ ॥
ಮೊಲೆರನ್ನಗಳಸವ ಮೊಗಮಣಿಮುಕುರವ । ನಲಿದು ನಿಟ್ಟಿಸಿದನಾ ಸಿದ್ಧಾ ॥ ೧೩೩ ॥

ಆರತಿಯೆತ್ತಿದಳಾಕೆ ನವೀನಮುಂ । ದಾರಮಾಲೆಯನಿಟ್ಟಳೊಡನೆ ॥
ನಾರಿಯರ್ಘವಳವ ಪಾಡೆ ಸಿದ್ಧನ ಪಾದ । ನೀರೇಜಗಳಿಗೆರಗಿದಳು ॥ ೧೩೪ ॥

ಎರಗುವಾಗೊಡನೆ ಕೈವಿಡಿದೆತ್ತಿ ನಿಲಿಸುವ । ಕ್ಕರು ಸಿದ್ಧಗಾಯ್ತುಹುದದನು ॥
ಮರೆದು ಸುಮ್ಮನೆ ನೋಡುತಿರ್ದನದೇಕೊ ತಾ । ನುರೆ ಮತ್ತದೇನ ನೆನೆದನೊ ॥ ೧೩೫ ॥

ಪೊರೆಯುವರೊಬ್ಬರು ಕೊಡದೆ ಬಂದಬಲೆಯ । ಕರವಿಡಿವಂದವೆಂತೆಂದು ॥
ಗರುವನಲ್ಲವೆ ನೋಡುತಿರ್ದನಾ ಸಿದ್ಧನ । ಪರಿಯನಾ ಸಖಿಯರರಿದರು ॥ ೧೩೬ ॥

ಸೋತೆರಗಿದ ಪೆಣ್ಣ ಕೈವಿಡಿ ಸ್ವಾಮಿ ವಿ । ಖ್ಯಾತೆಯನಾಕೊರ್ಡಬೇಕು ॥
ತಾತನಾರ್ತಾಯೊರು ತನ್ನ ತಾನಾದ ವಿ । ನೀತೆಯಲ್ಲವೆಯೆಂದರವರು ॥ ೧೩೭ ॥

ಅನುಕಾಲ ನಿನ್ನನೆ ಬಯಸಿ ನೀ ಬಹದಾರಿ । ಯನೆ ನೋಡಿ ಸಾರ್ದೀಗ ಮಣಿದ ॥
ಇನಿಯಳ ಕೈವಿಡಿಯದೆ ನೋಡುತಿಹ ನಿನ್ನ । ಗೊನೆಹವೇತರದೊ ನಿಷ್ಕರುಣಿ ॥ ೧೩೮ ॥

ಕಿವಿವೇಟದೊಳು ಕೇಳ್ದು ಕಣ್ವೇಟದೊಳು ಕಂಡು । ಸವಿಸಂಗಕೆಳಸೀಗ ಸಾರ್ದ ॥
ಯುವತಿಯ ತೆಗೆದಪ್ಪದಾಗ ನೀನಾತ್ಮಾನು । ಭವಿಯೆ ಹಾಹಾಯೆಂದರೊಡನೆ ॥ ೧೩೯ ॥

ಓಪಳು ಸಲೆ ಸೋತುಯೆರಗಿದಳಲ್ತೆ ಮ । ಹಾಪತಿಭಕ್ತೆ ನಮ್ಮೊಡತಿ ॥
ಭಾಪು ನೀನೆ ನಾಯಕೋತ್ತಮನೈ ಸತ್ಕ । ಲಾಪನೈ ವರಿಸೆಂದರೊಸೆದು ॥ ೧೪೦ ॥

ಆವಕೂ ನಗುತ ನೋಡುತಿರ್ದನಪ್ಸರೊಳು ಭಾ । ವದೊಳಿರ್ದ ಗುರುಹಂಸನಾಥಾ ॥
ಚದುರ ನಾನಿತ್ತೆನೈ ಕೈವಿಡಿಯೆಂದನೆ । ನ್ನದ ಮುನ್ನ ಪಿಡಿದನಾ ಸಿದ್ಧಾ ॥ ೧೪೧ ॥

ಶಿರವಿಡಿದೆತ್ತಿದ ತೋಳ್ತುಂಬಲಪ್ಪಿದ । ತರುಣಿಯುರ್ಜಯ ಜಯಯೆನಲು ॥
ತರಹರವಿಲ್ಲದೆ ಸೆಜ್ಜೆವನೆಗೆ ಕೂಡೆ । ಕರವಿಡಿದೊಯ್ದನಾ ಕುಶಲಾ ॥ ೧೪೨ ॥

ಸರ್ವಸೇವಕಿಯರು ಹೊರಗುಳಿದರು ಗೃಹ । ಕಿರ್ವರೆ ತಾವೊಳಹೊಕ್ಕು ॥
ನಿರ್ವಾಣರತಿಯೊಳರ್ತಿಸಿದರು ಮನದಳ । ಲಾರ್ವನ್ನ ದಿವ್ಯ *ಯೋಗಿಗಳು ॥ ೧೪೩ ॥

ಪರಮಸವ್ಯಕ್ತ್ವದ ಸೆಜ್ಜೆವನೆಯೊಳು ನಿ । ರ್ಗುರುಲಘುಗುಣದ ಮೇಲ್ಕಟ್ಟು ॥
ಪರಿವೃತವಾಗಿ ನಿರ್ಬಾಧಿತಗುಣವೆಂಬ । ತೆರೆಯಿರ್ದುದೊಳಹೊಕ್ಕರವರು ॥ ೧೪೪ ॥

ದರುಶನವೆಂಬ ದೀವಿಗೆ ಶಕ್ತಿ ಮಂಚ ಭಾ । ಸುರಸೂಕ್ಷ್ಮಗುಣ ತಲೆಗಿಂಬು ॥
ಭರಿತಾವಗಹನದ ಪಾಸು ಸುಜ್ಞಾನಸೌ । ದರರೊಡಗೂಡಿದರಲ್ಲಿ ॥ ೧೪೫ ॥

ಮೈ ಮೈಯೊಳಡಗುವಂದದೊಳಪ್ಪಿ ಸಕ್ಕರೆ । ಸೈ ಮಿಕ್ಕ ತುಟಿಯ ಚುಂಬಿಪರು ॥
ಕೈ ಮೈಯ ಕಳೆ ಚಳಚಳನಾಡೆ ರಮಿಸಿದ । ರೈ ಮಝು ಚಾಟುಮೋಹಿಗಳು ॥ ೧೪೬ ॥

ತುಡುಕಿ ಚೆಂದುಟಿಗಚ್ಚುವಾಗೊಂದು ಕೋಟಿಸಾ । ಲ್ಗಡಲನೀಂಟಿದ ಸವಿಯಹುದು ॥
ಪಿಡಿವಾಗ ಮೊಲೆಗಳ ತ್ರಿಜಗದ ಸಿರಿ ಕೈಯೊ । ಳಡಗಿದಂತಿಹುದು ಸಿದ್ಧನಿಗೆ ॥ ೧೪೭ ॥

ಮೊಗವ ನೋಳ್ಪಾಗ ಮೂಜಗದ ಮೋಹನ ಮುಂದೆ । ತಗಹಿಕ್ಕಿ ನಿಂದವೊಲಿಹುದು ॥
ನಗೆಗಣ್ಣ ನೋಳ್ಪಾಗ ಶತಕೋಟಿಮದನರೋ । ಲಗವ ತಾನಾಳಿದಂತಿಹುದು ॥ ೧೪೮ ॥

ಬಡನಡು ಬಲುಪೊರವಾರು ನುಣ್ದೊಡೆಗಳ । ತಡಹುತ ತನು ಸೋಂಕುವಾಗ ॥
ಪೊಡವಿಮೂರನು ತುಂಬಿ ಮೋಹನರಸ ಮಾರಿ । ಕಡೆಗೋಡಿವರಿವವೊಲಿಹುದು ॥ ೧೪೯ ॥

ಲಾವಣ್ಯ ತುಳುಕುವ ರೂಪ ನೋಳ್ಪೊಡೆ ಮನೋ । ಭಾವವನರಿವರಾಗವಳ ॥
ಕೈವಲ್ಯದೃಗ್ಬೋಧ ಬೇಕಲ್ಲದುಳಿದಿಂದ್ರಿ । ಯಾವಳಿ ಸಾಕೆ ಕೂಡಿದನು ॥ ೧೫೦ ॥

ಸರಸಸಲ್ಲಾಪ ಚುಂಬನ ತಕ್ಕೆ ನಗೆ ನೋಟ । ತರಹರ ತವಕ ಮುದ್ದಾಟ ॥
ಬೆರಗು ಬಿನ್ನಣ ಲಲ್ಲೆ ನಟಿಸೆ ಮುಕ್ತ್ಯಂಗನೆ । ಬೆರಸಿರ್ದಳಾ ಸಿದ್ಧನೊಡನೆ ॥ ೧೫೧ ॥

ಇಂದ್ರನ ವಧು ಚಕ್ರಧರನ ಸ್ತ್ರೀರತ್ನ ನಾ । ಗೇಂದ್ರನ ಸತಿಯರೊಳಾದ ॥
ಇಂದ್ರಿಯಸುಖವನಾಕೆಯ ಪಡೆದೊತ್ತಭಿ । ತಂದ್ರಿಪಳವಳಾಟಕೆಣೆಯೆ ॥ ೧೫೨ ॥

---

* ಭೋಗಿಗಳು.

ಮರೆದನನಂತಜನ್ಮದೊಳು ಮೂಲೋಕದೊ । ಳುರೆ ಮುನ್ನ ಕಂಡುಂಡ ಸುಖವಾ ॥
ತರಿಮಿಂಡಿಯಾಟಕೆ ನೆರೆ ಸೋತನವಳೊಡ । ನೆರಕವಾಗಿರ್ದನಾ ಸಿದ್ಧಾ ॥ ೧೫೩ ॥
ಭ್ರಮೆಬಟ್ಟು ಬಹುಜನ್ಮದೊಳು ಬಹುಸತಿಯರ । ರಮಿಸಿಯು ತೃಪ್ತಿಯಾಯ್ತಿಲ್ಲ ॥
ಅಮೃತಕಾಂತೆಯು ಕೂಡಿ ತಣ್ಣನೆ ತಣಿದು ವಿ । ಶ್ರಮದೊಳಗಿರ್ದನಾ ಸಿದ್ಧಾ ॥ ೧೫೪ ॥
ಒಡಗೂಡಿದುದಕಿಂದು ಮೊದಲಾದುದಹುದಿನ್ನು । ಕಡೆಯೆಂಬುದಿಲ್ಲವಾ ಸುಖಕೆ ॥
ಕೆಡದ ಸಂಪದದೊಳಾ ಶೃಂಗಾರಸಿದ್ಧ ಸಂ । ಗಡಿಸಿರ್ದನಮೃತಕಾಂತೆಯೊಳು ॥ ೧೫೫ ॥
ಎರಡೆಂಬುದಳಿದವರೊಂದೆ ರೂಪಾಗಿ ತಾ । ವಿರುತಿದ್ದರದನು ಮತ್ತವರು ॥
ನೆರೆಮನೆಯೊಳಗಿರ್ದ ಮುಕ್ತಿಕಾಂತೆಯುರು ಸಿ । ದ್ಧರು ನೋಡಿ ನಲ್ಮೆದಾಳಿದರು ॥ ೧೫೬ ॥
ರತ್ನ ಮೂರೊಂದೆಂದು ಕಂಡವರಮೃತಸ್ತ್ರೀ । ರತ್ನಗಳೊಳು ಕೂಡೆ ಕಂಡು ॥
ರತ್ನಾಕರಸಿದ್ಧ ಹಂಸನಾಥನ ಮನೋ । ರತ್ನಗೇಹದೊಳಾಂತನೊಸೆದು ॥ ೧೫೭ ॥

ಸಾಕಿನ್ನು ಕೊಸರವರತ್ತಲೊಪ್ಪಿರಲಿತ್ತ । ಶೋಕಿಪ ಪೆಂಗಳ ಧರೆಯು ॥
ಆ ಕುವರರು ಸಂತವಿಟ್ಟು ತಾವೊಪ್ಪಚ್ಚಿ । ವ್ಯಾಕುಲವೆರಸಿರ್ದರಿತ್ತ ॥ ೧೫೮ ॥
ಸಂಸಾರಸುಖವಾರ್ಗೆ ಸ್ಥಿರವುಂಟು ಕೈವಲ್ಯ । ಸಂಸಿದ್ಧಿಯಾರ್ಗೆ ಕೇಡುಂಟು ॥
ಹಂಸನಾಥನ ಭಕ್ತಿಯೇನೇನ ಕೊಡದು ಶ್ರೀ । ಹಂಸನಾಥನೆ ಶರಣೆನಗೆ ॥ ೧೫೯ ॥
ತಳುವಿಲ್ಲದಿನ್ನರ್ಕಕೀರ್ತ್ಯಾದಿರಾಜರು । ತಳೆವರು ಪರಮದೀಕ್ಷೆಯನು ॥
ಕಲಿವಂತರದನರ್ಕಕೀರ್ತಿವಿಜಯವೆಂದು । ತಲೆದೂಗಿ ಪೊಗಳ್ವರಂತಿರಲಿ ॥ ೧೬೦ ॥
ವಿಕ್ರಾಂತರೊಡೆಯನ ನಿರ್ವಾಣಪೂಜೆಯು । ಶಕ್ರ ಮುಂತಾದ ಕೋವಿದರು ॥
ಸುಕ್ರಮದೊಳು ಮಾಡಿ ಪೋದರೆಂಬಲ್ಲಿಗೆ । **ಚಕ್ರೇಶಕೈವಲ್ಯಸಂಧಿ** ॥ ೧೬೧ ॥
ತನು ನಸು ಜಗ್ಗದೆ ಬಹುಕಾಲ ಸುಖಿಸಿ ಭೋಂ । ಕನೆ ಭರತೇಶ ಮೋಕ್ಷದೊಳು ॥
ಘನವೆತ್ತನಿದು **ಮೋಕ್ಷವಿಜಯ**ವೆಂದೆಂಬ ನಾ । ಲ್ಕನೆಯ ಕಲ್ಯಾಣ ಬಿನ್ನಾಣ ॥ ೧೬೨ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೬೩ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೬೪ ॥
ಹಲವ ಹಂಬಲಿಸೆನೊಂದನೆ ಬೇಳ್ಪೆನಾ ಭವ್ಯ । ಕುಲರತ್ನ ಭರತಭಾಸ್ಕರನ ॥
ಸಲಹಿದಂದದೊಳೆನ್ನ ಸಲಹು ಲೋಕೈಕದೋ । ರ್ವಲನೆ ಚಿದಂಬರಪುರುಷಾ ॥ ೧೬೫ ॥

ಚಕ್ರೇಶಕೈವಲ್ಯಸಂಧಿ ಸಂಪೂರ್ಣಂ

**॥ ಚತುರ್ಥಕಲ್ಯಾಣಂ ಸಂಪೂರ್ಣಂ ॥**

# ಅರ್ಕಕೀರ್ತಿವಿಜಯ

## ಸರ್ವನಿರ್ವೇಗಸಂಧಿ

ಪರಮಪರಂಜ್ಯೋತಿ ಕೋಟಿಚಂದ್ರಾದಿತ್ಯ । ಕಿರಣ ಸುಜ್ಞಾನಪ್ರಕಾಶಾ ॥
ಸುರರ ಮಕುಟಮಣಿರಂಜಿತಚರಣಾಬ್ಜ । ಶರಣಾಗು ಪ್ರಥಮಜಿನೇಶಾ ॥ ೧ ॥

ಚಂದ್ರನ ಜಯಿಸುವ ಕೀರ್ತಿಯಿಂದರ್ಕನ । ಚಂದ್ರನೆನಿಪ ತೇಜದಿಂದ ।
ಚಂದ್ರಾರ್ಕಕೀರ್ತಿವಿಜಯನೆ ಉದ್ಧರಿಸು ಮೋ । ಕ್ಷೇಂದ್ರ ನಿರಂಜನಸಿದ್ಧಾ ॥ ೨ ॥

ಶ್ರೀಹಂಸ ಹಂಸ ಏನೆಂಬೆನಾ ಭರತೇಶ । ಮೋಹನಸಿದ್ಧಿವಡೆದರೆ ॥
ದೇಹಿಗಳೆಲ್ಲರು ಪರಮವೈರಾಗ್ಯಸ । ನ್ನಾಹರಾದರು ಧರಣಿಯೊಳು ॥ ೩ ॥

ಧರೆಗಗ್ರಗಣ್ಯನ ಭಾಗ್ಯವಂತಾಯ್ತೆಂದ । ರರರೆ ನವಿನ್ನಾ ಬದುಕಿನ್ನು ॥
ಸ್ಥಿರವೆ ಛೀ ಸುಡುಸುಡೆಂಬರು ಕೂಡೆ ತೊರೆದು ಜಾ । ಣರು ದೀಕ್ಷೆಗೊಂಬರಲ್ಲಲ್ಲಿ ॥ ೪ ॥

ಆ ಪಾಟಿಯರಸನು ಭೋಗವ ತೊರೆದ ನಾ । ವೀ ಪಾಟ ಸುಖಕೆ ಸಿಕ್ಕುವುದು ॥
ಗೋಪರ ನಡೆಯೆಂದು ತೊರೆವರು ಪರಿದೆಯ್ದಿ । ತಾಪಸರಹರು ಕೋವಿದರು ॥ ೫ ॥

ನೆರೆ ಜಾಣನಿದ್ದಿದ್ದು ಹೋದುದ ನಾವು ಕಂ । ಡರಿದಿಲ್ಲಿ ಮೈಮರೆದಿಹುದು ॥
ಕುರುಬರ ನಡೆಯೆಂದು ಕೂಡೆ ಕೊಕ್ಕರಿಸುವ । ತೊರೆವರು ತಪಸುದಾಳುವರು ॥ ೬ ॥

ಭರತೇಶನಿರ್ದಾಗ ಮನೆಗಟ್ಟಿ ಬಾಳ್ವುದಾ । ಧರಣೀಶ ಹೋದ ಮೇಲೆಮಗೆ ॥
ತಿರಿದುಂಬುದುತ್ತಮಸುಖವೆಂಬರದ ಪರಿ । ಹರಿಸುವರ್ತಪಸಿಗಳಹರು ॥ ೭ ॥

ಗಂಡುಹೆಣ್ಣೆನ್ನದೆಲ್ಲರು ದೀಕ್ಷೆಗೊಂಬುದ । ಕಂಡರಿನ್ನಿವರ್ಗೆ ಭಿಕ್ಷೆಯನು ॥
ಮಂಡಲದೊಳಗೀವರಾರೆಂದು ಕೆಲರೆಡೆ । ಗೊಂಡು ಚಿಂತಿಪ ಪಾಟಿಯಾಯ್ತು ॥ ೮ ॥

ಕರ್ಮಸಡಿಲವಾದ ನರರು ಪೋದರು ದೃಢ । ಕರ್ಮರಿರ್ದರು ಮನೆಗಳಲಿ ॥
ನಿರ್ಮಲಮುನಿಗಳ ಗೃಹಿಗಳರ್ಚಿಸಿದರು । ಧರ್ಮಕೆ ದಾರಿದ್ರ್ಯವುಂಟೆ ॥ ೯ ॥

ಸ್ಮರಪುರದರಸ ಮಹಾಬಲರಾಜ ತಾ । ನಿರದೆ ದೀಕ್ಷೆಯ ಕೊಂಬೆನೆಂದು ॥
ಧರೆಯ ನೀನಿನ್ನಾಳ್ವುದೆಂದು ತಮ್ಮಂದಿರಿ । ಬ್ಬರಿಗೆ ಪೇಳಿದರೊಲ್ಲರವರು ॥ ೧೦ ॥

ಪರಿದರ್ಕಕೀರ್ತ್ಯಾದಿರಾಜರಿಗರುಹಿ ಮೂ । ವರು ದೀಕ್ಷೆಗೊಂಬ ನಾವೆಂದು ॥
ದೊರೆ ರತ್ನಬಲರಾಜಸುಬಲರಾಜರುಗೂಡಿ । ತ್ವರಿತದೊಳೆದ್ದನಾ ಕ್ಷಣವೆ ॥ ೧೧ ॥

ಆಗಣಿತಬಲವಿಲ್ಲ ವಾದ್ಯರಂಜನೆಯಿಲ್ಲ । ಸೊಗಸಿನಲಂಕಾರವಿಲ್ಲ ॥
ದುಗುಡಸಿಂಗರದಿಂದ ಬಂದರಯೋಧ್ಯಾ । ನಗರಿಯ ಹೊಕ್ಕರಾ ನೃಪರು ॥ ೧೨ ॥

ತಂದೆಯಿರ್ದಾಗಿರ್ದ ಪುರದ ಸಂಪದವೆಲ್ಲ । ನಂದಿ ಭಿನ್ನಗೆ ತೋರೆ ಕಂಡು ॥
ನೊಂದರೀ ಪುರದೊಳಿಪ್ಪುದರಿಂದರಣ್ಯದ । ಮಂದಿರ ಲೇಸೆಂದರೊಡನೆ ॥ ೧೩ ॥

ಅಯ್ಯಯ್ಯೊ ಪುರದ ಸಂಪದವ ತನ್ನೊಡನೆ ನ । ಮ್ಮಯ್ಯನೇನೊಯ್ದನೆ ತನ್ನ ॥
ಮೆಯ್ಯೊಂದು ತೋರದೊಡಿಂತಾಗಬಹುದೆ ನೋ । ಡಯ್ಯಯೆಂದುಚ್ಚರಿಸಿದರು ॥ ೧೪ ॥

ಪೊಳಲಿಂತುಟಾದ ಮಾತೇನು ನಾಡೆಲ್ಲವು । ಕಳೆಗುಂದಿತಾ ಪಾಟಿಯಲ್ಲಿ ॥
ಇಳೆಯುನಿಂತಾಳ್ದರಾರೆಂದು ತಂದೆಯ ಗುಣಾ । ವಳಿಗಿಷ್ಟು ಬೀಗಿದರೊಮ್ಮೆ ॥ ೧೫ ॥

ಬರುತಿದಿರೊಳು ಕಾಂತಿ ಮಸುಳಿದ ರತ್ನಗೋ । ಪುರ ಮಣಿಮಾಡವ ಕಂಡು ॥
ಪಿರಿದು ಸೋಜಿಗವಯ್ಯನೊಡನಿವರೊಂದು ಸಿಂ । ಗರವು ಪೋದುದೆಯೆಂದರವರು ॥ ೧೬ ॥

ಬಣ್ಣಹಾರಿದ ರಾಜಗೃಹದಲ್ಲಿ ಪ್ರಜೆಗಳ । ಕಣ್ಣೀರು ಹನಿತಯೋಧ್ಯೆಯೊಳು ॥
ಅಣ್ಣಾಜಿಯರು ನಿಂದುದಚ್ಚರಿಯೆಂದೆದೆ । ಹಣ್ಣಾಗಿ ಮರುಗುತೆಯ್ದಿದರು ॥ ೧೭ ॥

ದೂರದೊಳಂದಳವಿಳಿದೊತ್ತಿ ಕಡೆಯ ಹ । ಜಾರದೊತ್ತಡಿಯಿಡುವಾಗ ॥
ಆರಿವರೆಂದರ್ಕಕೀರ್ತಿರಾಜೇಂದ್ರ ವಿ । ಚಾರಿಸಿದನು ಕೆಲದವರಾ ॥ ೧೮ ॥

ಭರದಿಂದ ಮುಟ್ಟಲೆಯ್ತರೆ ಕಂಡನೆನ್ನ ಸೋ । ದರರಲಾ ತಂದೆಯೆಯ್ದಿದರೆ ॥
ಅರಸುಮೋಡಿಯ ತಂದೆಯೊಡನಟ್ಟದರೆ ಬಂದ । ಪರಿಯ ನೋಡೆಂದೆದೆಜರಿದಾ ॥ ೧೯ ॥

ಭೂರಿವಿಡಾಯದಿಂದೆಯ್ತಹ ಸುತರ ಶೃಂ । ಗಾರವ ಕಂಡನಂದಯ್ಯಾ ॥
ದಾರಿದ್ರ್ಯರಸದಿ ಬಪ್ಪನುಜರ ನಾನು ಕ । ಣ್ಣಾರೆ ಕಂಡೆನಲಾ ಹಾಯೆಂದಾ ॥ ೨೦ ॥

ಮುಟ್ಟ ಸಾರ್ದಣ್ಣನಿಗಿಟ್ಟು ನಿವಾಳಿಯ । ಕೊಟ್ಟು ಕಾಣಿಕೆಯ ಕೈಯೊಳಗೆ ॥
ತೊಟ್ಟನೆ ನೆಲದಮೇಲ್ಕೆಡೆದು ಬಾಯ್ವಿಟ್ಟು ಗೋ । ಳಿಟ್ಟರು ಮೂವರೊಂದಾಗಿ ॥ ೨೧ ॥

ಎಲ್ಲಿಯುಪ್ಪಾಜಿಯ ಕಳುಹಿದೆ ನವಗಿಷ್ಟು । ಸೊಲ್ಲಿಸಿದರೆ ದೋಷವಹುದೆ ॥
ಪೊಲ್ಲವ ನಿನಗೆ ನಾವೇನ ಮಾಡಿದೆವೆಂದು । ಮೆಲ್ಲಡಿವಿಡಿದತ್ತರವರು ॥ ೨೨ ॥

ಗುಳುಗುಳನೊಕ್ಕವು ಕಣ್ಣ ನೀರೊಡನೆದ್ದು । ತಲೆವಿಡಿದೆತ್ತಿ ಮೂವರನು ॥
ಬಲು ಮೋಸ ನನ್ನದು ಸೈರಿಸಿರಣ್ಣಯೆಂ । ದಳುತಪ್ಪಿಕೊಂಡನಾ ನೃಪತಿ ॥ ೨೩ ॥

ಆದಿರಾಜಗೆ ಕೂಡೆ ನಮಿಸಿದರವನು ದುಃ । ಖೋದಯದಿಂದಪ್ಪಿಕೊಂಡಾ ॥
ವೇದಿಸಿ ಮೂವರ್ಗೆ ಕುಳ್ಳಿರಲಿಡಿಸೆ ಸಂ । ವಾದಿಸಿ ಕುಳಿತರೊತ್ತಿನೊಳು ॥ ೨೪ ॥

ತಡವಾದುದಿಲ್ಲಣ್ಣ ಕೇಳ್ಮಹಾಬಲರಾಜು । ಒಡೆಯರು ಬೇಗ ಮೋಕ್ಷವನು ॥
ಪಡೆದರಲ್ಲದಿರೆ ಸೂಚಿಸೆನೆ ನಾ ನಿಮಗೆಂದ । ನೊಡನರ್ಕಕೀರ್ತಿಗಾಜೇಂದ್ರಾ ॥ ೨೫ ॥

ಆಯುಷ್ಯ ಮುಟ್ಟಲಾಯ್ತದರಿಂದ ಧರೆಯನೊ। ತ್ತಾಯದಿಂದೆನಗಯ್ಯ ಹೊರಿಸಿ
ವಾಯುವೇಗದಿ ಕರ್ಮಗಳ ಸುಟ್ಟು ಕೈವಲ್ಯ । ಶ್ರೀಯನೆಯ್ದಿದನಣ್ಣಯೆಂದಾ ॥ ೨೬ ॥

ದೇವರಿಂದಾವುದು ಕೊರತೆ ನಾವೆಮ್ಮೊಂದು । ನೋವಿಗಿಷ್ಟಾಡಿದೆವೈಸೆ ॥
ನಾವತಿಪುಣ್ಯಹೀನರು ಕಂಡುದಿಲ್ಲೆಂದು । ಕೋವಿದ ನುಡಿದನಣ್ಣನೊಳು ॥ ೨೭ ॥

ಅಪ್ಪಾಜಿ ತೆರಳಿದರೇನಾಯ್ತು ದೇವರಿ । ನ್ನಪ್ಪಾಜಿಯರೆ ನೀವು ನವಗೆ ॥
ಒಪ್ಪವಿಟ್ಟೊಂದು ಬಿನ್ನಹವುಂಟು ಲಾಲಿಸೆಂ । ದಪ್ಪರಿಸಿದನೆದ್ದು ನಿಂದಾ ॥ ೨೮ ॥

ಮುರಿದು ಸೋದರರೆದ್ದರುರೆ ಮಹಾಬಲರಾಜ । ಹಿರಿಯಣ್ಣಗೊಡನೆ ಕೈಮುಗಿದು ॥
ಕರುಣದಿಂದೆಮ್ಮ ಬಿನ್ನಹವ ಲಾಲಿಪುದೆಂದು । ವಿರಚಿಸಿದೊಳ್ಪನೇನೆಂಬೆ ॥ ೨೯ ॥

ಜನಕ ಪೋದಂದೆ ಜಾರಿತು ನಮ್ಮ ಸಂತೋಷ । ಮನಕೆ ಮಹಾವ್ಯಥೆಯಾಯ್ತು ॥
ತನು ತಾನು ಹೊರೆಯಾದುದೀ ಬಾಳು ನೋಳ್ಪಾಗ। ಕನಸಿನಂದದೊಳು ತೋರುತಿದೆ॥ ೩೦ ॥

ಅಂಬುಧಿ ಹಿಮಶೈಲ ಕಡೆಯೆನಲಾಳ್ದನಾ । ಡಂಬರ ಬಯಲಾದ ಮೇಲೆ ॥
ಉಂಬಳಿಗಿತ್ತೆಮ್ಮ ಸಿರಿಯಿನ್ನು ಸ್ಥಿರವೆಂದು । ನಂಬುವುದೆಂತಗ್ರಜಾತಾ ॥ ೩೧ ॥

ಅವಧಿಯಿಂದಯ್ಯ ತನ್ನಾಯುಷ್ಯದಂತ್ಯವ । ತವೆ ಕಂಡು ಮುಕ್ತಿಗೆಯ್ದಿದನು ॥
ನವಗೆ ನಮ್ಮಾಯುಷ್ಯದಂತ್ಯವ ಕಾಣ್ಬ ಗೌ । ರವವುಂಟೆ ನಿರವಿಸಣ್ಣಾಜಿ ॥ ೩೨ ॥

ಒಡಲು ಕೆಡುವುದಾತ್ಮ ಕೆಡನೆಂದು ನವಗಡಿ । ಗಡಿಗಯ್ಯ ಬೋಧಿಪನಲ್ತೆ ॥
ಕೆಡುವೊಡಲನೆ ನಚ್ಚಿ ಕೆಡುವುದು ಜಾಣರ । ನಡೆಯೆ ನಿರೂಪಿಸು ಜ್ಯೇಷ್ಠಾ ॥ ೩೩ ॥

ಆದರಿಂದ ನಾವು ದೀಕ್ಷೆಗೆ ಪೋಪೆವೆಮ್ಮನೊ । ಪ್ಪದಿ ಕಳುಹೆಂದಿಷ್ಟು ನುಡಿದು ॥
ಇದಿರಾಗಿ ಸಾಷ್ಟಾಂಗವೆರಗಿದನೊಡನೆ ತ । ಮ್ಮದಿರಿಬ್ಬರೆರಗೆ ತನ್ನಂತೆ ॥ ೩೪ ॥

ಎದೆ ದಿಗಿಲೆಂದುದಾ ನೃಪಗೇಳಿರೇಳಿರಿ । ನ್ನಿದಕೆ ಯೋಚಿಸಿಕೊಂಬಯೆಂದಾ ॥
ಆದನೊಪ್ಪೆವೆಮ್ಮ ಬಿನ್ನಹಕೊಡಂಬಡುವುದ । ಲ್ಲದೊಡೇಳೆವೆಂದಿದ್ದರೆರಗಿ ॥ ೩೫ ॥

ಆದಿದೇವರು ನೀವು ನಾವು ಯೋಚಿಸಿ ಸೊಗ । ಸಾದ ಕಾರ್ಯವ ಮಾಳ್ಪವಿದಕೆ ॥
ವಾದ ಬೇಡಣ್ಣ ನೀವೆದ್ದು ಲಾಲಿಪುದೆನೆ । ಸೋದರರೆದ್ದರಾ ಕ್ಷಣವೆ ॥ ೩೬ ॥

ಆಹುದು ನೀವಂದುದುತ್ತಮಕಾರ್ಯವಿದ ಮಾಡ । ಬಹುದಯ್ಯ ಪೋದಮೇಲಿನ್ನು ॥
ಮಹಿಯನಾಳ್ವುದು ಸುಖವಲ್ಲ ದೀಕ್ಷೆಯೆ ಸುಖ । ಮಹಿತಾರ್ಥವೊಂದ ಕೇಳೆಂದಾ ॥ ೩೭ ॥

ಒಂದರೆವರುಷವಿದ್ದೆಲ್ಲರಾ ಶೋಕವ । ನಂದಿಸಿ ನೀವು ನಾವೆಲ್ಲ ॥
ಒಂದಾಗಿ ತಪಸುಮಾಡುವವಿಷ್ಟು ಸೈರಿಸಿ । ರೆಂದನಾ ದೊರೆ ಕಿರಿಯರೊಳು ॥ ೩೮ ॥

ಪೇಳಾದಿದೇವರು ನೀನೆಂದನವನದ । ಕೇಳುತಣ್ಣಾಜಿಯ ವಾಕ್ಯ ॥
ಜೋಲಿಯಲ್ಲೊಂದರೆ ವರುಷವೈಸೆ ನೋವ । ತಾಳಿರೆಂದವರ್ಗೆ ಸೂಚಿಸಿದಾ ॥ ೩೯ ॥

ಕ್ಷಣಕೊಂದು ಪರಿಣಾಮವಲ್ತೆ ಜೀವನಿಗಿಂದು । ಕುಣಿದಾಡುತಿರ್ದ ವಿರಕ್ತಿ ॥
ಮಣಿದುದಾದರೆ ಮತ್ತೆಕರೆದರೆ ಬಹುದೆಯೆಂ । ದೆಣಿಕೆ ಬಿಟ್ಟಾಡಿದರವರು ॥ ೪೦ ॥

ಎಲ್ಲರ ಸಂತೈಸಿ ನೀವು ದೀಕ್ಷೆಗೆ ಮತ್ತೆ । ಮೆಲ್ಲನೆ ಬಹುದೆಂದು ನಮ್ಮ ॥
ಸೊಲ್ಲ ಮನ್ನಿಸಿ ಕಳುಹುವುದೆಂದು ಮತ್ತೊಮ್ಮೆ । ಮೆಲ್ಲಡಿಗಿಟ್ಟರು ನೊಸಲಾ ॥ ೪೧ ॥

ಅಪ್ಪಾಜಿಯಾಣೆ ನಿಮ್ಮಿಬ್ಬರಂಘ್ರಿಗಳಾಣೆ । ಯಿಪ್ಪವರಲ್ಲಿಂದೆ ನಮ್ಮಾ ॥
ತೆಪ್ಪಗೆ ಕಳುಹಬೇಕೆಂದರಿನ್ನಲ್ಲಿಂದ । ರಪ್ಪದೆ ಒಪ್ಪಿದರವರು ॥ ೪೨ ॥

ಮುಂದೆ ಹೋಗಿರಿ ಹಿಂದೆ ಬಹೆವು ನಾವೆನಲವ । ರಂದೊಪ್ಪಿ ಮನೆಗಳೊಳ್ತಮ್ಮ ॥
ನಂದನರಿದ್ದರೆಂದರಿಪಿ ರಕ್ಷಿಪುದೆಂದು । ದಂದುಗವಳಿದರುಬ್ಬಿದರು ॥ ೪೩ ॥

ಇಂದೆಮ್ಮ ಪಜ್ತಿಯೊಳುಂಡುಟ್ಟು ನಾಳೆ ಪೆಂ । ಪಿಂದ ನೀವೆಯ್ದುವುದೆಂದಾ ॥
ತಂದೆಯು ಮನೆಯು ಕಂಡೊಡೆ ಶೋಕವಹುದೊಲ್ಲೆ । ವೆಂದವರ್ತಲೆಗೊಡಹಿದರು ॥ ೪೪ ॥

ಅಣ್ಣಂದಿರಿಬ್ಬರ ಕಾಲ್ಗೆರಗಿದರುಬ್ಬಿ । ಪೊಣ್ಣನೆ ನೆಗೆದರಲ್ಲಿಂದ ॥
ಕಣ್ಣ ನೀರಿಡುತಿರ್ದರಿವರವರ್ಪೋದರು । ಬಣ್ಣವೇರುವ ಮುಖದಿಂದ ॥ ೪೫ ॥

ಅವರೆಯ್ದಲೊಡನುಳಿದಯ್ಯಂದಿರೆಲ್ಲರ । ಕುವರರು ನೃಪತಿಯಿದ್ದೆಡೆಗೆ ॥
ಅವರಂತೆ ದುಗುಡಸಿಂಗರದಿಂದ ಬಂದೆದ್ದ । ರವರಂತೆ ಕೊಸರುಮಾತೇನು ॥ ೪೬ ॥

ತೂಂತಿಟ್ಟು ವೃಷಭಸೇನೇಂದ್ರನ ಪುತ್ರನ । ನಂತಸೇನೇಂದ್ರ ಮುಂತಾದ ॥
ಹೊಂತಕಾರಿಗಳೆನಿಪನುಜರಂದಣ್ಣನ । ಮುಂತೆ ಬಾಯ್ವಿಟ್ಟಳಲಿದರು ॥ ೪೭ ॥

ಪಡೆದರೆಂಬಷ್ಟಲ್ಲದವರ ತಂದೆಗಳೆಡೆ । ಗೆಡಿಸಿ ಹೋಗಿರ್ದರಾ ಸುತರಾ ॥
ಪಿಡಿದಕ್ಕರಿಂದ ಚಕ್ರೇಶ ರಕ್ಷಿಸಿದನಾ । ಕಡುಲೇಸು ಮರುಗಿಸದಿಹುದೆ ॥ ೪೮ ॥

ಪೊರೆವಂದು ತನ್ನ ನಂದನರ ಕಾಣ್ಬಂತೆ ಸೋ । ದರರ ಪುತ್ರರ ಕಂಡನ್ನೈಸೆ ॥
ಎರವುಗಂಡನೆ ಚಕ್ರಿ ಮುಕ್ತಿಗೆಯ್ದಿದರವ । ರ್ತರಹರಿಸುವರೆ ಶೋಕಿಸದೆ ॥ ೪೯ ॥

ಕಂಡುದಿಲ್ಲಯ್ಯನ ಕಂಡೆವಾದರೆ ದೀಕ್ಷೆ । ಗೊಂಡಲ್ಲದುಳಿವೆವೆ ನಾವು ॥
ಕಂಡತ್ತ ಬಿಸುಟು ಹೋದನೆಯೆಂದು ಮರುಗಿದ । ರ್ಗಂಡುಗಳ್ಪೆಣ್ಣುಗಳಂತೆ ॥ ೫೦ ॥

ಆರ ನೋಂಪಿಯು ಜರೆದೆವೊ ಮುನ್ನ ಸುಖಿಗಳ । ನಾರ ನಿಂದಿಸಿದೆವೊ ಅಕಟಾ ॥
ಧೀರಯೋಗಿಯ ಕೈಯ ದೀಕ್ಷೆವಡೆವ ಭಾಗ್ಯ । ಸೇರಿತಿಲ್ಲೆಂದಳಲಿದರು ॥ ೫೧ ॥

ತುಷಮುಷಬೋಧೆಗೇಳ್ದಪ್ಪಾಜಿಯೊಳು ಮನೋ ।ಲಷಿತದೀಕ್ಷೆಯನಾಂಪೊಡಾವು ॥
ವೃಷಭೇಂದ್ರ ಹಂಸೇಂದ್ರ ಮೊದಲಾದ ಸುತರ ಪೌ । ರುಷವಡೆದೆವೆಯೆಂದರಳಲಿ ॥ ೫೨ ॥

ಆಗಲಿನ್ನಲ್ಪಪುಣ್ಯರು ಬಯಸಿದರೆಮ । ಗಾ ಗುರುವೇಕೆ ಸಿಕ್ಕುವನು ॥
ಭೋಗ ಸಾಕಿನ್ನು ದೀಕ್ಷೆಗೆ ಪೋಪೆವೆಂದೆಲ್ಲ । ರಾಗ ವಂದಿಸಿದರಣ್ಣನಿಗೆ ॥ ೫೩

ತಡೆದು ದೀಕ್ಷೆಯನಾಂಪವೆಂದಿಷ್ಟು ನುಡಿದೊಡಂ । ಬಡಿಸಿದರವರೊಪ್ಪದದಕೆ ॥
ನಡೆದರೆ ಮುಂದಿನ್ನು ನವಗೇತರಾಸೆ ಪಿಂ । ಗಡೆಯಲ್ಲಿ ಬಹೆವು ನಾವೆಂದಾ ॥ ೫೪ ॥

ಮಕ್ಕಳ ಪೆಸರ ಪೇಳ್ದವರ ಪಾಲಿಪುದೆಂದು । ಚಿಕ್ಕನೆ ಕೈಗಳ ಮುಗಿದು ॥
ದಿಕ್ಕುದಿಕ್ಕಿಗೆ ಹಾರಿಹೋದರು ಕೂಡಿದ । ಪಕ್ಕಿಗಳ್ಪರಿದು ಪೋಪಂತೆ ॥ ೫೫ ॥

ಸೋದರರೆಲ್ಲರು ಪೋಗಲಾ ನೃಪತಿಯು । ಸೋದರಿಯರುಸಹವಾಗಿ ॥
ಮೈದುನರೆಯ್ತಂದರುರೆ ಭಾವಗಾದ ವಿ । ಷಾದವನಾರಿಸಲೆಂದು ॥ ೫೬ ॥

ಕನಕರಾಜನು ಕಾಂತಿರಾಜ ಮುಂತಾದ ಮೈ । ದುನರೆಲ್ಲ ದುಗುಡಸಿಂಗರದಿ ॥
ವನಿತೆಯರಂದಳ ಮನೆಯೊಳವೊಗಲು ಭಾ । ವನ ಸಭೆಗೆಯ್ದಿದರ್ತಾವು ॥ ೫೭ ॥

ಒಡನಿದಿರೆದ್ದರ್ಕಕೀರ್ತಿರಾಜೇಂದ್ರ ಮೆ । ಲ್ಲಡಿಯಿಡೆ ಸಾರ್ದು ಮೈದುನರು ॥
ಬಿಡುವ ಕಂಬನಿಯಿಂದ ತಕ್ಕೈಸಿ ಕಂಬನಿ । ಬಿಡುತ ತಾವಪ್ಪಿದರವನಾ ॥ ೫೮ ॥

ಓಜೆಯೊಳೆಲ್ಲರು ಕುಳಿತರ್ಕಕೀರ್ತ್ಯಾದಿ । ರಾಜರ ನೋಡಿ ವ್ಯಾಕುಲದಿ ॥
ಸೋಜಿಗವಲ್ತೆ ಮಾವಾಜಿಯು ನಡೆಯೆಂದು । ಪೂಜಿಸಿದರು ಕೊರಳ್ನಡುಗೆ ॥ ೫೯ ॥

ದೀಕ್ಷೆವಡೆದುದೆಷ್ಟು ಬೇಗ ಕರ್ಮವ ಸುಟ್ಟು । ದಕ್ಷತೆ ತಾನೆಷ್ಟು ಬೇಗ ॥
ಮೋಕ್ಷಕೆಯ್ದಿದುದೆಷ್ಟು ಬೇಗ ಮಾವಾಜಿಯುಂ । ತಕ್ಷಣ್ಣಮಹಿಮರಿನ್ನುಂಟೆ ॥ ೬೦ ॥

ಆರುಖಂಡವನಂದು ಸಾಧಿಸುವಾಗಿಷ್ಟು । ತೋರಿತು ಜೋಲಿ ಮಾತುಲಗೆ ॥
ಮೂರುಮುಕ್ಕಾಲುಗಳಿಗೆಯಲ್ಲಿ ಮೋಕ್ಷವ । ಸೂರೆಗೊಂಡನು ಚಿತ್ರವಲ್ತೆ ॥ ೬೧ ॥

ಲೀಲೆಯೊಳಂದು ರಾಜ್ಯವ ಜಯಿಸಿದನಿಂದು । ಲೀಲೆಯೊಳ್ಮುಕ್ತಿಯನಾಳ್ದಾ ॥
ಕಾಲಕರ್ಮದ ಗಂಡನಲ್ಲದೆ ಮಾವಾಜಿ । ಕಾಲದೇಶಕೆ ತಕ್ಕ ದೊರೆಯೆ ॥ ೬೨ ॥

ಲೋಕವನೆಲ್ಲವು ಪುರೆಯಿಡೆ ಮುಕ್ತಿಗೆಯ್ದಿ ಮ । ಹಾಕೀರ್ತಿಮಾಡಿದನೆಮಗೆ ॥
ಈ ಕಾರ್ಯಕೆಲ್ಲರರ್ತಿಸಬೇಕು ನಿಮಗೆಮ ।ಗೇಕೆ ವ್ಯಾಕುಲವೆಂದರೊಡನೆ ॥ ೬೩ ॥

ಇಪ್ಪವರಾರು ಸಂಸೃತಿಯಲ್ಲಿ ಮಾವಾಜಿ । ಯಿಪ್ಪ ಕ್ಷೇತ್ರವೆ ಸ್ಥಿರವೆಮಗೆ ॥
ಒಪ್ಪಚ್ಚಿ ವಿಶ್ರಮಿಸುವ ಮತ್ತೆ ಕೈವಲ್ಯ । ಕುಪ್ಪರಿಸುವವೆಂದರೆಲ್ಲ ॥ ೬೪ ॥

ಪೋದರೇನಾಯ್ತು ಮಾವಾಜಿಯರಾತ್ಮಸಂ । ವೇದನೆದೋರಿದರೆಮಗೆ ॥
ಹಾದಿವಿಡಿದು ನಾವು ಪೋಪ ನೋವೇಕೆಂದು । ಮೈದುನರ್ತಂಪುಮಾಡಿದರು ॥ ೬೫ ॥

ನೋವೆಮಗಿಲ್ಲ ನೋವಿನಿಸಿದ್ದರದು ತಾನು । ನೀವು ಬಂದಾ ಕ್ಷಣ ಹೋಯ್ತು ॥
ಧಾವತಿಬಟ್ಟು ಬಂದಿರಿ ಬಳಲಿದಿರಿಯೆಂ । ದಾ ವಿಭು ಮೈದುನರ್ಗೊರೆದಾ ॥ ೬೬ ॥

ವೈಭವದೊಳು ನಿಮ್ಮ ಮಾವನ ಮನೆಗೆಯ್ದಿ । ವೈಭವದೊಳು ಪೋಪಿರಂದು ॥
ಕ್ಷೋಭೆಯೊಳಿಂದೆಯ್ದಿ ಬಳಲಿದಿರೆನ್ನ ಮ । ಹಾಭಾಷೆಯಿಂತಿದ್ದುದೆಂದಾ ॥ ೬೭ ॥

ನೀವಿಬ್ಬರಿರಲೆಮಗಿನ್ನು ಮಾವಾಜಿಯಿ । ದರ್ಶ ವಿಳಾಸಾರ್ಥವೆಂದವರ್ಗೆ ॥
ತಾವು ಪಯಣವಿತ್ತರೊಡನೆ ಮೂವತ್ತೆರ । ಳ್ಸಾವಿರಮಂದಿ ಮೈದುನರು ॥ ೬೮ ॥

ಆದಿರಾಜನನವರೊತ್ತಿನೊಳಿಂಬಿಟ್ಟು । ಸೋದರಿಯರ ಕಾಣ್ಬೆನೆಂದು ॥
ಮೇದಿನೀಪತಿ ಮನೆಯೊಳು ಹೊಕ್ಕನಲ್ಲಿ ಶೋ । ಕೋದಯ ಮಸಗಿತೇನೆಂಬೆ ॥ ೬೯ ॥

ಕನಕಾವಳಿಯು ರತ್ನಾವಳಿ ಮೊದಲಾದರು । ಘನಶೋಕವೆತ್ತ ತಂಗಿಯರು ॥
ಹನಿವ ಕಂಬನಿಯೊಳಣ್ಣನ ಕಾಲ ಮೇಲೆ ತೊ । ಟ್ಟನೆ ಮುಗ್ಗಿ ಕೆಡೆದೊರಲಿದರು ॥ ೭೦ ॥

ಜನಕನೆಲ್ಲಿದ್ದನಂಬಿಕೆಯರೆಲ್ಲಿದ್ದರೀ । ಮನೆಯೇಕೆ ಭಿನ್ನಗಾಯ್ತಣ್ಣಾ ॥
ಮನುಮಾರ್ಗಿ ನೀನಿರಲಿಂತಾಗಬಹುದೆಯೆಂ । ದೆನುತ ಕಾಲ್ವಿಡಿದತ್ತರೆಲ್ಲ ॥ ೭೧ ॥

ಏನೆಂದು ನಿನಗೆ ಬುದ್ಧಿಯನುಸುರಿದರೆಮ್ಮ । ನೇನೆಂದು ನೆನೆಯದೆಯ್ದಿದರು
ಹಾ ನಮ್ಮ ವಿಧಿಯೆ ಹಾ ಸುಡುಸುಡೆಂದೊರಲಿದ । ರಾ ನೃಪನೊಡಲು ಚುರ್ರೆನಲು ॥ ೭೨ ॥

ನೆಗೆವ ಕಂಬನಿಯ ನಿಲ್ಲಿಸುತೇಳ್ವ ಶೋಕವ । ತಗಹುತ ನೃಪ ಧೈರ್ಯದಿಂದ
ಮೊಗವಿಡಿದೆತ್ತಿ ತಂಗಿಯರ ಕಂಬನಿಯ ಕೈ । ಮಿಗೆ ತೊಡೆದಳಲನಾರಿಸಿದಾ ॥ ೭೩ ॥

ನೊಂದಿನ್ನು ಮಾಡುವುದೇನಕ್ಕ ಮುಕ್ತಿಗೆ । ಮುಂದಾದವರು ನಮಗಿನ್ನು ॥
ಎಂದಿನಂದದಿ ಬಂದು ಮನ್ನಿಸುವರೆ ಶೋಕ । ದಿಂದೆದೆಗೆಡುವುದಾಮೋಜೆ ॥ ೭೪ ॥

ಶಿವಸುಖಕುಜ್ಜುಗಿಸಿದರಲ್ಲದೆಮ್ಮವ । ರ್ಭವಸುಖಕುಜ್ಜುಗಿಸಿದರೆ ॥
ನಮಗೆ ನೋವೇಕಾವು ನಲವೇರಬೇಕಲ್ಲ । ದವಿವೇಕವೆತ್ತು ಶೋಕಿಪರೆ ॥ ೭೫ ॥

ಸಿರಿಬಿಟ್ಟು ರಾಜ್ಯವನಾಳ್ವಂತೆ ದೇಹವ । ತೊರೆದು ನಮ್ಮವರು ಮೋಕ್ಷದೊಳು ॥
ಮೆರೆವುತಿದ್ದಪರೈಸೆ ಕೆಟ್ಟರೆ ನಮಗಿಲ್ಲಿ । ಮರುಕವೇಕೆಲೆ ತಂಗಿಯರಿರಾ ॥ ೭೬ ॥

ಕೆಡುವ ರಾಜ್ಯವನಾಳ್ದರಯ್ಯನ ಸಿರಿಗಂದು । ಸಡಗರಗೊಂಡು ಹಿಗ್ಗಿದಿರಿ ॥
ಕೆಡದ ಮುಕ್ತಿಯನಾಳ್ದರಿಂದು ಹಿಗ್ಗದೆ ದುಃಖ । ಬಡುವರೆ ಮತಿವಂತೆಯರಿರಾ ॥ ೭೭ ॥

ನೋಡಿ ನಮ್ಮಯ್ಯನ ಶಕ್ತಿಯ ತಪದಲ್ಲಿ । ಬಾಡಿತಿಲ್ಲರೆಗಳಿಗೆಯೊಳು ॥
ಝಾಡಿಸಿ ಕರ್ಮವ ಮುಕ್ತಿಗೆಯ್ದಿದನು ಕೊಂ । ಡಾಡಿತು ಮೂಲೋಕವೆಲ್ಲ ॥ ೭೮ ॥

ನಮ್ಮಯ್ಯ ಸುಖದೊಳಿರ್ದನು ಮುಂದೆ ಮುಕ್ತಿಗೆ । ನಮ್ಮವರೆಲ್ಲರೆಯ್ದುವರು ॥
ಉಮ್ಮಳ ಬೇಡಕ್ಕ ಸೈರಿಸಿ ನಾಳೆ ನಾ । ವೆಮ್ಮವರನು ಕಾಣಬಹುದು ॥ ೭೯ ॥

ಅಂಗ ಕಂದುವುದಾಯು ಕಂಮುವುದವ್ವ ಶೋ । ಕಂಗೆಯ್ಯಲಾಗದೆನ್ನಾಣೆ ॥
ಮಂಗಳಾಯತದೋರಿರೆಂದು ಮಂಡೆಯನೀವಿ । ತಂಗಿಯರಳಲನಾರಿಸಿದಾ ॥ ೮೦ ॥

ವೇದನೆ ಮೊದಲುಂಟು ನಿನ್ನಯ ನುಡಿಗೇಳ್ದು । ಪೋದುದಣ್ಣಾಜಿ ನಿನ್ನಾಣೆ ॥
ಆದಿದೇವರು ನೀನು ಸುಖಬಾಳ್ವುದೆಂದೊಲ್ದು । ಸೋದರಿಯರು ನಮಿಸಿದರು ॥ ೮೧ ॥

ಬಳಿಕ ತಂಗಿಯರೆಲ್ಲ ಸ್ನಾನದೇವಾರ್ಚನೆ । ಗಳ ಮಾಡಲೆಂದೊಲ್ದು ತನ್ನ ॥
ಲಲನೆಯರಿಗೆ ಪೇಳ್ದು ತಿರುಗಿ ಬಂದಾಸ್ಥಾನ । ದೊಳು ಪೊಕ್ಕನಾ ಪ್ರೌಢನೃಪತಿ ॥ ೮೨ ॥
ವೇಳೆಯಾದುದು ನೀವು ಸ್ನಾನದೇವಾರ್ಚನೆ । ಗೇಳಿರೆಂದೊಡನೆ ಮೈದುನರಾ ॥
ಸಾಲುಮಜ್ಜನಗೃಹಗಳಿಗೆ ಬೀಳ್ಕೊಟ್ಟ ತ । ನ್ನೊಳಿಗದವರೊಡಗೂಡಿ ॥ ೮೩ ॥
ಅನುಜನು ತಾನು ಮಜ್ಜನಗೈದು ದೇವತಾ । ರ್ಚನೆಗೈದು ಮೈದುನರ್ವೆರಸಿ ॥
ಮನೆಯೊಳಾರೋಗಿಸಿ ಚಕ್ರಿ ಪೋದಳಲ ಘ । ಮ್ಮನೆ ಮರೆಯಿಸಿದನೆಲ್ಲರಿಗೆ ॥ ೮೪ ॥
ತೊರೆದು ನಮ್ಮವರು ದೀಕ್ಷೆಗೆ ಪೋಗಿ ಮನೆಯೆಲ್ಲ । ಬರಿದಾದುವಿಲ್ಲಿ ನೀವಿದ್ದು ।
ಕಿರಿದುದಿವಸ ನವಗರ್ತಿಯ ಸಲಿಪುದೆಂ । ದುರೆ ಬೇಡಿಕೊಂಡ ಮೈದುನರಾ ॥ ೮೫ ॥
ಆಗಲೆಂದವರೊಪ್ಪಿ ತಡೆದರವರಿಗನು । ರಾಗದಿ ಸೋದರಿಯರಿಗೂ ॥
ಭೋಗವಸ್ತುವನಡಿಗಡಿಗಿತ್ತು ಮನ್ನಿಸು । ತಾ ಗುಣೋತ್ತಮನಿರುತಿರ್ದಾ ॥ ೮೬ ॥

ಮರುದಿನದೊಳು ಭಾನುರಾಜ ವಿಮಲರಾಜ । ಕಿರಿಯ ಕಮಲರಾಜನವರು ॥
ತುರುಗಿದ ಪುತ್ರಕಳತ್ರಗಳೊಡಗೂಡಿ । ಮರುಕದಿ ಬಂದರಾ ಪುರಕೆ ॥ ೮೭ ॥
ಸೋದರವಾವಂದಿರಲ್ಲವೆ ಅಳಿಯಂದಿ । ರಾ ಧರಣಿಗೆ ಬಂದರವರು ॥
ಪಾದಮಾರ್ಗದೊಳಿದಿರೆಯ್ದಿ ಕಂಡರ್ಕಕೀ । ರ್ತ್ಯಾದಿರಾಜರು ಸಂದಿಸಿದರು ॥ ೮೮ ॥
ಹಲವು ಮಾತೇನವರಿಗು ಮೊದಲವರಂತೆ । ಹಲವು ಮನ್ನಣೆಯ ಮಾಡಿದರು ॥
ಒಳಗೆ ಪೆಂಗಳಿಗೆ ಪೆಂಗಳು ವಿನಯುವ ಮಾಡೆ । ಕೆಲವು ದಿವಸವಿದ್ದರವರು ॥ ೮೯ ॥
ಬೆರಸಿ ಮತ್ತಡಿಗಡಿಗೆಯ್ತರುತಿಹ ಮೂರು । ವರೆಕೋಟಿ ಬಂಧುವರ್ಗವನು ॥
ತರಹರವಿಡದರ್ಕಕೀರ್ತಿರಾಜೇಂದ್ರನಾ । ದರಿಸಿದನಯ್ಯನಂದದೊಳು ॥ ೯೦ ॥
ಸರ್ವರ್ಗೆ ಪ್ರತಿಪತ್ತಿಗೆಯ್ದು ತಂಗಿಯರಿಂಪು । ದೋರ್ವ ಮೈದುನರಾದಿಯಾದ ।
ಸರ್ವರ ಕೂಡೆ ಬೀಳ್ಕೊಟ್ಟನೆಂಬಲ್ಲಿಗೆ । **ಸರ್ವನಿರ್ವೇಗದ ಸಂಧಿ** ॥ ೯೧ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೯೨ ॥
ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೯೩ ॥
ಮರುಕವೆಂಬುದು ಮಮಕಾರವೆಂಬುದು ಮತ್ತೆ । ಮರಹೆಂಬ ಭಾವ ಬೇರೆಂದು ॥
ಅರಿಪುತ ನನ್ನಂತರಂಗದೊಳಿರು ದೇವ । ರೆರೆಯ ಚಿದಂಬರಪುರುಷಾ ॥ ೯೪ ॥

---

ಸರ್ವನಿರ್ವೇಗಸಂಧಿ ಸಂಪೂರ್ಣಂ.

---

## ಸರ್ವರ ಮೋಕ್ಷಸಂಧಿ

ಶ್ರೀನಂದನಾಟ್ಯಾವಲೋಕನದಕ್ಷ ಬ್ರ । ಹ್ಮಾನಂದಸಿದ್ಧ ಸಮೃದ್ಧಾ ॥
ಧ್ಯಾನೈಕಗಮ್ಯ ಸನ್ಮತಿದೋರು ಮೋಕ್ಷಸಂ । ಧಾನ ನಿರಂಜನಸಿದ್ಧಾ ॥ ೧ ॥

ಬಗೆದರ್ಕಕೀರ್ತಿರಾಜನು ಬಂದ ಸಕಲಬಂ । ಧುಗಳ ಬೀಳ್ಕೊಟ್ಟು ಮತ್ತೊಂದು ।
ಪಗಲಿನೊಳೋಲಗವಿರಲೊಂದು ಹೊಸವಾರ್ತೆ । ನೆಗೆದುದೇನೆಂಬೆನದ್ಭುತವಾ ॥ ೨ ॥
ವಿಮಲರಾಜನು ಭಾನುರಾಜನು ಬಿಂಕದ । ಕಮಲರಾಜನು ತಾವು ತಮ್ಮ ॥
ರಮಣಿಯರಣುಗರುವೆರಸಿ ದೀಕ್ಷೆಯನಾಂತ । ಗಮಕದ ನುಡಿ ಬಂದಿತೊಡನೆ ॥ ೩ ॥
ಅಳಿಯಂದಿರಾರೈಕೆಗೆಯ್ದಿದಾಗರಮನೆ । ಯೊಳಪೊಕ್ಕು ಚಕ್ರಿಯ ಭಾಷೆ ॥
ಗಳಬಳನಾದುದ ಕಂಡತಿನಿರ್ವೇಗ । ಮೊಳೆತು ದೀಕ್ಷೆಯ ಕೊಂಡರವರು ॥ ೪ ॥
ಮತ್ತು ಬಾಂಧವರಲ್ಲಿ ಕೆಲರು ದೀಕ್ಷೆಯನಾಂತ । ವೃತ್ತಾಂತ ಬಂದುದಾ ಕ್ಷಣವೇ ॥
ಚಿತ್ತದೊಳರ್ಕಕೀರ್ತ್ಯಾದಿರಾಜರಿಗೆ ಕೂ । ಡೆತ್ತಿತು ಪರಮವಿರಕ್ತಿ ॥ ೫ ॥
ತಮ್ಮನ ಮೊಗ ನೋಡಿ ನಕ್ಕನಣ್ಣನು ಕೂಡೆ । ತಮ್ಮನಣ್ಣನ ಮೊಗ ನೋಡಿ ॥
ನಮ್ಮವರೆಲ್ಲರಗ್ಗಳರು ನಾವಲ್ಪರು । ಸುಮ್ಮಾನವೇಕೆ ಛೀಯೆಂದಾ ॥ ೬ ॥
ಲೇಸನಾಡಿದೆ ತಮ್ಮ ನೀನಲ್ಪದವನೆ ಕೈ । ಲಾಸನಾಥನ ತೇಜನಲ್ತೆ ॥
ಮೋಸದೊಳಿರ್ದವ ನಾನಲ್ಪದವನಿನ್ನು । ಬೀಸರಿಸುವೆನು ನೋಡೆಂದಾ ॥ ೭ ॥
ಜನಕನ ನವನಿಧಿ ಪದಿನಾಲ್ಕುರತ್ನ ತೊ । ಟ್ಟನೆ ಬಯಲಾದ ಮೇಲಾನು ॥
ಮನುಜೇಂದ್ರಪದವ ನಚ್ಚಿರ್ದುದಧಮತನ । ವೆನುತ ಕೊಕ್ಕರಿಸಿದನಾಗ ॥ ೮ ॥
ಒಡೆಯರಿರ್ದಾಗಿರ್ದ ಯುವರಾಜಪದದಷ್ಟೆ । ಸಡಗರವಿನ್ನುಂಟೆ ನನಗೆ ॥
ಸುಡುಸುಡೆನ್ನಧಿರಾಜಪದವನೆಂದುರೆ ತಲೆ । ಗೊಡಹಿದನಾ ಸುವಿವೇಕಿ ॥ ೯ ॥
ಮುನ್ನಾರುಖಂಡದ ಭೂಪರೋಲೈಸಿದ । ರಿನ್ನಯೋಧ್ಯೆಯ ಸುತ್ತಣವರು ॥
ನನ್ನನೋಲೈಪರೀ ಸಿರಿಯಿದು ಸಿರಿಯೆ ಛೀ । ಬನ್ನವೆಂದೆದೆಯಲ್ಲಿ ನೆನೆದಾ ॥ ೧೦ ॥
ಹೆತ್ತ ತಂದೆಯ ಮಾತಿಗುತ್ತರಗೊಡದಾನು । ಹೊತ್ತೆನಲ್ಲದೆ ಧರಣಿಯನು ॥
ಉತ್ತಮವೆಂದಾಂತುದಿಲ್ಲವಿನ್ನಿದನೊಬ್ಬ । ಗಿತ್ತು ಬಿಡುವೆನೆಂದು ಬಗೆದಾ ॥ ೧೧ ॥

ನೆಲ್ಲ ರಾಶಿಗಳಷ್ಟು ಹೊನ್ನ ರಾಶಿಗಳುಂಟು । ಹುಲ್ಲ ಹೆಬ್ಬೆಣಬೆಗಳಷ್ಟು ॥
ಜಲ್ಲಿಪಟ್ಟೆಗಳ ಬಲ್ಮೆದೆಯಿದ್ದುವವನೊಂದು । ಹುಲ್ಲಿಗೆ ಕಡೆಗಂಡು ಬಿಟ್ಟಾ ॥ ೧೨ ॥
ಅಡಕೆಯ ಗುಪ್ಪೆಯಷ್ಟಾಭರಣಗಳುಂಟು । ಕಡಲ ತಡಿಯ ಮಳಲಷ್ಟು ॥
ಗಡಣಿಸೆ ಧಾನ್ಯಸಂಗ್ರಹಗಳುಂಟವನು ಗೋ । ಟಡಕೆಯರ್ಧಕೆ ಸಾಟಿಗಂಡಾ ॥ ೧೩ ॥

ಮಿಸುನಿರನ್ನದ ಮಾಡ ಚಾವಡಿಯುರಮನೆ । ಮಿಸುಪ ನಾಟಕಶಾಲೆಗಳನು ॥
ಮಸಣವಟ್ಟಿಗೆ ಸೆರೆಮನೆಗೆಣೆಗಂಡು ಯೋ । ಚಿಸಿದನಾ ನೃಪನೆದೆಯೊಳಗೆ ॥ ೧೪ ॥
ಲಾವಣ್ಯಸತಿಯುರಾಗವಗೆ ಕುರೂಪಿನ । ಸ್ತ್ರೀವೇಷವೆನಿಸಿ ತೋರಿದರು ॥
ಭೂವಲಯುದ ಪಟ್ಟವೆಂಬುದು ಸೆರೆಯು ವ್ಯೈ । ಗಾವಲಂತಿದಿರುಗಾಣಿಸಿತು ॥ ೧೫ ॥
ಚಕ್ರಿಯಾಳಿದುದು ಮಹಾಭಾಗ್ಯವಹುದದು । ಚಕ್ರಿ ಮುಕ್ತಿಗೆ ಸಂದ ಮೇಲೆ ॥
ವಿಕ್ರಿಯೆಗೈದುಳಿದೋಕುಳಿಯಂತೆ ಪ । ರಾಕ್ರಮಿಗಾಗ ಕಾಣಿಸಿತು ॥ ೧೬ ॥
ಕೇಲಾರ ತೇರಾನೆ ತೇಜಿ ಕೂರಾಳಿಂದ್ರ । ಜಾಲದಂತಾಗ ಕಾಣಿಸಿತು ॥
ಈ ಲೋಕರಚನೆಯನೊಬ್ಬನ ಮೇಲಿಟ್ಟು । ತೇಲುವೆನೆಂದನುವಾದಾ ॥ ೧೭ ॥
ತನುಜರು ನೆರೆದಿರ್ದರವರಿಂಗುರ್ವಿಯ ಪಟ್ಟ । ವೆನೆ ವ್ರತಮಾಡಿದರವರು ॥
ಅನುಜನ ನೆರೆದ ಮಕ್ಕಳಿಗಿತ್ತರವರೊಲ್ಲ । ದನಿಬರು ದೀಕ್ಷೆಗೊಪ್ಪಿದರು ॥ ೧೮ ॥
ನೆರೆದ ಕುಮಾರರೊಲ್ಲದಿರಾರುವರ್ಷದ । ಕಿರಿಯ ಕುಮಾರರಿಬ್ಬರಿಗೆ ॥
ಮೆರೆವಧಿರಾಜನು ಯುವರಾಜನೆಂದು ತ । ತ್ತರಗೊಂಡು ಪಟ್ಟಗಟ್ಟಿದನು ॥ ೧೯ ॥
ಮನುರಾಜನೆಂಬ ತನ್ನಣುಗನಿಗಾದಿರಾ । ಜನ ಪುತ್ರ ಭೋಗರಾಜನಿಗೆ ॥
ಘನಪಟ್ಟಗಟ್ಟಿ ಮತ್ತವರ ರಕ್ಷಣೆಗಾಪ್ತ । ಜನವನಾರೈದನಾ ಕುಶಲಾ ॥ ೨೦ ॥
ಸುತರ ಸೋದರರದ ಮಾವಂದಿರ್ಗೆ ಶುಭರಾಜ । ಮತಿರಾಜರೆಂಬರಿಬ್ಬರಿಗೆ ॥
ಅತಿವಿನಯವ ಮಾಡಿ ನಿಲಿಸಿ ಮತ್ತವರಿಗೆ । ಸುತರ ಕೈಲಿಡೆಗೊಟ್ಟನೊಡನೆ ॥ ೨೧ ॥
ಹಿತವರೆಲ್ಲರು ದೀಕ್ಷೆಗುಜ್ಜುಗಿಸಿದರು ಸ । ನ್ಮತಿಯೆಂಬ ಮಂತ್ರಿಯೊಬ್ಬನನು ॥
ಸುತರಿಷ್ಟು ನೆರೆವನ್ನಯಿದ್ದು ಬಾರೆಂದು ಪೂ । ಜಿತಭಾಗ್ಯವಿತ್ತು ನಿಲ್ಲಿಸಿದಾ ॥ ೨೨ ॥
ನಾಡು ಬೀಡಾನೆ ಕುದುರೆ ಪ್ರಜೆ ಪರಿವಾರ । ಕೂಡೆ ಭಂಡಾರ ಬೊಕ್ಕಸವಾ ॥
ನೋಡಿಕೊಂಬುದು ನೀವು ಸುಖಬಾಳ್ವುದೆಂದವ । ಗರ್ಡಿಬಿಟ್ಟನು ನಿರಾಶೆಯಲಿ ॥ ೨೩ ॥

ಏಳಾದಿದೇವರು ತಪಕೆಂದನವನದ । ಹೇಳದ ಮೊದಲೆದ್ದನುಬ್ಬಿ ॥
ಮೇಳದವರುಗೂಡಿ ನಡೆವಾಗ ಚವರ ಬೊಂ । ಬಾಳವ ಪಿಡಿದರಿಬ್ಬರಿಗೆ ॥ ೨೪ ॥
ಒಂದು ಬೊಂಬಾಳವನಣ್ಣನೇರಿದನು ಮು । ತ್ತೊಂದನಾ ತಮ್ಮಗೊಡ್ಡಿದರೆ ॥
ಅಂದಳ ಸಾಕೆನಗಿದು ಬೇಡವೆಂದ ನೋ । ಡೆಂದೂ ಬಿಡದು ರಾಜನೀತಿ ॥ ೨೫ ॥
ಚವರ ಬೊಂಬಾಳ ಪಟ್ಟದ ರಾಜಗಲ್ಲದೆ । ಯುವರಾಜಗುಂಟೆ ಲೋಕದೊಳು ॥
ಅವಿವೇಕದಾಚರಣೆಯನಾರು ನಡೆವರೆಂ । ದವನೊಲ್ಲದೋಕರಿಸಿದನು ॥ ೨೬ ॥
ಮೋಕ್ಷಯಾನದೊಳಿಂದು ದೋಷವಿಲ್ಲೇರೆನು । ಶಿಕ್ಷಿಸಿ ನುಡಿದನಗ್ರಜನು ॥
ದೀಕ್ಷೆವಡೆವ ವೇಳೆಮುಟ್ಟ ರಾಜಾಂಗವ । ರಕ್ಷಿಸಬೇಕೊಲ್ಲೆನೆಂದಾ ॥ ೨೭ ॥

ಹಿರಿಯನಾ ಚವರಬೊಂಬಾಳದೊಳೆಯ್ದ ಹ । ತ್ತಿರೆ ತಾನು ಪಲ್ಲಕ್ಕಿಯೇರಿ ॥
ತೆರಳಿದನಾದಿರಾಜನು ಪುತ್ರರಾಪ್ತರು । ಬರುತಿರ್ದರಂದಳವೇರಿ ॥ ೨೮ ॥
ಕುವರರ ಸಾಕಿದ ದಾದಿಯರಿಬ್ಬರು । ಭವನದೊಳುಳಿದರು ಮಿಕ್ಕ ॥
ಯುವತಿಯರ್ಸನ್ನಂಗಪಲ್ಲಕ್ಕಿಯೊಳು ಬಂದ । ರವರ ಹಿಂದಿಷ್ಟು ದೂರದೊಳು ॥ ೨೯ ॥
ನಾಡೆಲ್ಲ ಮುನ್ನವೆ ನಿರ್ವೇಗರಸದಲ್ಲಿ । ಕೋಡಿವರಿವುತಿರ್ದುದಾಗ ॥
ಬೇಡಬೇಕೆಂಬವರಿಲ್ಲ ಮುಂದಕೆ ತಳು । ಮಾಡದೆ ನಡೆದನಾ ನೃಪತಿ ॥ ೩೦ ॥
ಪೊಳಲ ದಾಂಟಿದನು ತನ್ನಪ್ಪಾಜಿ ದೀಕ್ಷೆಯು । ತಳೆದ ಕಾಂತಾರವ ಹೊಕ್ಕು ॥
ಮಲಯಜವೃಕ್ಷದೊತ್ತಿನೊಳು ಬೊಂಬಾಳದಿಂ । ದಿಳಿದನು ಜಯಜಯಯೆನಲು ॥ ೩೧ ॥
ಪಲ್ಲಕ್ಕಿಯಿಳಿದಾದಿರಾಜನ ಕರೆದೊತ್ತಿ । ನಲ್ಲಿ ನಿಲ್ಲಿಸಿಕೊಂಡನೊಡನೆ ॥
ಎಲ್ಲರು ಸಾರ್ದು ನಿಂದರು ಪೆಂಗಳೊಂದೆಸೆ । ಯಲ್ಲಿದ್ದರಿಷ್ಟು ಬೇರ್ಪಡಿಸಿ ॥ ೩೨ ॥
ಗುರುಹಂಸನಾಥನೆ ಗುರುವೆಂದು ನಿಜ್ಜನಿ । ರ್ಧರಿಸಿರ್ದರಾಗಿ ದೀಕ್ಷೆಯನು ॥
ಪೆರರ ಹಾರದೆ ತಾವೆ ಧರಿಸುತಿರ್ದರು ಮಝು । ಭರತೇಶನಾತ್ಮಜರಲ್ತೆ ॥ ೩೩ ॥
ತಂದೆಗೆ ಪಿಡಿದಂತೆ ತೆರೆವಿಡಿದರು ತಾವು । ತಂದೆಯುಂದವಿ ದೀಕ್ಷೆವಡೆದು ॥
ನಿಂದರು ಧ್ಯಾನದೊಳೆಂಬೆನು ತಪತಪ । ವೆಂದು ಕೊಸರುತಿರಲೇಕೆ ॥ ೩೪ ॥
ಭರತೇಶನಂತೆ ದೀಕ್ಷೆಯನಾಂತರಹುದವ । ರ್ಭರತೇಶನಂತೆ ಕರ್ಮಗಳಾ ॥
ಎರಡುಗಳಿಗೆಗಿಕ್ಕಿತಿಲ್ಲಿಷ್ಟು ತಾಮಸ । ಪೊರೆದೊತ್ತಿ ಕಳೆದರೆಂತೆನಲು ॥ ೩೫ ॥
ವಿಮಲವಿಶಾಲಶಿಲೆಯೊಳಿಷ್ಟು ಬೇರ್ಪಟ್ಟು । ಕಮಲಾಸನಾಂಕದಿ ಕುಳಿತು ॥
ಸಮಖುಜುದೇಹ ವಿರಾಜಿಸೆ ಕಣ್ಮುಚ್ಚಿ । ಭ್ರಮಿಸುವ ಮನವ ತಡೆದರು ॥ ೩೬ ॥
ಕಣ್ಣ ಮುಚ್ಚಿದ ಮಾತ್ರದೊಳೆ ಮಝು ತನ್ಮನೆಂ । ಬಣ್ಣನೆಂಬಕ್ಷರು ಹೋಯ್ತು ॥
ಉಣ್ಣದುರಿವ ಮನವಾತ್ಮನೊಳಡಗೆ ಮೈ । ವಣ್ಣ ಬೇರಾಗಿ ಕಾಣಿಸಿತು ॥ ೩೭ ॥
ಪರವಸ್ತುವಿನ ಸ್ನೇಹ ಮೊದಲೆ ಕೆಟ್ಟಿರ್ದು ಸೋ । ದರರೆಂಬ ಸ್ನೇಹ ಜಾರಿದುದು ॥
ಪರಮಾತ್ಮಕಳೆ ಹೆಚ್ಚುತಿರ್ದುದು ಕರ್ಮ ಜ । ರ್ಜರಿಸುತಿರ್ದುದು ಯೋಗಿಗಳಿಗೆ ॥ ೩೮ ॥
ಸ್ನೇಹ ಸೋಂಕಿದರೆ ಕಿಚ್ಚುರಿವುದೀ ಧ್ಯಾನಾಗ್ನಿ । ಸ್ನೇಹ ಸೋಂಕಿದರೆ ನಂದುವುದು ॥
ಸ್ನೇಹ ಬಿಟ್ಟಷ್ಟಕೆ ಹೆಚ್ಚುವುದೆನೆ ಧ್ಯಾನ । ದಾಹ ವಿಸ್ಮಯವಲ್ತೆ ಜಗಕೆ ॥ ೩೯ ॥
ಹಿರಿಯ ತಾಪಸ ಚಿಕ್ಕ ತಾಪಸನೆಂದು ಬಾ । ಹಿರದಿ ನಿಟ್ಟಿಸುತಿರ್ದರೆಲ್ಲ ॥
ಹಿರಿದಿಲ್ಲ ಕಿರಿದಿಲ್ಲ ಚಿತ್ರಭೆಯಿಬ್ಬರ್ಗೆ । ಸರಿಯಾಗಿ ದಳವೇರಿತೊಳಗೆ ॥ ೪೦ ॥
ಹರೆಯವೊಳಂಗದೊಳನ್ವಯದಲ್ಲಿ ಮ । ತ್ಸರಿಗಿಷ್ಟು ಹೆಚ್ಚುಕುಂದೈಸೆ ॥
ಪರಮಾರ್ಥದೊಳಗೆಲ್ಲರಾತ್ಮನ ನೋಳ್ಪಾಗ । ಸರಿಯಲ್ಲದಿನಿಸುಂಟೆ ಕೊರತೆ ॥ ೪೧ ॥

ಅರರೆ ನೋಡಾಪನ್ನಭವ್ಯರ ಧ್ಯಾನನಿ । ಷ್ಠುರವನಿನ್ನೇನೆನ್ನಬಹುದು ॥
ಅರಳೆಯ ರಾಶಿಯೊಳಗೆ ಬಿದ್ದ ಕಿಟಿಯಂತೆ । ದುರಿತರಾಶಿಯ ಹತ್ತಿತೊಡನೆ ॥ ೪೨ ॥

ಮೂತಿನ ಮಾಲೆಯೊಳ್ತಡಮಾಡಲೇಕೆ ಮ । ತ್ತಾ ತಪೋಧನರು ಧ್ಯಾನದಲಿ ॥
ಘಾತಿಕರ್ಮಗಳ ತಾವಿಬ್ಬರೊಂದೇ ಬಾರಿ । ಘಾತಿಸಿದರು ವಿಚಿತ್ರಾರ್ಥ ॥ ೪೩ ॥

ಎರಡುಗಳಿಗೆಗಿಷ್ಟು ಕಡಮೆಯೊಳ್ಭವವನೊ । ತ್ತರಿಸುವ ತೇಜವಯ್ಯನಿಗೆ ॥
ಇರಲೆಂದು ತಡೆದು ಗೆಲ್ವರೊಯೆನೆ ತಾವೆಯ್ದು । ವರೆಗಳಿಗೆಗೆ ಸವರಿದರು ॥ ೪೪ ॥

ಪಿತ ದೀಕ್ಷೆವಡೆಯಲೊಡನೆ ಶ್ರೇಣಿಗೇರಿದ । ಸುತರು ನಾಲ್ಗಳಿಗೆ ವಿಶ್ರಮಿಸಿ ॥
ಹತಿಸಿದರಘಗಳನೆಂಬರ್ಥಶ್ರೇಣಿಗೆ । ಮಿತ ನಸುಕಡಮೆ ಮುಹೂರ್ತ ॥ ೪೫ ॥

ಜರಿದ ಕರ್ಮದ ಗಣನೆಯು ಭುಜಬಲಿಯೋಗಿ । ಪರಿದ ಶ್ರೇಣಿಯೊಳು ಲೆಕ್ಕಿಪುದು ॥
ನೆರೆದ ಗುಣವ ಭರತೇಶದೋರ್ಬಲಿಗಳ । ಪರಿಯೊಳರಿವುದದು ಸಾಕು ॥ ೪೬ ॥

ಕರ್ಕಶದಘಸೋರೆ ಗುಣ ಸಾರೆ ಕೋಟಿಚಂ । ದಾರ್ಕಪ್ರಕಾಶವುಜ್ಜ್ವಳಿಸೆ ॥
ಆರ್ಕಕೀರ್ತ್ಯಾದಿಜಿನರು ಶಿಲೆಯಿಂದ ಸ । ಮರ್ಕೆಯೊಳ್ಪೆಗೆದರಂಬರಕೆ ॥ ೪೭ ॥

ಬಂದರು ಜಯಜಯಯೆನುತಾಗ ದಿಕ್ಕು ದಿ । ಕ್ಕಿಂದ ನರೋರಗಸುರರು ॥
ಗೊಂದಣನುಡಿಯೇನು ಗಂಧಕುಟಿಗಳು ಚೆ । ಲ್ವಿಂದೆರಡಾದುವಿರ್ವರಿಗೆ ॥ ೪೮ ॥

ಸರಸಿಜ ಸೋಂಕದೆ ಸರಸಿಜಾಸನದಲ್ಲಿ । ಪರಮರಿಬ್ಬರು ನೆಲಸಿದರು ॥
ಪರಿತಂದು ಸರ್ವರರ್ಚಿಸಿ ಸ್ತೋತ್ರಮಾಡಿದ । ರರರೆ ಮಹೋತ್ಸವವಾಯ್ತು ॥ ೪೯ ॥

ಸುರಪ ಧರ್ಮವ ಬೆಸಗೊಳಲುಸುರಿದರಂದು । ಭರತಸರ್ವಜ್ಞನೆಂದಂತೆ ॥
ಭರತಜಿನೇಂದ್ರನಿತ್ತಂತೆ ಪೆಣ್ಪಿಂಡಿಗೆ । ಲ್ಲರಿಗಿತ್ತರೊಡನೆ ದೀಕ್ಷೆಯನು ॥ ೫೦ ॥

ಉದ್ದಂಡಮತಿಯುಷ್ಪಚಂದ್ರರಯೋಧ್ಯಾಂಕ । ನಿದ್ದ ಭೂಭುಜರಲ್ಲಿ ಕೆಲರು ॥
ಹೊದ್ದಿದರನುಪಮದೀಕ್ಷೆಯನಾಗಳೆ । ಗೆದ್ದರು ಭವವನಿನ್ನೇನು ॥ ೫೧ ॥

ಜ್ಞಾನಕಲ್ಯಾಣಗೈದಮರೇಂದ್ರ ಪೋದನ । ನನೂನಭವ್ಯರು ತಪೋಧನರು ॥
ಆನಂದ ಮಿಗೆ ದಿನಚರಿ ಬರುತಿರ್ದರಾ । ಜೈನೇಂದ್ರರಿಬ್ಬರ ಸಭೆಗೆ ॥ ೫೨ ॥

ಶ್ರೀಕುಂತಲಾವತಿಯಕ್ಕಗಳ್ನಲಿಯೆ ಮ । ತ್ತಾ ಕುಸುಮಾಜಿಯಕ್ಕಗಳು ॥
ಲೋಕಾಗ್ರಪದವಡೆದಂತಾಗಲಣುಗರೆಂ । ಬಾಕಾಂಕ್ಷೆ ನೋಡಿನ್ನು ತಮಗೆ ॥ ೫೩ ॥

ಜನನಿಯರೆಂಬಾಸೆ ಜಿನರಿಗಿಲ್ಲವರಿಗೆ । ತನುಜರೆಂಬಾಸೆಯೆ ಬಿಡದು ॥
ತನುವಳಿವನ್ನೆಗ ಬಿಡುವುದೆ ಕರ್ಮವ । ರ್ತನೆಯುಲ್ತೆ ಮಾರುವರಾರು ॥ ೫೪ ॥

ಇಂತಿವರಿರಲಂದು ಬೀಳ್ಕೊಂಡು ಮೂವರು । ಕಂತುವಿನಾತ್ಮಜರವರ ॥
ಪಿಂತಣನಂತಸೇನೇಂದ್ರ ಮುಂತಾದವ । ರಾಂತರು ಮೊದಲೆ ದೀಕ್ಷೆಯನು ॥ ೫೫ ॥

ಇರ್ವರಿವರು ಹಂಸನಾಥನೆ ಗುರುವೆಂದು । ನಿರ್ವಹಿಸಿದರು ದೀಕ್ಷೆಯನು ॥
ಸರ್ವರವರ ಗಂಧಕುಟಿಗೆಯ್ದಿ ಜಿನಗುರು । ಪೂರ್ವಕವಾಗಿ ತಾಳಿದರು ॥ ೫೬ ॥

ಅಯ್ಯನ ಬೋಧೆಗೆಳ್ದಡಿಗಡಿಗಾತ್ಮನ । ನಯ್ಯನಂತನುದಿನ ನೋಡಿ ॥
ಅಯ್ಯನಂದದಿ ದೀಕ್ಷೆವಡೆದರಿಂದಿವರಿಗೆ । ರಯ್ಯ ಮಿಕ್ಕವರಿಗೇಕಹುದು ॥ ೫೭ ॥

ಒಳಗ ಕಂಡನುಭವಿಸುವನಿಗಾತ್ಮನೆ ಗುರು । ಒಳಗನುಭವವಿಲ್ಲದರಿಗೆ ॥
ಬಳಿಕೊಬ್ಬ ಗುರುಬೇಕು ನಿಶ್ಚಯ ವ್ಯವಹಾರ । ಕಲೆಯಿದು ಸ್ಯಾದ್ವಾದದೋಜೆ ॥ ೫೮ ॥

ಕೊಟ್ಟವಸ್ತುವ ಕಾಣದವನೊಬ್ಬನಾಪ್ತರ । ಕಟ್ಟಿಕೊಂಡರಸುವುದೋಜೆ ॥
ತೊಟ್ಟನೆ ವಸ್ತುವ ಕಂಡವಗನ್ಯರ । ಬಟ್ಟೆಯ ಹಾರಲದೇಕೆ ॥ ೫೯ ॥

ಮುಂತಿವರೆಯ್ದೆ ಕೇಳ್ದೊಡನೆ ಕನಕರಾಜ । ಕಾಂತರಾಜನು ಮೊದಲಾದ ॥
ಕುಂತು ಹೊದ್ದದ ಸರ್ವಮೈದುನರೆಲ್ಲರೋ । ರಂತೆ ದೀಕ್ಷಿತರಾದರೊಸೆದು ॥ ೬೦ ॥

ತಂದೆ ತಾಯತ್ತಿಗೆ ನಾದುನಿಸೋದರ । ರಂದೊಮ್ಮೆ ದೀಕ್ಷೆಗೆಯ್ದಿದರು ॥
ಇಂದಿವರೆಯ್ದಿದರೆನಲಾಸೆಯುಳಿದು ಲೇ । ಸೆಂದು ತಂಗಿಯರು ತೊರೆದರು ॥ ೬೧ ॥

ಭಾಮಾಜಿ ರತ್ನಾಜಿ ಕನಕಾವಲಿಯು ಮನು । ದೇವಿ ಮುಂತಾದ ತಂಗಿಯರು ॥
ಪಾವನದೀಕ್ಷೆಯ ತಮ್ಮೊಪ್ಪರೊಡನೆ ಮ । ಹಾವಿರಾಗದಿ ಧರಿಸಿದರು ॥ ೬೨ ॥

ಭರತೇಶನಿರ್ದಾಗ ಭರತೋರ್ವಿ ಮೈಸಿರಿ । ಭರಿತವಾಗಿರ್ದುದಾ ನೃಪತಿ ॥
ತೆರಳಲೊಡನೆ ತಾನು ತೆರಳಿತು ವೈರಾಗ್ಯ । ಶರಧಿ ಮೇಲ್ಗವಿದುದು ಜಗಕೆ ॥ ೬೩ ॥

ಜಾರಿದ ಮೋಹಕರ್ಮದೊಳಂದೆ ಮಮಕಾರ । ಹಾರಿತು ನಿಸ್ಪೃಹರಲ್ತೆ ॥
ಬೇರುಪಟ್ಟರ್ಕಕೀರ್ತ್ಯಾದಿನಾಥರು ಬೆಡಂ । ಗೇರಿ ವರ್ತಿಸಿದರುರ್ವಿಯೊಳು ॥ ೬೪ ॥

ಸ್ಫುಟದೊಳೊಂದೆಸೆಗರ್ಕಕೀರ್ತಿನಾಥನ ಗಂಧ । ಕುಟಿ ಸಾಗಿತೊಡನೊಂದು ದೆಸೆಗೆ ॥
ಘಟಿತಾದಿನಾಥನ ಸಭೆ ಹೋಯ್ತು ನರಸುರ । ಕಟಕದ ಜಯಘೋಷವೆಸೆಯೆ ॥ ೬೫ ॥

ತಂದೆ ಘಾತಿಯನಿಕ್ಕಿ ಮರುದಿನ ಮುಕ್ತಿಗೆ । ಸಂದನಂತಾಯ್ತಿಲ್ಲ ತಾವು ॥
ತಂದೆಯಂದದಿ ಸುಟ್ಟರಹುದು ಘಾತಿಯನಿಷ್ಟು । ನಿಂದು ಮೆಲ್ಲನೆ ತೆರಳಿದರು ॥ ೬೬ ॥

ಕಡೆಯರಿದಯ್ಯ ದೀಕ್ಷೆಯನಾಂತನಿವರು ಮುಂ । ಗುಡಿಯ ಪ್ರಾಯದೊಳಾಂತರಲ್ತೆ ॥
ಕಡುದೀರ್ಘದಾಯುಷ್ಯ ತೀರ್ವನ್ನ ವಿಹರಿಸಿ । ಪೊಡವಿಗಾನಂದದೋರಿದರು ॥ ೬೭ ॥

ಕಾಳಿಂಗ ಕಾಶ್ಮೀರ ಲಾಟ ಕರ್ಣಾಟ ಸಾಂ । ಚಾಳ ಸೌರಾಷ್ಟ್ರ ನೇಪಾಳ ॥
ಮಾಳವದೇಶದೊಳ್ವಿಹರಿಸಿ ಸರ್ವರ । ಪಾಲಿಸಿದರು ಬೋಧೆದೋರಿ ॥ ೬೮ ॥

ಹುರುಮುಂಜಿ ಕಾಶಿ ಹವಿಸ್ಮಾರ ಬಂಗಾಳ ಬ । ರ್ಬರ ಸಿಂಧು ಪಲ್ಲವ ಮಗಧ ॥
ತುರುಕಾಣ್ಯ ಮೊದಲಾದ ದೇಶದೊಳ್ವಿಹರಿಸಿ । ಸುರಿದರಾತ್ಮಾಮೃತರಸವಾ ॥ ೬೯ ॥

ನವ್ಯಪೂಜೆಯ ಮಾಡಿ ನಮಿಸುತಲ್ಲಲ್ಲಿ ಕ । ರ್ತವ್ಯವ ಪ್ರಜೆ ಬೆಸಗೊಳಲು ॥
ದಿವ್ಯನಿನಾದದೊಳಾತ್ಮಸಿದ್ಧಿಯ ತೋರಿ । ಭವ್ಯರನುದ್ಧರಿಸಿದರು ॥ ೭೦ ॥
ಆತಿವಾಕ್ಯವೇನಿಂತು ಬಹುಕಾಲ ಧರ್ಮ ಪ । ದ್ಧತಿಯ ಪ್ರಕಾಶವ ಮಾಡಿ ॥
ಸ್ಥಿತಿಮುಟ್ಟಲಾದುದಾಯುಷ್ಯಕೆಂಬಾಗ ಭೂ । ನುತಯೋಗಗೈದರೇನೆಂಬೆ ॥ ೭೧ ॥
ಬಂದರ್ಕಕೀರ್ತಿನಾಥನು ರೂಪ್ಯಗಿರಿಯೊಳಾ । ರ್ಪಿಂದ ನಿರ್ಘಾತಿಯನಿಕ್ಕಿ ॥
ಸಂದನು ಮುಕ್ತಿಗೆ ಜೋಲಿಮಾತೇನೊಲ । ವಿಂದ ಪೂಜಿಸಿ ಪೋದನಿಂದ್ರಾ ॥ ೭೨ ॥
ಕೆಲವು ದಿನದ ಮೇಲೆ ಬಂದಾದಿನಾಥನಾ । ಸ್ಥಳದಿ ನಿರ್ಘಾತಿಯನಿಕ್ಕಿ ॥
ಘಳಿಲನೆ ಮುಕ್ತಿಗೆ ಸಂದನು ಕಡೆಯು ಮಂ । ಗಲವೆಂಬುದೆಲ್ಲರಂತಾಯ್ತು ॥ ೭೩ ॥
ವೃಷಭನಾಥನು ಹಂಸನಾಥ ಮುಂತಾದರು । ಝುಷಕೇತುಸುತರಾದಿಯಾದ ॥
ಋಷಿಗಳು ಗಿರಿವನನದಿಗಳೊತ್ತಿನೊಳು ನಿ । ಸ್ತುಷಸಿದ್ಧಿವಡೆದರಲ್ಲಲ್ಲಿ ॥ ೭೪ ॥
ಅಕ್ಕಗಳಜ್ಜಿಗಳೆಲ್ಲರು ಮನಮುಟ್ಟಿ । ಚೊಕ್ಕ ತಪಸುಮಾಡಿ ತಮ್ಮ ॥
ಸಿಕ್ಕಿನ ಹೆಣ್ಣುಜನ್ಮವ ನೀಗಿ ಗಂಡಾಗಿ । ಪೊಕ್ಕರು ಸ್ವರ್ಗಲೋಕವನು ॥ ೭೫ ॥
ಪುರುನಾಥ ಸಂದ ಮೋಲ್ಚಕ್ರಧರನ ಮಾತೆ । ಯರು ಸುರರಾದರಂತಿರಲಿ ॥
ಭರತೇಶ ಸಂದ ಮೇಲಂಗನಾರತ್ನಕೆ । ಪುರುಷತ್ವವಾಯ್ತು ಸ್ವರ್ಗದೊಳು ॥ ೭೬ ॥
ತರದಿಂದ ಕಚ್ಛ ಮಹಾಕಚ್ಛರಾದೀಶ । ರ್ತೆರಳಿದ ಮೇಲೆ ಸಾಗಿದರು ॥
ಸ್ಮರ ನಮಿ ವಿನಮಿವೃಷಭಸೇನರಾ ಚಕ್ರ । ಧರನೆಯ್ದುಲೆಯ್ದಿದರ್ಮತ್ತೆ ॥ ೭೭ ॥
ಆದೀಶ ಸಂದಾಗ ಪ್ರಣಯಚಂದ್ರಮನು ಲೀ । ಲೋದಯಗುಣವಸಂತಕನು ॥
ಆದಿಚಕ್ರೇಶಾನುಮತದಿಂದ ದೀಕ್ಷಿತ । ರಾದರು ಮುಕ್ತಿಗೆಯ್ದಿದರು ॥ ೭೮ ॥
ದಕ್ಷಿಣ ನಾಗರ ಮೊದಲಾದ ಸಖರೆಣ್ಬ । ರಕ್ಷಣ್ಣದಳಪತಿ ಮಂತ್ರಿ ॥
ಮೋಕ್ಷಕೆಯ್ದಿದರು ಚಕ್ರೇಶನ ಬಿಟ್ಟು ಭಿ । ನ್ನಕ್ಷೇತ್ರದೊಳಗವರಿಹರೆ ॥ ೭೯ ॥
ಯೋಚಿಸಿಯಿವರವರೆಂದಾಡಲೇಕೆ ಮ । ರೀಚಿಯೊಬ್ಬನು ಹೊರತಾಗಿ ॥
ಶ್ರೀಚಕ್ರಧರಪುತ್ರನನುಜಾತರೆಲ್ಲರು । ಪ್ರಾಚುರ್ಯಮುಕ್ತಿಗೆಯ್ದಿದರು ॥ ೮೦ ॥
ಇದ್ದವಳಿಯಂದಿರು ಕೆಲರು ಸ್ವರ್ಗಕೆ ಕೆಲ । ರೆದ್ದರು ಕೈವಲ್ಯಪದಕೆ ॥
ಉದ್ದಂಡತಪದಿ ಹೆಣ್ಮಕ್ಕಳು ಗಂಡಾಗಿ । ಹೊದ್ದಿದರಮರಲೋಕವನು ॥ ೮೧ ॥
ವಿಮಲಕಮಲಭಾನುರಾಜರು ಮುಕ್ತಿಗೆ । ಗಮಿಸಿದರುಳಿದ ಬಾಂಧವರು ॥
ಅಮೃತಕೆ ಕೆಲಬರು ಸ್ವರ್ಗಕೆ ಕೆಲಬರು । ಕ್ರಮದಿಂದ ಸಾಗಿದರೆಲ್ಲ ॥ ೮೨ ॥
ದೇವಕುಲಕೆ ದೀಕ್ಷೆ ಯಿಲ್ಲಾಗಿ ಮಿಗೆ ಸಿಂಧು । ದೇವಗಂಗಾದೇವನವರು ॥
ಭಾವನನಗಲಿ ಜೀವಿಸಿದರಲ್ಲದೆ ತಮ್ಮ । ಭಾವೆಯರ್ವೆರಸಿ ದೀಕ್ಷಿಸರೆ ॥ ೮೩ ॥

ಮಾಗಧಾದಿಗಳೆಲ್ಲರದರಿಂದ ದೀಕ್ಷಿತ । ರಾಗದೆ ತಳುವಿದರೈಸೆ ॥
ಆ ಗುಣೋತ್ತಮನಾದಿಚಕ್ರಿಯನಗಲಿ ಭೂ । ಭಾಗದೊಳಾರು ಜೀವಿಪರು ॥ ೮೪ ॥
ಆ ರಾಯ ಗುರುಹಂಸನಾಥನ ಮೆಚ್ಚಿ ಜೇ । ತೋರಂಗದೊಳು ನೋಡುತಿಹನು ॥
ವಾರಿಧಿ ಕಡೆಯಾದ ಧರೆ ತನ್ನ ಮೆಚ್ಚಿತಾ । ತ್ಮಾರಾಮಗಾರು ಮೋಹಿಸರು ॥ ೮೫ ॥
ಅದು ಹೋಗಲನಿಲಸಾಮರ್ಥ್ಯದಿ ಮುಪ್ಪು ದೋ । ರದೆ ಬಾಳ್ವುದಚ್ಚರಿಯಲ್ತೆ ॥
ಸುದತಿಯರಿಂಗೆ ಮತ್ಸರಂದೋರದಂತಾಳ್ದ । ಚದುರಗಾರೆದೆಸೋಲದಿಹರು ॥ ೮೬ ॥
ಬಿಟ್ಟು ಸರ್ವರು ಚಿತ್ತಶುದ್ಧಿವಡೆದರೈಸೆ । ತೊಟ್ಟು ಮನಃಶುದ್ಧ ರಾರು ॥
ತೊಟ್ಟಿದ್ದು ಲಘುತೆಯೊಳ್ನಡೆವರುಂಟವನಂತೆ । ಗುಟ್ಟಿನೊಳ್ನಡೆವವರಾರು ॥ ೮೭ ॥
ಮುಂದರಿವಂಗ ಜಾಣ್ನುಡಿವಂಗ ಪ್ರಜೆಗಳ । ಮಂದಿಯು ಪೊರೆವುದೊಂದಂಗ ॥
ಇಂದೀವ ಸುಖ ಮುಂದಣಾತ್ಮಸಿದ್ಧಿಯು ನೋಟ । ವೊಂದೊಂದೆ ಸಾಲದೆ ನೃಪನ ॥ ೮೮ ॥
ಕೆಳೆಯರ ವಿನಯ ಮಂತ್ರಿಯೊಳಾದ ಯೋಚನೆ । ದಳಪತಿಮಾಗಧಾದಿಗಳ ॥
ಸಲುಗೆ ಸತ್ಕವಿಗಳ ದ್ವಿಜರ ಸತ್ಕಾರ ಭೂ । ತಳದೊಳಿನ್ನೊಬ್ಬರಿಗುಂಟೆ ॥ ೮೯ ॥
ಜನಕಜನನಿಯರ ಭಕ್ತಿ ತಂಗಿಯರಕ್ಕ । ರಿನಿಸು ಮೈದುನರೊಂದು ಸರಸಾ ॥
ತನುಜತನುಜೆಯರ ಲಾಲನೆ ಪೆಂಡಿರೊಂ । ದನುವೋದವಿವಗಲ್ಲದುಂಟೆ ॥ ೯೦ ॥
ಚಿಂತಿಸಿ ರಾಜ್ಯವನಾಳ್ದನೆ ತಪದೊಳು । ಪಿಂತಾಗಿ ಮುಕ್ತಿಗೆಯ್ದಿದನೆ ॥
ಸಂತೋಷದೊಳಗಿರ್ದು ಸಂತೋಷದೊಳೆ ಪೋದ । ಹೊಂತಕಾರಿಂಗೆ ಸಾಟಿಯಾರು ॥ ೯೧ ॥
ಮುಕ್ತರೆಲ್ಲರು ಸರಿಯಹುದಾದರೇನಾತ್ಮ । ಶಕ್ತಿಯನರಿದಿಲ್ಲಿ ಮೊದಲು ॥
ವ್ಯಕ್ತಭೋಗದೊಳಿರ್ದು ಕ್ಷಣಕೆ ಮುಕ್ತಿಗೆ ಸಂದ । ಯುಕ್ತಿಗೆನ್ನೆದೆಸೂರೆಹೋಯ್ತು ॥ ೯೨ ॥
ಅರಸಿಯರಿಬ್ಬರನಾಳ್ದಯ್ಯ ಸಾವಿರ । ವರುಷತಪಸು ಮಾಡಿ ಗೆಲ್ಪಾ ॥
ಅರರೆ ಲಕ್ಷಾಂಗನೆಯರನಾಳ್ವ ಕ್ಷಣದೊಳೀ । ಪರಿಯಾದುದಿದು ಚೋದ್ಯವಲ್ತೆ ॥ ೯೩ ॥
ಮರೆಯೇಕೆ ಪ್ರಥಮಾನುಯೋಗದಿ ಮುಖ್ಯವ । ಕುರಿತು ಶಲಾಕೆಗೆ ಬಂದ ॥
ಅರುವತ್ತುಮೂರರೊಳಾಯ್ದುಕೊಂಡೀ ಜಾಣ । ರೆರೆಯನ ಪೊಗಳ್ದೆನರ್ತಿಯೊಳು ॥ ೯೪ ॥
ಬಗೆ ಮೆಚ್ಚಿ ಹಂಸನಾಥನೊಳಿರ್ದು ಕ್ಷಣಕೆ ಮು । ಕ್ತಿಗೆ ಸಂದ ಭರತಭಾಸ್ಕರನಾ ॥
ಪೊಗಳದಿರ್ದಾಗ ರತ್ನಾಕರಸಿದ್ಧ ನಾ । ಡುಗನಲ್ಲದೇನಾತ್ಮಸುಖಿಯೆ ॥ ೯೫ ॥
ಶೃಂಗಾರಕಾಗಿ ಕಸ್ತುರ ಕಥೆಗೇಳ್ಪ ಜ । ನಂಗಳು ಕೆಡಬೇಡವೆಂದು ॥
ಅಂಗಸುಖಿಯು ಮೋಕ್ಷಸುಖಿಯು ಕಾವ್ಯವನಿಷ್ಟು । ಶೃಂಗಾರ ಕಟ್ಟಿ ಪೇಳಿದೆನು ॥ ೯೬ ॥
ದುರುಳರ ಪಾದರಿಯರ ನೀಚಸತಿಯರ । ವಿರಚಿಸಿತಿಲ್ಲ ಸಿಂಗರಕೆ ॥
ಭರತಚಕ್ರಿಯ ಪೇಳ್ದೆನವರ ಪೆಂಡಿರ ಪೇಳ್ದೆ । ಸ್ಮರಿಸಿದರೆಲ್ಲರ್ಗೆ ಪುಣ್ಯಾ ॥ ೯೭ ॥

ಈ ಕಥೆಯನು ನಾನು ಪೇಳ್ವಾಗ ಧರೆಯೊಳ । ನೇಕರು ಹರುಷವೇರಿದರು ॥
ಪೋಕರು ನಾಲ್ಕೆಂಟು ಮಂದಿ ಚಿತ್ತದೊಳತಿ । ವ್ಯಾಕುಲಬಟ್ಟರೆಂತೆನಲು ॥ ೯೮ ॥
ಕೀರ್ತಿಯ ಬಯಸಿ ನಾನುಸುರಿತಿಲ್ಲೆನಗೆ ಸ । ತ್ಕೀರ್ತಿ ತಾನೆ ಬರುತಿಹುದು ॥
ಕೀರ್ತಿಯ ಬಯಸಿ ಕಣ್ಗಸುರಾಗಿ ಕೆಲಬರು । ಧೂರ್ತರು ಪೇಚಾಡುತಿಹರು ॥ ೯೯ ॥
ತೊಡಗುವರ್ತಾವು ಕವಿತ್ವವ ಕಡೆಗದು । ನಡೆಯದು ಕಿವಿಗೆ ಶೋಭಿಸದು ॥
ಬಿಡು ಹೊಸಕವಿತೆಯನೆಂದು ಪೂರ್ವದ ಶಾಸ್ತ್ರ । ಗಡಬಡೆಮಾಡುವರೊಡನೆ ॥ ೧೦೦ ॥
ಅವರೊಂದುತಿಂಗಳೋದಿದ ಶಾಸ್ತ್ರ ನನಗೊಂದು । ದಿವಸದೊಳವಗತಿಯಹುದು ॥
ತವೆ ಬಾಹ್ಯರಚನೆಯೊಳೇನೆಂದು ಬಿಟ್ಟನು । ಭವಿಸುತಿಹೆನು ಹಂಸನೊಳಗೆ ॥ ೧೦೧ ॥
ಹರವರನುಡಿಯಿಲ್ಲದಾನಿರುತಿರ್ದೆನುಂ । ಡುರುಳಿ ಭಟ್ಟಾರಕರಂತೆ ॥
ನೆರಪಿ ಹೊತ್ತಗೆಗಳ ಹೊರೆಗಟ್ಟಿ ಭವಸೇನ । ಗುರುಗಳಂತವರಾಡುತಿಹರು ॥ ೧೦೨ ॥
ಮೆಯ್ಯೊಳಿರ್ದಾತ್ಮನ ಬತ್ತಲೆ ಮಾಡಿ ನಾ । ನೊಯ್ಯನೀಕ್ಷಿಸಿದರೆ ತಾವು ॥
ಮೆಯ್ಯ ಬತ್ತಲೆಮಾಡಿ ಮನವ ಕತ್ತಲೆಮಾಡಿ । ಹುಯ್ಯಲಿಡುತ ಸುತ್ತುತಿಹರು ॥ ೧೦೩ ॥
ಏನೇನು ಪರಿಯೊಳಾಡಿದರು ತವಗೆ ಕೀರ್ತಿ । ಹಾನಿಯಾಗಿಯೆ ಬಂದಿತದಕೆ ॥
ಬೇನೆಬಟ್ಟೊಡನೆಮ್ಮ ಕಾವ್ಯವ ಜರೆದರ । ಜ್ಞಾನಿಗಳಲ್ಲಸಲ್ಲೆಂದು ॥ ೧೦೪ ॥
ತರ್ಕ ಪುರಾಣ ತಳ್ಳಿಯ ತೋರಿ ಬೆದೆಬೆಂದ । ರರ್ಕನ ಪಳಿದ ಗೂಗೆಯೊಲು ॥
ಮಾರ್ಕೊಳ್ಳದಾನು ಮೋನದೊಳಿರ್ದೆ ಬುಧರು ರಾ । ಜರ್ಕಳೆ ನೂಂಕಿದರವರಾ ॥ ೧೦೫ ॥
ಧ್ಯಾನಕೆ ಬೇಸರಾದಾಗ ನನ್ನಾತ್ಮಲೀ । ಲಾನುವೃದ್ಧಿಗೆ ಪೇಳ್ದೆನೈಸೆ ॥
ನಾನೊಬ್ಬರೊಡನೆ ಮತ್ಸರಕೆ ಪೇಳ್ದವನಲ್ಲ । ಮೋನದೊಳಿಹೆನದು ಸಾಕು ॥ ೧೦೬ ॥
ಹಂಸನಾಥನ ಶಕ್ತಿಯೊಳು ಪೇಳ್ದ ಕಾವ್ಯಕೆ । ಸಂಶಯವುಂಟೆ ಲೋಕದೊಳು ॥
ನಾಂ ಸೂಚಿಸದ ಮುನ್ನ ಮುನಿಗಳು ನೃಪರು ವಿ । ದ್ವಾಂಸರು ಕೊಂಡೊಯ್ದರೊಲಿದು ॥ ೧೦೭ ॥

ಕ್ಷತ್ರಿಯವಂಶಜನೆಂದು ಕರ್ಣಾಟ ಸು । ಕ್ಷೇತ್ರನೆಂದಣ್ಣಗಳೆಂದು ॥
ಧಾತ್ರಿ ನುಡಿವುದವು ನನ್ನ ಸೊಮ್ಮಲ್ಲೆನ್ನ । ಗಾತ್ರದ ಸೊಮ್ಮೆಂಬೆ ನಾನು ॥ ೧೦೮ ॥
ಸಿದ್ಧಪದಕೆ ಸೋತೆನಾಗಿ ರತ್ನಾಕರ । ಸಿದ್ಧನೆಂದೆನಲೊಲ್ವೆನೊಮ್ಮೆ ॥
ಶುದ್ಧನಿಶ್ಚಯದಲ್ಲಿ ನಿಚ್ಚನಿರಂಜನ । ಸಿದ್ಧನೆಂದಾನಿರುತಿಹೆನು ॥ ೧೦೯ ॥
ಆಮಯ ಜನನ ಮರಣವುಳ್ಳ ಜನಕರ । ನಾಮುವ ಪೇಳ್ವೆರುರ್ವಿಯೊಳು ॥
ಶ್ರೀಮಂದರಸ್ವಾಮಿ ನನ್ನಯ್ಯನೆಂದಾನು । ನೇಮಿಸಿ ಸುಖವಡೆದಿಹೆನು ॥ ೧೧೦ ॥
ಅಂತಸ್ತವೊಂದುಂಟು ಸೂಚಿಸುವೆನು ಸುಸಿ । ದ್ಧಾಂತವ ಕಂಡದರೊಳಗಾ ॥
ಭ್ರಾಂತಿಯ ಲೋಕಕೆ ಹರುಹದೆ ನಾನೆಯೀ । ಕಾಂತದೊಳಾಚರಿಸುವೆನು ॥ ೧೧೧ ॥

ಚರಿತೆಯೊಳೊರೆದುವಿವಧಿಕವಲ್ಲಿವು ಒಚ್ಚ । ತರದ ರಹಸ್ಯಗಳಿನ್ನು ॥
ಪರಮರಹಸ್ಯವುಂಟಾತ್ಮನ ಮಾಹಾತ್ಮ್ಯ । ಪರಿಮಿತವಲ್ಲದಂತಿರಲಿ ॥ ೧೧೨ ॥

ದೀಕ್ಷಾಗ್ರಗುರು ಚಾರುಕೀರ್ತಿಯೋಗೀಶ್ವರ । ಮೋಕ್ಷಾಗ್ರಗುರು ಹಂಸನಾಥಾ ॥
ಅಕ್ಷುಣ್ಣವ್ಯವಹಾರನಿಶ್ಚಯದೊಳಗತಿ । ದಕ್ಷ ರತ್ನಾಕರಸಿದ್ಧಾ ॥ ೧೧೩ ॥

ದೇಶಿಗಣಾಗ್ರಣಿ ಚಾರುಕೀರ್ತ್ಯಾರ್ಯಚಾರ್ಯ । ಶ್ರೀಶುಚಿದೀಕ್ಷೆಯಿತ್ತಾಗ ॥
ಆ ಶಾತಿದೂರ ಶ್ರೀಗುರುಹಂಸನಾಥ ಪ್ರ । ಕಾಶದೊಳ್ನೆಲಸಿ ರಕ್ಷಿಸಿದಾ ॥ ೧೧೪ ॥

ಗುರುಹಂಸನಾಥನಾಜ್ಞೆಯೊಳು ಸಿದ್ಧಾಂತದ । ತಿರುಳರಿದಾತ್ಮಲೀಲಾರ್ಥ ॥
ಭರತೇಶವೈಭವವೆಂಬ ಕಾವ್ಯವನಿದ । ನೊರೆದೆನು ಸುಖಿಗಳಾಲಿಪುದು ॥ ೧೧೫ ॥

ಬೇಕಾದರಾಲಿಸುವುದು ಬೇಡವಾಗೆ ಪ । ರಾಕುಮಾಡುವುದೆನಗಲ್ಲಿ ॥
ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿ । ರಾಕಾಂಕ್ಷಿ ಸಾಕದಂತಿರಲಿ ॥ ೧೧೬ ॥

ಭೋಗವಿಜಯ ಪೂರ್ವವಾಗಿ ದಿಗ್ವಿಜಯ ಸು । ಯೋಗವಿಜಯ ಮೋಕ್ಷವಿಜಯ ॥
ಈಗರ್ಕಕೀರ್ತಿವಿಜಯವಾಗೆ ಮನಸಿಗೆ । ಲಾಗಾಯ್ತು ಪಂಚಕಲ್ಯಾಣಾ ॥ ೧೧೭ ॥

ಪಂಚವಿಜಯುಗಳ ಕೇಳ್ದರೋದಿದರೆ । ಹಳಂಚಿ ಪ್ರಭಾವನೆಮಾಡೆ ॥
ಪಂಚಕಲ್ಯಾಣಪೂರ್ವಕವಾಗಿ ಮುಕ್ತಿಗೆ । ಮುಂಚುವರಿದು ಸುಸಿದ್ಧಾಂತಾ ॥ ೧೧೮ ॥

ಭರತೇಶವೈಭವಕೆಣೆಯೆ ಎಂದರ್ತಿಸೆ । ಭರತೇಶನಂತಾಳ್ದು ಧರೆಯ ॥
ಭರತೇಶ ಸಂದಂತೆ ಸಲ್ವರೆಂಬೆಡೆಗೆ ಸ । **ರ್ವರ ಮೋಕ್ಷಸಂಧಿ** ಸುಗಂಧಿ ॥ ೧೧೯ ॥

ಈ ಜಿನಕಥೆಯನು ಕೇಳಿದವರ ಪಾಪ । ಬೀಜನಿರ್ನಾಶನವಹುದು ॥
ತೇಜವಹುದು ಪುಣ್ಯವಹುದು ಮುಂದೊಲಿದಪ । ರಾಜಿತೇಶ್ವರನ ಕಾಣುವರು ॥ ೧೨೦ ॥

ಪ್ರೇಮದಿಂದಿದನೋದಿದರೆ ಪಾಡಿದರೆ ಕೇಳ್ದ । ರಾಮೋದವೈದುವರವರು ॥
ನೇಮದಿ ಸುರರಾಗಿ ನಾಳೆ ಶ್ರೀಮಂದರ । ಸ್ವಾಮಿಯ ಕಾಣ್ಬರರ್ತಿಯೊಳು ॥ ೧೨೧ ॥

ವೃಷಭಮಾಸದಿ ತೊಡಗಿತು ಕುಂಭಮಾಸ ಸ । ದ್ವಿಷಯದಿ ಕೃತಿ ಪೂರ್ಣವಾಯ್ತು ॥
ವೃಷಭಾಂಕ ಹಂಸನಾಥನೆ ಜಯ ಪರಮಪೂ । ರುಷನೆ ಚಿದಂಬರಪುರುಷಾ ॥ ೧೨೨ ॥

---

ಸರ್ವರ ಮೋಕ್ಷಸಂಧಿ ಸಂಪೂರ್ಣಂ.

---

॥ ಪಂಚಮಕಲ್ಯಾಣಂ ಸಮಾಪ್ತಂ ॥

**ಭರತೇಶವೈಭವಂ ಸಂಪೂರ್ಣಂ.**



